# ದಾಸಕೂಟ

[ ಸಾಮಾಜಿಕ ಕಾದಂಬರಿ ]

ಪ್ರತಿಭಾ ಗ್ರಂಥಮಾಲೆ, ಧಾರವಾಡ

ಮುದ್ರಕರು ಮತ್ತು ಪ್ರಕಾಶಕರು :

ಭಾ. ವೆಂ. ಫಾಣೇಕರ

**ಪ್ರತಿಭಾ ಮುದ್ರಣ, ಧಾರವಾಡ.**

ಮೊದಲ ಮುದ್ರಣ ೧೯೫೦

ಎರಡನೆಯ ಮುದ್ರಣ ೧೯೫೭

**ಬೆಲೆ : ಒಂದೇ ರೂಪಾಯಿ**

# ದಾಸಕೂಟದ ಹೊಸ್ತಿಲಲ್ಲಿ—

ಇಂತಹ ಗ್ರಂಥಕ್ಕೆ ರೂಢಿಯಲ್ಲಿ ಕೇವಲ ಆಧ್ಯಾತ್ಮಿಕ ಧೋರಣೆಯನ್ನು ಸೂಚಿಸುವ ದಾಸಕೂಟವೆಂಬ ಹೆಸರನ್ನಿಕ್ಕಿ ಭ್ರಮಿಸಿ ಬೆಚ್ಚಿ ಬೀಳಿಸಿದುದಕ್ಕೆ ಓದುಗರ ಮನ್ನಣೆ ಬೇಡುವದು ನನ್ನ ಮೊದಲನೆಯ ಕರ್ತವ್ಯ. ವೈದಿಕ ರೀತಿಯ ಬಳಕೆಯ ಅರ್ಥದ ವ್ಯಾಸ–ದಾಸಕೂಟಗಳ ವಿಚಾರವು ಈ ದಾಸ ಕೂಟಕ್ಕೆ ಅನೆಷ್ಟೋ ದೂರ. ಬರೀ ದೂರವಷ್ಟೇ ಏಕೆ, ಅದಾವಾವ ಸಮ್ಮಂಧವೂ ಸಹ ಇಲ್ಲ. "ದಾಸ್ಯದಲ್ಲಿರುವವರ ಒಂದು ಕೂಟ" ಎಂದಿಷ್ಟೆ ದಾಸಕೂಟ ವೆಂಬುದರಿಂದ ಬಳಸಿಕೊಂಡ ಅರ್ಥ ಇಲ್ಲಿ.

ದಾಸ್ಯ ಮಾನವನ ಸ್ಥಿತಿಗತಿಗಳನ್ನಷ್ಟೆ ಆವರಿಸಬಲ್ಲುದಲ್ಲದೆ ಮನೋ ವೃತ್ತಿಗೂ ಅಂಟಿಗೊಳ್ಳುವ ಮಹಾರೋಗ. ದಾಸ್ಯಕ್ಕೆ ಕ್ಷೇತ್ರಗಳೂ ಬೇಡಿ ದಷ್ಟು. ಗುಡ್ಡದಂತಹ ರಾಷ್ಟ್ರದ ಮೇಲೆ ಗೇಣುದ್ದನ ರಾಷ್ಟ್ರ ಹೇರುವ ದಾಸ್ಯ ಒಂದು ಬಗೆಯದಾದರೆ, ಸಮಾಜದಾಸ್ಯ, ಸಂಪ್ರದಾಯದಾಸ್ಯ, ಅಧಿಕಾರ ದಾಸ್ಯ, ವಿಲಾಸದಾಸ್ಯ ಮುಂತಾದುವು ಮಾನಸಿಕ ಪ್ರಪಂಚಕ್ಕೆ ಬಡಿಯುವ ಮಹಾ ಭೂತಗಳು. ಇವನ್ನು ಕೆಣಕುವ ಮಂತ್ರವೇ ಈ ದಾಸಕೂಟವೆಂದು ಹೇಳಿದರೆ ಸದ್ಯಕ್ಕೆ ಸಾಕು.

ಹೊಸ ಹಾದಿಯಲ್ಲಿ ಹರಿಯಲು ಅಂಜಿ ಅನುಮಾನಿಸಿ ಹಿಮ್ಮೆಟ್ಟುವದು ಬುದ್ಧಿಯ ಜಡಾವಸ್ಥೆ. ವಿಚಾರಶಕ್ತಿಯನ್ನು ವಂಚಿಸುವದು ಬೇರೂರಿದ ನಂಬಿಕೆಗಳು ಹೂಡುವ ಸಂಚು. ಅಸ್ಥಿಗತವಾದ ನಂಬಿಕೆ ವಿಶ್ವಾಸಗಳ ಹಿಡಿತವೇ ವಿಚಾರಶಕ್ತಿಗೆ ಓರಿಗೊಡಲಿ. ಹಳೆಯ ನಂಬಿಕೆಗೂ ಹೊಸ ವಿಚಾರಕ್ಕೂ ಸಹಜವಾಗಿ ಬೆಳೆಯಲೇ ಬೇಕು — ಹುಚ್ಚು ಮದುವೆಯ ಸಮ್ಮಂಧ. ವಿಶ್ವಾಸದ ದವಡೆಯಿಂದ ಹೊರಬೀಳುವ ವರೆಗೂ ವಿಚಾರಕ್ಕೆ ಆಸ್ಪದವಿಲ್ಲ; ವಿಚಾರ ತಲೆದೋರುವ ವರೆಗೂ ವಿಶ್ವಾಸದ ಉರುಲು ತಪ್ಪು ವಂತಿಲ್ಲ. ಇಂದು ಲೋಕಪ್ರಿಯತೆ ಪಡೆದಿರುವ—ತಪ್ಪೋ ಒಪ್ಪೋ—ಹಲವು 'ತ್ವ'ಗಳನ್ನು ಟೀಕಿಸುವದೂ ಒಂದು ಸಾಹಸವೇ. ಸ್ವಸಂಪೂರ್ಣತೆಯ ಜಂಬವನ್ನು ಯಾವ 'ತ್ವ'ವೂ ಕೊಚ್ಚಿಕೊಳ್ಳಲಾರದು. ಎಲ್ಲ ದೇಶ ಕಾಲ ಸ್ಥಾನಗಳಲ್ಲಿಯೂ ಪ್ರಯೋಗಾರ್ಹವಾಗಲಾರದು. ಅತ್ಯವಶ್ಯವಾದ ಹಲವು

ಭೂಮಿಕೆಗಳಿಗೆ ಅಡಚಣೆಯಾದಾಗ ಅದೇ ' ತ್ರ'ವು ಬಾಯಿ ಬಿಡಲೇಬೇಕು, ಸೋಲನ್ನು ಒಪ್ಪಿಕೊಳ್ಳಲೇಬೇಕು. ಈ ಅಪಜಯವನ್ನು ಬೆರಳು ಮಾಡಿ ತೋರಿಸಬಹುದು ಈ ' ದಾಸಕೂಟ '. ಭಾರತದ ಜೀವನದಲ್ಲಿ ಹಿಂದಿನ ಹತ್ತಾರು ವರ್ಷಗಳಲ್ಲಿ ನಡೆದ ಸಿಹಿ ಕಹಿ ಘಟನೆಗಳನ್ನು ನೆನೆದಂತೆಲ್ಲ ಅಲೆಗಳಂತೆ ಮೇಲಿಂದ ಮೇಲೆ ತಲೆ ಎತ್ತುತ್ತಿದ್ದ ನನ್ನ ವಿಚಾರಗಳನ್ನು ತಜ್ಞರ ಮುಂದಿಡಬೇಕೆಂಬ ನನ್ನ ಆಶಯದ ಕೈಗೂಡುವಿಕೆಯೇ ಈ ದಾಸಕೂಟದ ಹುಟ್ಟು. ಇಡೀ ಜಗತ್ತಿನ ತೊಡರು ತೊಡಕುಗಳನ್ನು ಬಿಡಿಸಿ ಬಾಳಿನಲ್ಲಿಯ ಮುದ್ದೆ ಮುಗ್ಗಟ್ಟುಗಳನ್ನು ಬಗೆಹರಿಸುತ್ತೇನೆಂದು ಕೋಟೆಯ ಮೇಲಿನಿಂದ ಕೂಗುವ ಪಿತ್ತಮನೋವೃತ್ತಿಯು ದಾಸಕೂಟದ್ದಲ್ಲ. ತೊಡಕನ್ನು ತಿಳಿಯುವದು ಬಿಡಿಸುವದಕ್ಕೆ ಮೊದಲನೆಯ ಮೆಟ್ಟಲು. ಇಷ್ಟೇ ಅದರಲ್ಲಿ ಸಾಧಿಸಿದುದು ಎಂದರೂ ಕಡಿಮೆ ಹೇಳಿದಂತಾಗದು ಎಂದು ಒಪ್ಪಬೇಕಾದೀತು. ದಾಸ್ಯ ವಿಮೋಚನೆಗೆ ಅಲ್ಲಲ್ಲಿ ಸಲಹೆ ಸೂಚನೆಗಳನ್ನು ಸಹೃದಯಿಗಳು ಕಂಡರೂ ಕಾಣಬಹುದು; ಕಾಣದಿರಲೂ ಸಾಕು.

ಪದ್ಯ, ಪ್ರಬಂಧ, ನಾಟಕ, ಚಿಕ್ಕ ಕತೆಗಳ ಜಾತಿಗೆ ಸೇರಿದುದಲ್ಲವಾದುದರಿಂದ ಇದನ್ನು ಸ್ಥೂಲವಾಗಿ ಕಾದಂಬರಿಯ ಕುಲಕ್ಕೆ ಯಾರಾದರೂ ಸೇರಿಸಬಹುದೇನೋ? ಆದರೆ ಕಟ್ಟು, ರೀತಿ, ಓಟಗಳಲ್ಲಿ ಕಾದಂಬರಿಯ ಶಿಸ್ತನ್ನು ಆವಶ್ಯವಿದ್ದಲ್ಲೆಲ್ಲ ದಾಟಿ ವಿಚಾರಸರಣಿಯ ಹಿಂದೆ ಓಟ ಬಿಟ್ಟಿದೆ. ಇದನ್ನು ಚರಿತ್ರೆ ಎಂದು ಕರೆವುದು ಹೆಚ್ಚು ಸೂಕ್ತವೆನಿಸಬಹುದು. ಘಜನಿ ಮಹಮ್ಮದನ ವಿಜಯಯಾತ್ರೆಗಳು, ಇಬ್ರಾಹೀಂ ಲೋಡಿಯು ಓಡಿ ಹೋಗುವುದು, ಚಿಕ್ಕ ಪುಟ್ಟ ರಾಜರ, ದೊಡ್ಡ ಪುಂಡ ಕಳ್ಳರ ಹುಟ್ಟು ಸಾವುಗಳು, ಆದ್ಯಂತ ತೇದಿಗಳು ಇದ್ದರೇ ಅದು ಚರಿತ್ರೆಯೆಂಬ ನಿಯಮವು ಎಲ್ಲಿಯೂ ಇಲ್ಲ. ಹತ್ತು ವರುಷಗಳ ಹಲವು ಘಟನೆಗಳಿಂದ ಓರ್ವ ವಿಚಾರವಂತ ವ್ಯಕ್ತಿಯ ಬಾಳಿನ ಮೇಲೆ ಆದ ಪರಿಣಾಮದ, ಮತಿವಂತನ ಮನಸ್ಸಿನ ಮೇಲೆ ಮೂಡಿ ಓಡಿದ ವಿಚಾರಗಳ, ಎಂದಿನಿಂದಲೋ ಇಂದಿನ ವರೆಗೂ ಶನಿಯಂತೆ ಬೆನ್ನೇರಿ ಕುಳಿತಿರುವ ಹಲವು ಹುಚ್ಚು ನಂಬಿಕೆಗಳ ಕಷ್ಟದ ಕತೆಯೇ ಈ ದಾಸಕೂಟ. ಇದೊಂದು ಉಮೇಶನಂತಹ ಸಾಮಾನ್ಯ ವ್ಯಕ್ತಿಯ ಜೀವನಚರಿತ್ರೆ—ಅವನ ವಿಚಾರಸರಣಿಯ ಚರಿತ್ರೆ. ಇದರ ಬೆನ್ನುರಿಯಲ್ಲಿ ಓದುಗರು ಕಾಣುವುದು

ವೈಯಕ್ತಿಕ ಜೀವನದಕಿಂತಲೂ ಹೆಚ್ಚು ಸಾಮಾಜಿಕ ಮತ್ತು ರಾಜಕೀಯ ಜೀವನವನ್ನು. ಕತೆಯು ಬರೀ ಹಿಮ್ಯಾಳ—ಪಾತ್ರಗಳು ಕೇವಲ ನಿಮಿತ್ತ ಮಾತ್ರ. ಚರ್ಚಾತ್ಮಕ ವಿಷಯಗಳ ತಿಕ್ಕಾಟ ಹೂಡಿ ವಿಚಾರಶಕ್ತಿಯನ್ನು ಪ್ರಜ್ವಲಿಸುವುದೇ ದಾಸಕೂಟದ ಸಾಹಸವಾಗಲಿ. ಓದುಗರನ್ನು ವಿವಿಧ ಆವೇಶಗಳಲ್ಲಿ ಅದ್ದಿ ಅದ್ದಿ ಮೇಲೆತ್ತಿ, ಹೇಗಿದೆ ಎಂದು ಮುಖ ನೋಡುವ ಧೋರಣೆ ಸುತರಾಂ ಇಲ್ಲ. ಮನಸ್ಸಿನ ಆಳವು ಮಾನವನ ಅಳತೆಗಳ ಆ ಬದಿ. ವಿಚಾರಶಕ್ತಿಯ ಕಡೆಗೋಲಿನಿಂದ ಮನದ ಮಥನವಾಗ ಬೇಕು. ಒಡಲಿನಲ್ಲಿದ್ದುದು ಹೊರಗೆ ತೇಲಬೇಕು. ಅಮೃತದೊಂದಿಗೆ ವಿಷಕ್ಕೂ ಸ್ವಾಗತವೇ.

ಕೊನೆಯದಾಗಿ ಅನೇಕ ಕೆಲಸಗಳಲ್ಲಿ ಬಿಡುವು ಮಾಡಿಕೊಂಡು, ನನ್ನ ಈ ಕೃತಿಗೆ ಮುನ್ನುಡಿಯನ್ನು ಬರೆದುಕೊಟ್ಟು ಉಪಕರಿಸಿದ ಶ್ರೀ. ಅ. ನ. ಕೃಷ್ಣ ರಾಯರಿಗೆ ನಾನು ಚಿರಋಣಿ.

ಇಂತು

**ಬಳ್ಳಾರಿ ಬೀಚಿ**

# ಪರಿವಿಡಿ

# ಮುನ್ನುಡಿ

ಪ್ರಾಚೀನ ಕನ್ನಡ ಸಾಹಿತ್ಯದ ಅಪಾರ ಗ್ರಂಥರಾಶಿಯನ್ನು ಹುಡುಕಿ ನೋಡಿದರೆ ನಮಗೆ ಸಿಕ್ಕುವ ಹಾಸ್ಯದ ಭಾಗ ತೀರ ಸ್ವಲ್ಪ. ಅಲ್ಲಿ ಇಲ್ಲಿ ಒಂದು ನಗೆ ಮಾತು; ಅಲ್ಲಿ ಇಲ್ಲಿ ಒಂದು ಕೀಳು ಪಾತ್ರ—ಅದರಲ್ಲಿ ಬಾಯಲ್ಲಿ ಅಸಂಬದ್ಧ ಪ್ರಲಾಪ. ಸಂಸ್ಕೃತ ನಾಟಕಕಾರರಿಗೆ ಅತಿ ಪ್ರಿಯನಾದ ಬ್ರಾಹ್ಮಣ ವಿದೂಷಕ—ಅವನ ಹಿಂಗಲಾಗದ ಹಸಿವಿನ ಚಿತ್ರವರ್ಣನೆ. ನವರಸಗಳಲ್ಲಿ ಹಾಸ್ಯಕ್ಕೂ ಒಂದು ಸ್ಥಾನವನ್ನಿತ್ತು, ಅದರ ಅಧಿಷ್ಠಾನ ದೈವ ಗಣಪತಿ ಎಂದು ಸಾರಿದ ಪ್ರಾಚೀನ ಸಾಹಿತಿಗಳು, ರಸಜ್ಞರು ಏತಕ್ಕೆ ಹಾಸ್ಯವನ್ನು ಕಡೆಗಾಣಿಸಿದರೋ ಬಗೆಹರಿಯದ ಸಮಸ್ಯೆ. ಇಂಗ್ಲಿಷ್ ಸಾಹಿತ್ಯ—ಸಂಸ್ಕೃತಿಯ ಪ್ರಭಾವದಿಂದ ನಮಗಾಗಿರುವ ಉಪಕಾರಗಳಲ್ಲಿ ನಗೆನೋಟ ಬೆಳೆದುದೂ ಒಂದು. ಕೀರ್ತಿಶೇಷ ಕೈಲಾಸಂ ಇಂಗ್ಲಿಷ್ ರಸಹಾಸ್ಯ ಸಾಹಿತ್ಯ ಸಾಗರದಲ್ಲಿ ಮುಳುಗಿ ಎದ್ದು, ಅದನ್ನು ಬಹು ಜಾಣ್ಮೆಯಿಂದ ಕನ್ನಡ ಜನ ಜೀವನಕ್ಕೆ ಹೊಂದಿಸಿಕೊಂಡರು.

ಇಂಗ್ಲಿಷ್ ಹಾಸ್ಯ ಪ್ರಕಾರದ ಪ್ರಭಾವದಿಂದ ರೂಪುಗೊಂಡರೂ ಅದರ ಅನುಕರಣೆಗೆ ಹೋಗದ 'ಸಹಜ ಕೋಮಳ'ವಾದ ಕನ್ನಡ ಹಾಸ್ಯ ಪದ್ಧತಿಯನ್ನು ಬೆಳೆಸುತ್ತಿರುವ ರಸಿಕರಲ್ಲಿ ಬಳ್ಳಾರಿ ಬೀಚಿಯವರೊಬ್ಬರು ಆಗಿದ್ದಾರೆ. ಅವರ 'ರೇಡಿಯೋ ನಾಟಕಗಳು', 'ಮಾತ್ರೆಗಳು' ಅವರ ಕ್ರಿಯಾಶಕ್ತಿಯ ಕುರುಹುಗಳಾಗಿವೆ. 'ವಿಶಾಲ ಕರ್ನಾಟಕ' ದೈನಂದಿನ ಪತ್ರಿಕೆಯಲ್ಲಿ ಅವರು ಬರೆಯುತ್ತಿರುವ 'ಕೆನೆಮೊಸರು' ಮತ್ತು 'ರೈತ' ವಾರಪತ್ರಿಕೆಯಲ್ಲಿ ಅವರು ಬರೆಯುತ್ತಿರುವ 'ತಿಮ್ಮನ ತಲೆ' ರಸಕಾರಂಜಿಗಳಾಗಿವೆ.

ಬೀಚಿಯವರ ಹಾಸ್ಯ ಕೃತಿಗಳಲ್ಲಿ ಇನ್ನೊಂದು ವೈಶಿಷ್ಟ್ಯ ಕಾಣಬಹುದು. ರಾಜಕೀಯ ರಂಗದ ಚಲನವಲನಗಳನ್ನು ಹಾಸ್ಯದ ಕ್ಷ ಕಿರಣಗಳಿಂದ ನೋಡುವುದು ನಮಗೆ ತೀರ ಹೊಸದು. ಈ ಕೊರತೆಯನ್ನು ನಿವಾರಿಸಲು ಬೀಚಿ ಪಣ ತೊಟ್ಟಿರುವುದಲ್ಲದೆ ಬಹಳ ದಕ್ಷತೆಯಿಂದಲೂ ದುಡಿಯುತ್ತಿದ್ದಾರೆ.

'ದಾಸಕೂಟ' ಕನ್ನಡದಲ್ಲಿ ಹಾಸ್ಯಪ್ರಧಾನವಾದ ಮೊಟ್ಟ ಮೊದಲನೆಯ ಕಾದಂಬರಿಯೆನ್ನಬಹುದು. ಸರ್ವಾಂಟಿಸ್ ಹಾಸ್ಯದ ಹೊದಿಕೆಯನ್ನುಪಯೋಗಿಸಿಕೊಂಡು, ಸಮಕಾಲೀನ ಸಾಮಾಜಿಕ, ರಾಜಕೀಯ, ಧಾರ್ಮಿಕ ಜೀವನವನ್ನು ತನ್ನ ' ಡಾನ್ ಕ್ವಿಕ್ಸೋಟ್ ' ಕಾದಂಬರಿಯಲ್ಲಿ ವಿಡಂಬನ ಮಾಡಿರುವಂತೆ ಬೀಚಿಯವರು 'ದಾಸಕೂಟ' ದಲ್ಲಿ ನಮ್ಮ ಇಂದಿನ ಸಾಮಾಜಿಕ, ಧಾರ್ಮಿಕ, ರಾಜಕೀಯ ಜೀವನದ ಕಸರನ್ನು ಹೊರಗೆಡವಿದ್ದಾರೆ.

ಕಥಾಕ್ಷೇತ್ರ ಬಳ್ಳಾರಿ. ರಾವ್‌ಸಾಹೇಬ್ ರಂಗನಾಥರಾಯರು ಅಚಲ ಸ್ವಾಮಿಭಕ್ತರು. ಬ್ರಿಟಿಷ್ ಸರ್ಕಾರವೆಂದರೆ ಅವರ ಪಾಲಿಗೆ ' ರಾಮರಾಜ್ಯ '. ಬರೀ ಹನ್ನೆರಡು ರೂಪಾಯಿ ವೇತನದ ಮೇಲೆ ಸರ್ಕಾರಿ ನೌಕರಿ ಸೇರಿದ್ದ ರಂಗನಾಥರಾಯರು ತಮ್ಮ ಅನ್ಯಾದೃಶ ಸ್ವಾಮಿಭಕ್ತಿಯಿಂದ ಪಿಂಚನಿ ಆಗುವ ವೇಳೆಗೆ ತಹಸೀಲದಾರ ಪದವಿಗೇರಿದ್ದರು. ' ಮುಪ್ಪಿನೊಟ್ಟಿಗೆ ತಹಸೀಲೆ ಬಂದು ತಲೆಶೂಲೆ ತಂದಿತು.' ಅವರ ವಿಚಾರಧೋರಣೆಗೆ ಕಳೆದ ಶತಮಾನದಲ್ಲಿ ಬ್ರಿಟಿಷರ ಏಜಂಟರಾಗಿ ನಮ್ಮನ್ನಾಳಿ, ದೇಶವನ್ನು ಶಾಶ್ವತ ದಾಸ್ಯದಲ್ಲಿಡಲು ಹವಣಿಸಿದ 'ನಮ್ಮವರ' ವಿಚಾರಧೋರಣೆಗಳ ಪ್ರತೀಕವಾಗಿದೆ. 'ಕಾಂಗ್ರೆಸ್ ಎಂದರೆ ಅವರ ಪಾಲಿಗೆ ತುಂಟರ ತಂಡ, ಕೇಸುಗಳಿಲ್ಲದ ವಕೀಲರು, ರೋಗಿಗಳಿಲ್ಲದ ಡಾಕ್ಟರುಗಳು, ಉದ್ಯೋಗ ದೊರೆಯದ ಬ್ರಾಹ್ಮಣರು, ಗಂಡ ಬಿಟ್ಟ ಗಯ್ಯಾಳಿಗಳು ನಡೆಸಿರುವ ಸಂಚು ಇದೊಂದು ಎಂದು ಆಗಾಗ್ಗೆ ತಮ್ಮ ಚಿಕ್ಕ ಹೆಂಡತಿಯ ಮುಂದೆ ಅಂದೂ ತೋರಿಸಿದ್ದರು. ಹಿಂದೂಸ್ಥಾನದ ಪ್ರಮುಖ ಭಾಷೆಗಳಲ್ಲಿ ಏಳನೆಯದಾದ ಕನ್ನಡಕ್ಕೆ ಲಿಂಗಾಯತರ ಭಾಷೆಯೆಂದೂ ಗಾಂಧಿಯಂತಹ ಮಹಾವಿಭೂತಿಗಳಿಗೂ ಪವಿತ್ರವಾದ ಖಾದಿಗೆ ಬ್ರಾಹ್ಮಣರ ಬಟ್ಟೆಯೆಂದೂ ಎಷ್ಟೋ ಬಾರಿ ನಗೆಯಾಡಿದ್ದರು. ಜಗತ್ತಿನಲ್ಲಿ ಎರಡೇ ಅಭಿಪ್ರಾಯಗಳು ಅವರ ದೃಷ್ಟಿಯಲ್ಲಿ, ತಮ್ಮದೊಂದು—ಮೂರ್ಖರದಿನ್ನೊಂದು. ಅವರೊಡನೆ ವಾದಹೂಡುವವರೂ ವಿರಳ. 'ಗೊತ್ತಿದೆ ನಿಮ್ಮ ಕಾಂಗ್ರೆಸ್. ಒಂದು ಸವುಟು ಹುಳಿಗಾಗಿ ಯಾದವೀಯುದ್ಧ ನಡೆಸಿದ ಮಹಾ ತ್ಯಾಗಿಗಳು ನೀವು. ಸ್ವರಾಜ್ಯವಂತೆ ಇವರ ತಲೆ' ಎಂದು ಮಾತು ಮುಗಿಸಿಬಿಡುತ್ತಿದ್ದರು ! ಇವರ ಪುಣ್ಯಪುತ್ರ

ಕಥಾನಾಯಕ ಉಮೇಶ. ಕಾಲೇಜಿಗೆ ಸೂಟಿ ಬಂದಾಗ ಒಮ್ಮೆ ಉಮೇಶ ಮನೆಗೆ ಬರುತ್ತಾನೆ. ಅವನು ನೋಡುವುದು ತಾನು ಎತ್ತಿ ಆಡಿಸಿದ, ಊರ ಕುಲಕರ್ಣಿಯ ಮಗಳು, ಹನ್ನೆರಡು ವರ್ಷದ ಕಾವೇರಿಯೊಂದಿಗೆ ತಂದೆಯ ಲಗ್ನ. ಉಮೇಶನ ಕಾಲೇಜ್ ಶಿಕ್ಷಣ ಮುಗಿಯುವುದಿಲ್ಲ. ಬಿ. ಎ. ಆಗುವ ಮುನ್ನವೇ ದೇಶದಲ್ಲಿ ಕಾಳ್ಗಿಚ್ಚಿನಂತೆ ವ್ಯಾಪಿಸಿದ ಅಗಸ್ಟ್ ೪೨ರ ಮಹಾ ಕ್ರಾಂತಿಯಲ್ಲಿ ಭಾಗವಹಿಸಿ ವೆಲ್ಲೂರ ಜೈಲು ಸೇರುತ್ತಾನೆ. ಜೈಲು ಸೇರಿದ ಮೇಲೆ ಉಮೇಶನ ಕಣ್ಣು ತೆರೆಯುತ್ತದೆ. 'ಏನಿದೆ ಜೈಲಿನಲ್ಲಿ? ಧ್ವನಿವಾಹಕ ಯಂತ್ರವಿಲ್ಲ, ಜೈಜೈಕಾರವಿಲ್ಲ, ಹೂಮಾಲೆಗಳಿಲ್ಲ, ಭಾಷಣವಿಲ್ಲ, ಸ್ತ್ರೀ ವಿದ್ಯಾರ್ಥಿಗಳ ಕರತಾಡನವಿಲ್ಲ. ಬಾಳು ಸಪ್ಪೆ ಎನಿಸಹತ್ತಿ ಹಿಂದೆಯೇ ನೆನಪು ಕೊಟ್ಟಿತು ರಾಷ್ಟ್ರಸೇವೆಯ ಕಾವು. ಅವೆಲ್ಲವೂ ಹೆಮ್ಮೆಯ ಹುಚ್ಚು ಬಾಳು.' ಜೈಲಿನಲ್ಲಿ ಇತರ ದೇಶಭಕ್ತರು, ಅವರ ಆಚಾರವಿಚಾರಗಳ ಪರಿಚಯವೂ ಉಮೇಶನಿಗೆ ಆಗತೊಡಗುತ್ತದೆ. 'ನೆರೆ ಪ್ರಾಂತಗಳಿಂದ ಬಂದವರ ಪರಿಚಯ ಸಂಪಾದಿಸಿದ. ಗಡ್ಡ ಹೊತ್ತವರು, ಮೀಸೆ ಮೂಡದ ವರು, ಅಂಗಿ ಬಿಟ್ಟವರು, ಮಡಿವಂತರು, ಅತಿ ಮಾತಿನ ಮಲೆಯಾಳಿಗಳು, ಆಕ್ರಮಣಾಕಾಂಕ್ಷೆಯ ಮರಾಠಿಗರು, ದುರಭಿಮಾನಿ ತೆಲುಗರು, ನಿರಭಿಮಾನಿ ಕನ್ನಡಿಗರು, ಶೀಘ್ರ ಕೋಪಿ ಆಂಧ್ರರು, ವ್ಯವಹಾರ ನಿಪುಣ ತಮಿಳರು, ಇನ್ನೆಲ್ಲರೂ ಗೆಳೆಯರಾದರು. ಉತ್ತರ ಕರ್ನಾಟಕದವರ ಉತ್ತರನ ಮಾತು ಗಳನ್ನು ಎದುರಾಡದೆ ಕೇಳಿದ. ತಮ್ಮ ತಂಗೆಯವರ ವೀಣೆಯ ಪಾಂಡಿತ್ಯದ ಕತೆಗಳನ್ನು ಸಿಹಿಮಾತಿನ ಮೈಸೂರಿಗರಿಂದ ಬೇಸರವಿಲ್ಲದೆ ಕೇಳಿದ. ಇಂತೆಲ್ಲ ಸಹಿಸಬಲ್ಲವನಿಗೆ ಜೈಲುಜೀವನ ಕಷ್ಟವೆ ?'

ಜೈಲಿನಲ್ಲಿ ಉಮೇಶನ ಆರೋಗ್ಯ ಕೆಡುತ್ತದೆ. ಅವನ ತಂದೆಯ ನೂತನ ಮಾವನವರಾದ ಚಾಣಾಕ್ಷ ಕುಲಕರ್ಣಿಯವರು ವೆಲ್ಲೂರಿಗೆ ಬಂದು ಉಮೇಶನನ್ನು ಬಿಡಿಸಿಕೊಂಡು ಹೋಗುತ್ತಾರೆ. ಊರು ಸೇರಿದ ಕೂಡಲೆ ತಂದೆ ಉಮೇಶನ ಲಗ್ನ ಮಾಡಿಸಿದರು. ಒಂದು ಕಛೇರಿಯಲ್ಲಿ ನೌಕರಿ ಹಿಡಿದು ಕಾರಕೂನನಾದ ಅವನಿಗೆ 'ಏರಿಕೆಗೆ ಬೇಕಾಗುವ ಬಾಯಾರಿಕೆ ಇಲ್ಲ. ಬಾಗಿ ನಡೆಯುವ ಬಂಡವಾಳವಿಲ್ಲ. ಬಾಗಿದವರನ್ನು ಬಡಿಯುವ ಭಂಡ ತನವೂ ಇಲ್ಲ. ಮೇಲಿನವರನ್ನು ಮೆಚ್ಚಿಸುವ ಕೈಚಮಕವಿಲ್ಲ. ಕಸಬು ಮಾಡಿಹ

ಕ್ಕೈಯಲ್ಲ. ' ಅವನಿಗೆ ಬರುತ್ತಿದ್ದ ವೇತನ ಅತ್ಯಲ್ಪ. ಅದರಲ್ಲಿ ಮನೆಯ ಸಂಸಾರ ಸಾಗಿಸಬೇಕಾಗಿತ್ತು. ಕಛೇರಿಯ ಖದೀಮ ನೌಕರರ 'ಮೇಲು ಸಂಪಾದನೆ' ಮಾರ್ಗ ಹಿಡಿಯುವುದಕ್ಕೆ 'ಸಾಚಾತನ' ದ ಕಾಟ. ಉಮೇಶನ ಜೀವನ ಬಹು ಕಷ್ಟದಿಂದ ಸಾಗುತ್ತದೆ. ಮಲ್ಲಾರಿಭಟ್ಟರು ಅದೇ ಆಫೀಸಿನ ಹಿರಿಯ ನೌಕರರು. ಇಪ್ಪತ್ತೇಳು ವರ್ಷಗಳ ದುಡಿಮೆ. ಇಪ್ಪತ್ತೇ ರೂಪಾಯಿ ವೇತನದ ಮೇಲೆ ಸುಭಿಕ್ಷಕಾಲದಲ್ಲಿ ನೌಕರಿಗೆ ಸೇರಿ ಸ್ವಂತೊಂದು ಮನೆ, ಸೇರುಗಟ್ಟಲೆ ಚಿನ್ನ ಸಂಪಾದಿಸಿದ್ದರು. ಸೌಭಾಗ್ಯಮ್ಮ ಎಂಬವಳ ಸಹವಾಸ ಬೆಳಸಿ, ತಮ್ಮ ಬಾಳನ್ನು ಬಹು ಸಂತೋಷವಾಗಿ ದೂಡುತ್ತಿದ್ದರು. ಉಮೇಶ ಕೆಲಸಕ್ಕೆ ಬಂದುದು ಮಲ್ಲಾರಿಭಟ್ಟರ ಪ್ರಾಣಕ್ಕೆ ಬಂದಂತಾಯಿತು. ಪ್ರಾಣಿ ತಾನೂ ಸಂಪಾದನೆ ಮಾಡುವುದಿಲ್ಲ—ಇತರರು ಮಾಡುವುದಕ್ಕೂ ಬಿಡುತ್ತಿರ ಲಿಲ್ಲ. ಮಲ್ಲಾರಿಭಟ್ಟರು ಉಮೇಶನನ್ನು ಮೇಲು ಸಂಪಾದನೆಯ ಮಾರ್ಗಕ್ಕೆ ಹಚ್ಚಲು ಪ್ರಯತ್ನಿಸಿದರು. ಉಮೇಶ ಅವರಿತ್ತ ಸಂಭಾವನೆಯನ್ನು ಅವರ ಮುಖದ ಮೇಲೆ ಎಸೆಯುವ ಅವಿವೇಕ ತೋರಿದ. ಭಟ್ಟರು ಪ್ರಯತ್ನ ಬಿಡ ಲಿಲ್ಲ. ಕಾಹಿಲೆ ವ್ಯಾಜದಿಂದ ತಮ್ಮ ವೇಶ್ಯಾಗೃಹಕ್ಕೆ ಬರಮಾಡಿಕೊಂಡು ಉಮೇಶನಿಗೆ ಮದಿರೆಯ ಹಾಗೂ ವೇಶ್ಯಾಪುತ್ರಿ ಕುಸುಮಳ ಸಹವಾಸ ಮಾಡಿಸಿ, ಅವನನ್ನು ತನ್ನ ಅಧೀನದಲ್ಲಿಟ್ಟುಕೊಳ್ಳಲು ಪ್ರಯತ್ನಿಸುತ್ತಾರೆ. ಆದರದೂ ನಿರರ್ಥಕವಾಗುತ್ತದೆ. ಈ ಹೊಯ್ದಾಟದಲ್ಲಿ ಕುಸುಮನ ಮನಸ್ಸು ಪೂರ್ಣವಾಗಿ ಉಮೇಶನಲ್ಲಿ ಲೀನವಾಗುತ್ತದೆ.

ಈ ಮಧ್ಯೆ ಊರಿನಲ್ಲಿ ಚುನಾವಣೆ ಬರುತ್ತದೆ. ಬ್ರಾಹ್ಮಣ, ಬ್ರಾಹ್ಮ ಣೇತರ ತಿಕ್ಕಾಟ ಆರಂಭವಾಗುತ್ತದೆ. ಜಾತಿಯ ಸರ್ಪಾಸ್ತ್ರ ಹಿಡಿದು ಹುರಿ ಯಾಳುಗಳು ಹೋರಾಡಲು ಸಿದ್ಧರಾಗುತ್ತಾರೆ.

ಎಲೆಕ್ಷನ್ ಸಂದರ್ಭವನ್ನುಪಯೋಗಿಸಿಕೊಂಡು ಕತೆಗಾರರು ವಿವಿಧ ಜಾತಿ ಮತಗಳ ಮೇಲೆ ತಮ್ಮ ನಿಷ್ಕೃಷ್ಟ ಅಭಿಪ್ರಾಯವನ್ನು ಮಂಡಿಸುತ್ತಾರೆ 'ಬ್ರಾಹ್ಮಣನೆಂದರೆ ಬ್ರಹ್ಮಜ್ಞಾನಿ ಎಂಬ ಮಾತು ಯಾವ ಬ್ರಾಹ್ಮಣನಿಗೆ ನೆನಪಿದೆ ? ಬ್ರಾಹ್ಮಣನ ಬ್ರಾಹ್ಮಣಿಕೆ ಕಳೆದಿದೆ, ಆದರೆ ಉಳಿದಿರುವುದಾದರೂ ಏನು ? **ನತ್ತು ಕಳೆದು ತೂತು ಉಳಿದಿದೆ.** ಅದೇ ಅವನ ಹೆಮ್ಮೆಗಾಗಿ ಉಳಿದ ಇಂದಿನ ಸರ್ವಸ್ವ. ಆಚರಣೆಯಲ್ಲಿಲ್ಲದ ಬ್ರಾಹ್ಮಣಿಕೆ ಮತ್ತೆಲ್ಲಿ ಉಳಿ

ದಿದೆ! ಹುಟ್ಟಿನೊಂದಿಗೆ ಬಂದು, ಜನಿವಾರದ ಕಟ್ಟಿನಿಂದ ಜುಟ್ಟಿನಲ್ಲಿ ಜೀವ ಹಿಡಿದು, ಸಾವಿನೊಂದಿಗೆ ಸುಡುತ್ತಿದೆ. ಬದುಕಿನಲ್ಲಿಲ್ಲ, ಬಾಳಿನಲ್ಲಿಲ್ಲ, ಮನೋವೃತ್ತಿಯಲ್ಲಿ ಮೊದಲೇ ಇಲ್ಲ. ವೃತ್ತಿಯಲ್ಲಿ ಉಳಿಯಲು ಸಾಧ್ಯವೇ ಇಲ್ಲ. ಮಧ್ವಾಚಾರಿ ಎಂಬ ಉತ್ತಮ ಬ್ರಾಹ್ಮಣ ವಂಶಜ ಇಂದು ಸೆರೆ ಸೇಂದಿ ಅಂಗಡಿ ಗುತ್ತೆದಾರ. ಚರ್ಮದ ಕಾರಖಾನೆಯಲ್ಲಿ ಕಾರಕೂನ ಶಂಕರಭಟ್ಟ. ರಾಮಸ್ವಾಮಿ ಎಲುಬಿನ ಫ್ಯಾಕ್ಟರಿಯಲ್ಲಿ ಮ್ಯಾನೇಜರ. ಹನ್ನೆರಡು ಜವಳಿಯ ಅಂಗಡಿಗಳು, ಎಂಟು ಕ್ಷೌರದ ಸಲೂನುಗಳು, ಮೂರು ಮಾಂಸಭಕ್ಷಕರ ಊಟದ ಹೋಟೆಲುಗಳು, ಏಳು ಅಗಸರ ಲಾಂಡ್ರಿಗಳು, ಒಂಬತ್ತು ವೇಶ್ಯಾಗೃಹಗಳು, ಐದು ತುಪಾಕಿ ಗುಂಡಿನ ಡಿಪೋಗಳು, ಒಂದು ಮುಸಲರ ಮಸೀದಿಯೂ ಉಳ್ಳ ಬಳ್ಳಾರಿಯ ಒಂದು ಬೀದಿ ಈಗಲೂ ಹಳೆಯ ಹೆಸರಾದ 'ಬ್ರಾಹ್ಮಣ ಬೀದಿ' ಎಂದು ಕರೆಸಿಗೊಂಡಿದೆ....ಟೀಕೆಗೆ ಬ್ರಾಹ್ಮಣ ಮಾತ್ರ ಏಕೆ ತುತ್ತಾಗಬೇಕು. ಪ್ರಾಣಿಹಿಂಸೆಯ ಭಯದಿಂದ ಅಂದು ದೀಪ ಹಚ್ಚದ ಜೈನ ಇಂದು 'ಬೋವ್ರೀಲ' ಮುಂತಾದ ಗೋಮಾಂಸದ ವ್ಯಾಪಾರದಲ್ಲಿ ಹಣವನ್ನು ಗಳಿಸುತ್ತಿದ್ದಾನೆ. ಕುರಾನಿನ ದೃಷ್ಟಿಯಲ್ಲಿ ಅತಿ ಹೇಯವಾದ ಬಡ್ಡಿಗಾಗಿ ಅನೇಕ ಮುಸ್ಲಿಮರು ಸಾಲಗಾರರನ್ನು ಸುಲಿಯುತ್ತಿದ್ದಾರೆ. ಅಂತರಂಗ ಬಹಿರಂಗ ಶುದ್ಧಿಗಾಗಿ ಹುಸಿಯನಾಡಲು ಅಂಜಿದವನು ( ವೀರಶೈವ ) ಇಂದು ನ್ಯಾಯಾಸ್ಥಾನದಲ್ಲಿ ಸುಳ್ಳು ಸಾಕ್ಷಿ ಹೇಳಿ ಹಣ ಸಂಪಾದನೆ ಮಾಡುತ್ತಿದ್ದಾನೆ. ಹದಿಬದಿಯುವರನ್ನು ಪ್ರೇಮಿಸಲು ಬೈಬಲಿನಿಂದ ಕಲಿತವನು ಹದಿಬದಿ ದೇಶಗಳನ್ನು ಬೂದಿ ಮಾಡುತ್ತಿದ್ದಾನೆ....ಎಲ್ಲವೂ ಹಣದ ಸಲುವಾಗಿ ಹೂಡಿದ ಹೂಟಗಳು. **'ಕೈ ಕೆಲಸದ ಮೇಲೆ, ಕಣ್ಣು ಹಣದ ಮೇಲೆ.'** ಓಟು ಮಾಡಲು ಹೋದ ಉಮೇಶ, ಓಟಿನ ಚೀಟಿಯನ್ನು ಕಿಸೆಯಲ್ಲಿ ಹಾಕಿಕೊಂಡು ಮನೆಗೆ ಹಿಂದಿರುಗುತ್ತಾನೆ.

ಉಮೇಶನಿಗೆ ಕಛೇರಿಯ ಕಾರಕೂನಕಿ ಮೈಗಂಟುವುದಿಲ್ಲ. ಮಹಾಯುದ್ಧದ ಸೈನಿಕ ಸಂಗ್ರಹಣದ ಪ್ರಚಾರ ನೋಡಿ ಉಮೇಶ ಸೈನ್ಯ ಸೇರುತ್ತಾನೆ. ವಿಧಿ ತನ್ನ ವಿಚಿತ್ರ ಆಟ ಹೂಡುತ್ತದೆ. ದೇಶನಾಯಕರ ಸಂದೇಶಕ್ಕೆ ವಿರುದ್ಧವಾಗಿ ಸಾಮ್ರಾಜ್ಯಶಾಹೀ ಯುದ್ಧಕ್ಕೆ ಸೇರಿದ್ದ ಉಮೇಶ ರಂಗೂನ್ ಪತನವಾದನಂತರ ಅಯ್ಯೆನ್ನೈ ( I N A ) ದಳದಲ್ಲಿ ಸಮಾವೇಶವಾಗಿ ದೇಶ

ಧುರಂಧರನಾಗುತ್ತಾನೆ.

ಉಮೇಶನ ಹೆಂಡತಿ ನಾಗೂ ಬಸುರಿ. ಹೆರಿಗೆಗಾಗಿ ತೌರುಮನೆಗೆ ಕಮಲಾಪುರಕ್ಕೆ ಹೋಗಿರುತ್ತಾಳೆ. ತೌರುಮನೆಯೆಂದರೆ ಅಣ್ಣನ ಮನೆ. ಅಣ್ಣ ರಾಮಮೂರ್ತಾಚಾರಿ ಮಹಾಸಾತ್ವಿಕ, ದೇವರಂಥ ಮನುಷ್ಯ; ಅತ್ತಿಗೆ ಸುಬ್ಬಕ್ಕ ಮಹಾ ಘಟಾಣಿ—ಆದರೆ ಋಜುಜೀವನದ ಹೆಣ್ಣುಮಗಳು. ಯುದ್ಧಕ್ಕೆ ಹೋಗಿದ್ದ ಉಮೇಶ ಜಪಾನೀಯರ ಸೆರೆಯೊಳಗೆ ಪ್ರಾಣ ಕಳೆದು ಕೊಂಡ ಎಂಬ ಸುದ್ದಿ ಹರಡುತ್ತದೆ. ಮಠದ ಪರಮ ಭಕ್ತ ಪರಿಮಳಾಚಾರಿ ವಿಧವೆಯನ್ನು ಕೇಶಮುಂಡನ ಮಾಡಿಸದೆ ಮನೆಯಲ್ಲಿಟ್ಟುಕೊಂಡಿರುವ ಪಾಪಕ್ಕೆ ರಾಮಮೂರ್ತಾಚಾರರಿಗೆ ಬಹಿಷ್ಕಾರ ಹಾಕಿಸುವ ಏರ್ಪಾಡು ಮಾಡುತ್ತಾನೆ. ಈಯೆಲ್ಲ ಅನರ್ಥ ತನ್ನಿಂದಾಯಿತು ಎಂದು ಮರುಗಿದ ನಾಗಮ್ಮನಿಗೆ ಬುದ್ಧಿವಿಕಾರವಾಗುತ್ತದೆ. ಜನ ಅವಳಿಗೆ ದೆವ್ವ ಹಿಡಿದಿದೆ ಎಂದು ಭಾವಿಸುತ್ತಾರೆ. ಶ್ರೀ ಶ್ರೀಗಳವರು ಬಂದು ಕಮಲಾಪುರದಲ್ಲಿ ಬೀಡುಮಾಡುತ್ತಾರೆ. ಊರಿಗೆ ಊರೇ ಮಠದ ಕೈಂಕರ್ಯಕ್ಕೆ ನಿಲ್ಲುತ್ತದೆ. ಆದರೆ ರಾಮಮೂರ್ತಾಚಾರರಿಗೆ ಆಮಂತ್ರಣವಿಲ್ಲ. ಮಠ, ಸ್ವಾಮಿಗಳು, ಅವರ ದೇವರು ಹರಿ ಎಲ್ಲರೂ ಸಂಪ್ರದಾಯದ ದಾಸರು. '**ಮಠದಲ್ಲಿ ಯಾವುದಕ್ಕೂ ರೇಶನ್ ಬರಲು ಸಾಧ್ಯವೇ ಇಲ್ಲ, ವಿದ್ಯೆ ಮತ್ತು ಭಕ್ತಿಗಳ ಹೊರತು.** ಈ ಕೊರತೆಗಳನ್ನು ತುಂಬಿಕೊಡಲು ಸಹಸ್ರಾರು ಸರಕುಗಳು ಅಲ್ಲಿ ಇದ್ದವು. ಪೂಜೆಯ ವಿಜೃಂಭಣೆ, ಗಂಟೆಗಳ ಗಣಗಣ, ಜಾಗಟೆಯ ಜಣಜಣ, ಶಂಖನಿನಾದ, ನಗಾರಿಯ ಢಂ ಢಂ, ಮಂತ್ರ ಘೋಷಣೆ, ಮಸಾಲೆಯ ಕಡಬು—ಹಾಕಿದಷ್ಟಲ್ಲ, ತಿಂದಷ್ಟು ಮತ್ತು ಚೆಲ್ಲಿ ದಷ್ಟು....ಅನ್ನದಾನದ ಹೆಸರಿನಲ್ಲಿ ಅನ್ನದಹನ ಅಳತೆ ತಪ್ಪಿ ಆಗುತ್ತಿತ್ತು. ಅರಿಷಡ್ವರ್ಗಗಳನ್ನು ಗೆಲ್ಲಲು ಕಂಕಣಬದ್ಧರಾಗಿದ್ದ ಶ್ರೇಷ್ಠ ಯತಿಗಳ ನೇತೃತ್ವದಲ್ಲಿ ನಿರಂಕುಶವಾಗಿ ನಡೆದಿದ್ದಿತು—ಜಿಹ್ವಾಚಾಪಲ್ಯದ ಆರಾಧನೆ. ಶಿಷ್ಯರಿಂದ ಮಠ ಯೋಗ್ಯತೆ ಮೀರಿದ ಕಾಣಿಕೆಯನ್ನು ಬೇಡುತ್ತಿದ್ದಿತು. ಮನದಲ್ಲಿ ಮರುಗುತ್ತ ಮೂರು ತಿಂಗಳ ವೇತನವನ್ನು ಸಲ್ಲಿಸಿದವರು ಹಲ ವರು, ತಾತ ಮುತ್ತಾತಂದಿರು ಗಳಿಸಿಟ್ಟ ಮನೆಗಳನ್ನು ಶೆಟ್ಟರಿಗೋ ಸೊಸೈ ಟಿಗೋ ಬರೆದುಕೊಟ್ಟು, ತಿಂದು ತಣಿದವರಿಗೆ ಸಿಹಿ ಮೇಯಿಸಿ ಸ್ವರ್ಗದ

ಹಾದಿಯನ್ನು ಕಾದವರು ಕೆಲವರು. ವೃದ್ಧ ತಂದೆಯ ಆಜ್ಞೆ ಮೀರದೆ ಹೆಚ್ಚು ಹಣ ತೆತ್ತವರು ಕೆಲವರು. ಮನೆಯವಳು ದುರುದುರು ನೋಡಿದಾಗ ಮರು ಮಾತನಾಡಲಾರದೆ ಕಡ ತಂದುಕೊಟ್ಟವರು ಪುಣ್ಯಸಂಪಾದನೆಗಾಗಿ ಹಣ ವನ್ನು ಮಣ್ಣಿನಂತೆ ಸುರಿದವರು ಅನೇಕರು, ಸತ್ತ ನಂತರ ಸಿಗುವ ಸ್ವರ್ಗ ಇರಲಿ ಇಲ್ಲದಿರಲಿ, ಬದುಕಿರುವಾಗಲೇ ಎಲೆಯಲ್ಲಿ ಬಿದ್ದುದನ್ನೆಲ್ಲಾ ಕಬಳಿ ಸುವ ಸ್ವರ್ಗವಂತೂ ಎಲ್ಲರಿಗೂ ಸಿಕ್ಕಿದ್ದಿತು.' ಮಠದ ಭಕ್ತರು ರಾಮ ಮೂರ್ತಾಚಾರ್ಯರ ವಿರುದ್ಧ ಕತ್ತಿ ಕಟ್ಟಿದರೇನು ? ರಾತ್ರಿ ಗುರುಗಳೇ ಕನಸಿನಲ್ಲಿ ಬಂದು ನಾಗಮ್ಮನ ಬಾಲಗೋಪಾಲನನ್ನು ಪೂಜಿಸಿ, ಫಲ ಮಂತ್ರಾಕ್ಷತೆ ಕೊಟ್ಟು ಹೋಗಿರುತ್ತಾರೆ. ಉಮೇಶ ಹಿಂದಿರುಗಿದ ಮೇಲೆ ಕಮಲಾಪುರಕ್ಕೆ ಬಂದು ಹೆಂಡತಿ ಮಗುವನ್ನು ಊರಿಗೆ ಕರೆದುಕೊಂಡು ಹೋಗುತ್ತಾನೆ.'

ಈ ಕತೆಗೆ ಹಾಸುಹೊಕ್ಕಾಗಿ ರಾವ್‌ಸಾಹೇಬರ ಮೂರನೆಯ ಹೆಂಡತಿ ಕಾವೇರಮ್ಮನ ವೃತ್ತಾಂತ, ಆವಳ ಶೀಲಭಂಗ ಮಾಡಲೆತ್ನಿಸಿದ ದೇಶಭಕ್ತ ರಘುರಾಮನ ಕತೆ ಸೇರಿಕೊಂಡಿವೆ.

ಉಮೇಶನ ಕಿರುಕುಳ ಜೀವನ ನೋಡುವಾಗ, ಅವನ ಆದರ್ಶಗಳು ನೈಸರ್ಗಿಕ ಜೀವನದ ರುದ್ರಬಂಡೆಯ ಮೇಲೆ ನುಚ್ಚುನೂರಾಗುವುದನ್ನು ಪರಿಗಣಿಸುವಾಗ ಈಲಿಯಟ್ಟನ ನೈರಾಶ್ಯ ವಾದ—

"This is the way the world ends
Not with a bang but a whimper"

ಓದುಗರಲ್ಲಿ ಸಹಜವಾಗಿ ಮೂಡುತ್ತದೆ. ನೈರಾಶ್ಯ ವಾದವನ್ನೂ ಮುಂದೊತ್ತುವುದೇ ಬೀಚಿಯವರ ಉದ್ದೇಶವಾಗಿದ್ದಲ್ಲಿ ಆವರು 'ದಾಸಕೂಟ' ಬರೆಯಬೇಕಾದ ಅಗತ್ಯವೇ ಇರಲಿಲ್ಲ. 'ಜಗತ್ತಿನ ಆಗುಹೋಗುಗಳಲ್ಲಿ ಜೀವನ ಸಮಸ್ಯೆಗಳು ಅನಂತ. ಹುಟ್ಟು ಸಾವು ವ್ಯಕ್ತಿಗಳಿಗೆ ಮಾತ್ರವೇ ಆಗಲಿ, ವಿಚಾರಪರತೆಗಲ್ಲ. ಉಮೇಶ ವಿಚಾರಪರತೆಯ ಸಾಕ್ಷಾತ್ಕಾರ ವೆಂದ ಮೇಲೆ ಉಮೇಶನ ಕತೆಗೆ ಕೊನೆಯಾದರೂ ಎಲ್ಲಿ ? **ನಿರಾಶೆಯಿಂದ ಉಸಿರು ಕಳೆದುಕೊಂಡು ಕೈ ಮುಚ್ಚಿ ಕೂಡುವುದು ಆತ್ಮಹತ್ಯದ**

ಮೊಾರ್ಗ್' ಎಂದು ಓದುಗರನ್ನು ಬೀಚಿ ಎಚ್ಚರಿಸಿದ್ದಾರೆ. ಉಮೇಶನ ಸೋಲಿನ ಕತೆ 'ದಾಸಕೂಟ'; ಅವನ ಗೆಲುವಿನ ಕತೆಯನ್ನು ಓದಲು ನಾವು ಉತ್ಸುಕರಾಗಿದ್ದೇವೆ.

'ದಾಸಕೂಟ' ದಲ್ಲಿ ಉಮೇಶನೊಬ್ಬನೇ ದಾಸ್ಯಯಂತ್ರದ ಕೀಲಲ್ಲ. ಅವನ ತಂದೆ, ಚಿಕ್ಕಮ್ಮ, ಪರಿಮಳಾಚಾರಿ, ರಘುರಾಮು, ಸೌಭಾಗ್ಯಮ್ಮ ಎಲ್ಲರೂ ದಾಸಕೂಟಕ್ಕೆ ಸೇರಿದವರೇ. ಕೆಲವರು ಅರ್ಥಕ್ಕೆ—ಕೆಲವರು ಕಾಮಕ್ಕೆ—ಕೆಲವರು ಧರ್ಮಕ್ಕೆ ದಾಸರು. ದಾಸ್ಯ ಯಾವ ರೂಪ ಹೊತ್ತು ಬಂದರೂ ವ್ಯಕ್ತಿಯ ಹಾಗೂ ಜಗತ್ತಿನ ಪ್ರಗತಿಗೆ ಕಂಟಕಪ್ರಾಯವಾದುದೆಂದು ಕತೆ ಸಾರುತ್ತದೆ.

ಕಥಾನಿರೂಪಣೆ, ಸಂವಿಧಾನ ಕೌಶಲ್ಯ, ಪಾತ್ರಗಳ ಸೃಷ್ಟಿ, ವರ್ಣನಾ ಚಾತುರ್ಯ, ವಿಚಾರ ಮತ್ತು ಹಾಸ್ಯಗಳ ಸಂಗೋಪನದಲ್ಲಿ ಬೀಚಿಯವರು ಅಸಾಮಾನ್ಯ ಕೌಶಲ್ಯ ತೋರಿದ್ದಾರೆ. ಕಾದಂಬರಿಯ ಕೊನೆಯಲ್ಲಿ ಸುಳಿಯುವ ಸುಬ್ಬಕ್ಕ ನಮ್ಮ ಚಿತ್ತಫಲಕದ ಮೇಲೆ ಶಾಶ್ವತವಾಗಿ ನೆಲಸುತ್ತಾಳೆ. ಕಾಮನ ಕರೆಯನ್ನು ಕಡೆಗಾಣಿಸಿ ತನ್ನ ಸತೀತ್ವವನ್ನು ಅಮಲವಾಗಿ ಕಾಪಾಡಿಕೊಂಡ ಕಾವೇರಿ ಹಿರಿಯ ವ್ಯಕ್ತಿ. ಸಾತ್ವಿಕ ಜೀವನದ ಮೂರ್ತಿವಂತ ಸ್ವರೂಪರಾದ ರಾಮಮೂರ್ತಾಚಾರ್ಯರು ಪುರಾಣದ ವಶಿಷ್ಠನಿಗೆ ಕಡಿಮೆಯಾದವರಲ್ಲ.

ಸಮಕಾಲೀನ ಜೀವನವನ್ನು ಬಿಚ್ಚುಮಾತಿನಿಂದ ಮುಚ್ಚುಮರೆ ಇಲ್ಲದೆ ಚಿತ್ರಿಸಿ ಬೀಚಿ ಕನ್ನಡಿಗರಿಗೆ ಮಹೋಪಕಾರ ಮಾಡಿದ್ದಾರೆ. 'ದಾಸಕೂಟ' ಕನ್ನಡ ರಸ ಸಾಹಿತ್ಯದಲ್ಲಿ ಮಾತ್ರವೇ ಅಲ್ಲ. ವಿಚಾರಸಾಹಿತ್ಯದಲ್ಲಿಯೂ ಚಿರ ಕಾಲ ಉಳಿಯುವ ಉಜ್ವಲ ಕೃತಿ. ಈ ಕೃತಿಯನ್ನು ನೀಡಿದ ಬೀಚಿಯವರಿಗೆ ನನ್ನ ಅನಂತ ಧನ್ಯವಾದಗಳನ್ನರ್ಪಿಸುತ್ತೇನೆ.

"ಅನ್ನಪೂರ್ಣ"
ವಿಶ್ವೇಶ್ವರಪುರಂ, ಬೆಂಗಳೂರು—೨
೧೦—೧೦—೫೦

ಅ. ನ. ಕೃಷ್ಣರಾಯ

# ದಾ ಸ ಕೂ ಟ

## ೧. ಬೆಳ್ಳಿ ಮೂಡಿದೆ

ಬಳ್ಳಾರಿಯಲ್ಲಿ ಎರಡೇ ಕಾಲಗಳು. ಬಿಸಿಲುಕಾಲ ಮತ್ತು ಹೆಚ್ಚು ಬಿಸಿಲುಕಾಲ. ಆದರೂ ಬಳ್ಳಾರಿಯಲ್ಲಿ ರಾತ್ರಿ ಬಿಸಿಲಿಲ್ಲ— ಎಷ್ಟೋ ಇಲ್ಲ. ಅದೊಂದು ಬೇಸಿಗೆಯ ಮಧ್ಯಾಹ್ನ. ಉಗ್ರಸ್ವರೂಪಿಯಾಗಿ ಕೆಂಡವನ್ನು ಕಾರುತ್ತಿದ್ದಾನೆ ಸೂರ್ಯದೇವ. ಬಿಸಿಲಿನ ಜಳಕ್ಕೆ ಕಮರಿ ಬೂದಿಯಾಗುವ ಭಯದಿಂದ ಕೈಕಟ್ಟಿ ಕದಲದೆ ಕಂಬದಂತೆ ನಿಂತಿವೆ ಗಿಡಬಳ್ಳಿಗಳು. ದನಕರುಗಳು ತಳಮಳಿಸಿ ಬಾಯಿಂದ ನೊರೆ ಸುರಿಸಿ ಗಿಡಗಳಡಿಯಲ್ಲಿ ಅಸ್ತವ್ಯಸ್ತವಾಗಿ ಕಾಲು ಚಾಚಿವೆ. ಯಾರಿಗೋ ವಿಜಯಸೂಚಕವಾದ ' ವಿ 'ಕಾರವನ್ನು ಹಣೆಯ ತುಂಬ ಬಡಿದುಕೊಂಡ ಕರಿಗಲ್ಲು ಗುಡ್ಡವೂ ಬೆವರೊಡೆಯುವಂತೆ ಮೋರೆ ಮಾಡಿದೆ. ತಹತಹಪಡಿಸುವ ವೈಶಾಖ. ಬಕ್ಕತಲೆ ಬರಿಗಾಲಿನಿಂದ ತಾರಿನ ರಸ್ತೆಯಲ್ಲಿ ನಡೆಯಬಲ್ಲ ಎಂತಹ ಸಾಹಸಿ ಮದರಾಸಿಯನ್ನೂ ಅಂಜಿಸುವಂತಹ ಕ್ರೂರವಾದ ಬಿಸಿಲು.

ಗುಡ್ಡದ ಅಡಿಯಲ್ಲಿ ಕಲ್ಲಿನ ದೊಡ್ಡ ಕಟ್ಟಡ. ಕೆಂಪು ಹಂಚಿನ ಮಾಳಿಗೆ ತಲೆ ಎತ್ತಿ ನಿಂತಿದೆ ಅರಮನೆಯಂತೆ. ಮೇಲೊಂದು ಬಾವುಟದ ಕೋಲು. ಸುತ್ತುಮುತ್ತಲೂ ಜಾಲಿಯ ಗಿಡ—ಕುಳ್ಳ ಜಾತಿಯದು. ದೂರದ ಗುಡ್ಡದಂತೆ ನೋಡಲು ಚೆಂದ. ನಾಯಿಯ ಕೊಡೆಯ ಮಾಟ. ಬಿಸಿಲಲ್ಲಿ ಬಂದವರಿಗೆ ಬೇಕಾದಷ್ಟು ನೆಳಲಿಲ್ಲದಿದ್ದರೂ ಬೇಡಾದಷ್ಟು ಮುಳ್ಳಿವೆ. ವರಾಂಗಣದಲ್ಲಿ ಮಳಲು ತುಂಬಿದ ಬಣ್ಣದ ಬಕೀಟುಗಳು ಸಾಲಾಗಿ ಕುಳಿತಿವೆ. ಸರಕಾರಿಯ ಕಚೇರಿ ಎಂಬ ಹಣೆಯ ಬರಹದ ಹಲಗೆಯನ್ನು ಅನವಸರ ಎನಿಸಬಲ್ಲ ಗಾಂಭೀರ್ಯ ಪಡಿಯಚ್ಚಿನಿಂದ ಒತ್ತಿದಂತಿದೆ ವಾತಾವರಣ.

ಮುಂದಿನ ಭಾಗದಲ್ಲೊಂದು ದೊಡ್ಡ ಕೋಣೆ. ಹಿರಿವರ್ಗದ ಅಧಿಕಾರಿಯ ಅಭಿರುಚಿಗೆ ತಕ್ಕಂತೆ ಅಚ್ಚುಕಟ್ಟಾಗಿದೆ. ಮತ್ಸ್ಯಯಂತ್ರದಂತೊಂದು ಎಲೆಕ್ಟ್ರಿಕ್ ಫ್ಯಾನ್ ತಲೆಯ ಮೇಲೆ ಆಡುತ್ತಿದೆ. ಎದುರು ಗೋಡೆಗೇರಿದ

ದೊಡ್ಡೊಂದು ಗಡಿಯಾರ ಬೇಸರವರಿಯದೆ ತಾಳ ನಡೆಸಿದೆ. ಪೆಬರಿಟೊಪ್ಪಿಗೆಯನ್ನು ಕೈಲಿ ಮುಟ್ಟದೆ ಕೂಟದಿಂದ ಚಾಚಿ ಹಿಡಿದಿದೆ ಗೋಪಿ. ಜನರು ಬತ್ತಲಿ ಇದ್ದರೂ ದೊಡ್ಡ ಮೇಜಿಗೆ ಬಣ್ಣದ ಅರಿವೆ. ಕಾಗದಗಳು ಗಾಳಿಗೆ ಹಾರದಂತೆ ರಂಗುರಂಗಿನ ಕಾಜಿನ ವಜೆಗಳು ಮೇಜಿನ ಮೇಲೆ. ಮೇಜಿನ ಸುತ್ತಲೂ ನಾಲ್ಕು ಕುರ್ಚಿಗಳು. ಆದರೆ ಅವೆಲ್ಲವುಗಳಲ್ಲಿಯೂ ಕೂಡಲು ಅರ್ಹ ಓರ್ವನೇ ! ಆ ದೇವನಿನ್ನೂ ಪ್ರಸನ್ನನಾಗಲಿಲ್ಲ ಉಮೇಶನಿಗೆ.

ಉಡುಪಿನ ರೀತಿ ಆಂಗ್ಲವಾಗಿದ್ದರೂ ಜಾತಿ ಮಾತ್ರ ಖಾದಿ. ಮಡಿಕೆ ಕಾಯ್ದುಕೊಳ್ಳಲಾರದೆ ಮಾಟಗೆಟ್ಟ ಖಾದಿಯ ಚಲ್ಲಾಣ. ಪಗಡೆಮನೆಯ ಕೋಟು. ಕಿಸೆಯ ಹೊಟ್ಟೆ ಒಡೆಯುವಂತಹ ಕರವಸ್ತ್ರ ಮೇಲಿನ ಎಡ ಜೇಬಿನಲ್ಲಿ. ಉಮೇಶ ಒಳಬಾಗಿಲಲ್ಲಿ ನಿಂತು ಐದಾರು ನಿಮಿಷಗಳಾದವು. ಟೈಯು ಗಂಟನ್ನು ಜಗ್ಗುತ್ತ ಸಂಪ್ರದಾಯೋಕ್ತವಾಗಿ ಎರಡೆರಡು ಬಾರಿ ಕೆಮ್ಮಿದ. ರೂಢಿಯಂತೆ ಬಂಡೆಯ ಮೇಲೆ ಬೂಟನ್ನು ಸವರಿಯೂ ಆಯಿತು. ಸಾಹೇಬರು ತಲೆ ಎತ್ತಲಿಲ್ಲ. ಅವರ ಬೋಳು ನೆತ್ತಿಯ ಮೇಲೆ ಗಾಳಿ ಸುಳಿಯುತ್ತಿದ್ದಿತು. ತೆರೆಬಾಯಿಯ ಕೊಳವೆಯೊಂದರಲ್ಲಿ ಹೊಗೆಸೊಪ್ಪನ್ನು ತುಂಬಿ ಹಲ್ಲಿನಿಂದ ಕಚ್ಚಿದ್ದರು. ಮೋಡದಂತೆ ಆಗಾಗ್ಗೆ ಹೊಗೆಯನ್ನು ಮಾತ್ರ ಹೊರ ಊದುತ್ತಿದ್ದರು. ಬೆಮರುತ್ತ ನಿಂತ ಉಮೇಶ ಉಗುರು ಕಡಿದ. ಕೈಲಿದ್ದ ಕಾಗದಗಳನ್ನು ಮೇಜಿನ ಮೇಲೆ ಬಿಸುಟಿ ಹೋಗುವ ಬುದ್ಧಿಯಾಯಿತು. ಹಿಂದಿನ ನೆನಪಾಗಿ ಉಮೇಶ ಸುಮ್ಮನಾದ. ಒಂದು ಬಾರಿ ಹಾಗೆ ವರ್ತಿಸಿ ಹೊಟ್ಟೆ ತುಂಬ ಬೈಗಳನ್ನು ತಿಂದಿದ್ದ. ತನಗೂ ಸಾಹೇಬರಿಗೂ ಮಧ್ಯೆ ಇದ್ದ ಅಸ್ಮದಾದಿಗಳ ಎಕೋಪಕ್ಕೆ ಗುರಿಯಾಗಿದ್ದ. " ಬಾತ ತಲೆ " ಯವನೆಂದು ಉಮೇಶನ ಗುಟ್ಟುಕಾಗದದಲ್ಲಿ ಅಸ್ಮದಾದಿಗಳು ಮೂಡಿಸಿ ಬಹಿರಂಗದಲ್ಲಿ ಬುದ್ಧಿ ಹೇಳಿದ್ದರು. ವಿಚಾರಗಳು ತಲೆಯಲ್ಲಿ ಅಲೆಯಂತೆ ಏಳಹತ್ತಿದವು. ನಾನಾ ಸನ್ನಿವೇಶಗಳು, ಹಲವು ಹಳೆಯ ಚಿತ್ರಗಳು ಕಣ್ಮುಂದೆ ಓಡಿದವು. ಪುನಃ ಒಂದು ಬಾರಿ ಉಮೇಶ ಸುಳ್ಳುಗೆಮ್ಮು ಕೆಮ್ಮಿದ. ಸಚಿತ್ರ ವಾರಪತ್ರಿಕೆಯೊಂದರಲ್ಲಿದ್ದ ಸಿಗರೇಟಿನ ಜಾಹೀರಾತಿನಲ್ಲಿಯ ಪರಿಪುಷ್ಟಕಾಯದ ಸ್ತ್ರೀ ಚಿತ್ರವನ್ನು ಎವೆ ಇಕ್ಕದೆ ನೋಡುತ್ತಿದ್ದ ಸಾಹೇಬರಿಗೆ ರಸಹಾನಿಯಾಯಿತು. ಸಿಟ್ಟಿಗೆದ್ದರು.

" ಕೆಲಸದಲ್ಲಿರುವದು ಕಾಣುವದಿಲ್ಲವೇನು ? " ಎಂದು ನುಡಿದು, ಮಾತಿನಲ್ಲಿದ್ದುದಕಿಂತಲೂ ಹೆಚ್ಚು ತಿರಸ್ಕಾರವನ್ನು ಮುಖದಲ್ಲಿ ತೋರಿದರು. ಇದೆಲ್ಲಕ್ಕೂ ಉತ್ತರ ಉಮೇಶನ ಮೌನ. ಸಾಹೇಬರ ಮುಖದಲ್ಲಿದ್ದ ಭಾವನೆಯೇ ಉಮೇಶನ ಮುಖದಲ್ಲಿಯೂ ಪ್ರತಿಬಿಂಬಿಸಿತು, ಇಮ್ಮಡಿಯಾಗಿ. ಇದು ಸಾಹೇಬರಿಗೆ ಅಸಾಧಾರಣ ಅನುಭವ, ಅಭೂತಪೂರ್ವ ಅನುಭವ. ಕಣ್ಣು ಕಿಸಿದರು, ಹಿರಿವರ್ಗದ ಗೌರವಕ್ಕೆ ತಕ್ಕುದಾದ ದನಿಯಲ್ಲಿ " ಏನದು ? " ಎಂದು ಗದರಿಸಿದರು. ಉಮೇಶ ಸಾಹೇಬರ ಮುಖವನ್ನು ದಿಟ್ಟಿಸಿದ. ಏನಿದೆ ಮುಖದಲ್ಲಿ ? ಶೂನ್ಯ ಸಿಂಹಾಸನದ ದೇವೇಂದ್ರ. ಕಣ್ಣಲ್ಲಿ ಪ್ರತಿಭೆಯ ಚಿನ್ಹೆ ಇಲ್ಲ. ಮುಖದಲ್ಲಿ ವಿದ್ಯೆಯ ಕಾಂತಿ ಇಲ್ಲ. ಸುಸಂಸ್ಕೃತಿಯ ಪ್ರಕಾಶವಿಲ್ಲ, ಪ್ರಭಾವವಿಲ್ಲ. ನವಿಲ ಕಾಲಿನ ಡೊಂಕು ಮುಚ್ಚಲು ಬಣ್ಣದ ಗರಿಗಳು ತುಂಬಿಬಂದಂತೆ, ಬುದ್ಧಿಯ ಡೊಂಕು ಮುಚ್ಚಲು ಅಧಿಕಾರ ಬಂದಿದ್ದಿತು ಸಾಹೇಬರಿಗೆ. ಅನುಗಾಲವೂ ಅವರದು ಗಂಟುಮೋರೆ. ನಗು ನಸಿಯದಲ್ಲಿ ಹಾಯಲೂ ಸಾಧ್ಯವಿಲ್ಲ. ಮನದಣಿಯೆ ನಗುವದಂತೂ ಅಗೌರವ. ಅಧಿಕಾರಕ್ಕೇ ಕಲಂಕ. ಇದು ಅವರ ಸಂಸ್ಕೃತಿ. ಇಂತಹ ಗುಗ್ಗುಗಳಿಗೆಲ್ಲ ಕಾಲೇಜಿನಲ್ಲಿದ್ದಾಗ ಉಮೇಶ ಸಾಕ್ಷಾತ್ ದೇವರು. ಎತ್ತು ಮೂಟೆ ಹೊತ್ತಂತೆ ಡಿಗ್ರಿಗಳನ್ನು ಹೊರಲು ಬಂದ ಧಬಕರು ಉಮೇಶನ ಪ್ರತಿಭೆಯನ್ನು ಕಂಡು ದಿಙ್ಮೂಢರಾಗಿ ಶರಣು ಬಂದಿದ್ದರು. ಅಂತಹದೊಂದು ಹಿರಿ ಮಂಕು ಇಂದು ಉಮೇಶನಿಗೆ ದೊರೆ—ಅನ್ನದಾತ—ಸರ್ವಜ್ಞ—ಮೇಧಾವಿ. ಅವನು ಕಾಲಿನಿಂದ ತೋರಿಸಿದುದನ್ನು ಉಮೇಶ ತಲೆಯಿಂದೆತ್ತಿ ಮಾಡಬೇಕು. ಇದು ದಾಸಪ್ರಪಂಚದ ಒಂದು ವೈಶಿಷ್ಟ್ಯ.

" ಮ್ಯಾನೇಜರರು ಕಳುಹಿದರು " ಎಂದು ನುಡಿದು ಉಮೇಶ ಕಲ್ಲಿನಂತೆ ನಿಂತ. ಮುಖದಲ್ಲಿ ನಮ್ರತೆ ಇಲ್ಲ, ವಿಧೇಯತೆ ಇಲ್ಲ. ಕೀಳರಿಮೆಯಂತೂ ಎಂದೂ ಇಲ್ಲ. ಉಮೇಶನ ನಡೆನುಡಿಗಳಿಂದ ಸಾಹೇಬರ ಅಭಿಮಾನದೇವತೆ ಕೆರಳಿ ರೂಪುಗೊಂಡಿತು. ನಖಶಿಖಾಂತ ಉಮೇಶನನ್ನು ಕಣ್ಣಿಂದ ಅಳೆದರು. ತುಟಿಗಳು ಅದುರಿದವು. ಕಣ್ಣು ಕೆಂಪಾದವು.

" ಏತಕ್ಕೆ ? " ದರ್ಪದ ದನಿ.

" ಇದು ಅವರನ್ನೇ ಕೇಳಬೇಕಾದ ಪ್ರಶ್ನೆ ! "

ಮುಂದಿದ್ದ ಮೇಜು ಧನ್ಯೆಂದಿತು. ತೆರೆಬಾಯಿ ಕೊಳವೆಯನ್ನು ಹೊರತೆಗೆದು ಪುನಃ ಕಚ್ಚಿದರು. 'ಮಹಾ ಪ್ರಭೋ, ಏನಪ್ಪಣೆ? ' ಎಂಬವ ನಂತೆ ಮ್ಯಾನೇಜರ್ ಬಂದೆರಗಿದ. ಮಲಿನವಾದ ಉಡುಪು. ಹೆಚ್ಚು ಮಲಿನ ವಾದ ಹೃದಯ ಅದರಲ್ಲಿ. ಮೂಗಿನ ತುದಿಗೆ ಕನ್ನಡಕ. ಅದರ ಹಿಂದೆ ಸದಾರಮೆಯ ಕಳ್ಳ ನೋಟ. ಒಳಬಂದುದು ಬೆಕ್ಕಿನ ನಡಿಗೆಯಿಂದ. ಸದ್ದು ಮಾಡದೆ ನಡೆಯುವದು ದಾಸವರ್ಗದ ಶಿಷ್ಟಲಕ್ಷಣ. ಎದೆ ಮುಚ್ಚುವ ಉದ್ದನ ಕೋಟು, ಕಿವಿಯ ಮೇಲೆ ಲೆಕ್ಕಣಿಕೆ; ಮಿಶ್ರವರ್ಣದ ಅರೆಬೆಳೆದ ಗಡ್ಡ ಮುಖ ದಲ್ಲಿ. ಸಾಹೇಬರು ಮೇಜನ್ನು ಅಪ್ಪಳಿಸಿದಾಗ ಕೆಳಗೆ ಬಿದ್ದಿದ್ದ ಕಡ್ಡಿಪೆಟ್ಟಿಗೆ ಯನ್ನು ತೆಗೆದು ಮೇಜಿನ ಮೇಲಿಟ್ಟು ಆಂಜನೇಯನಂತೆ ಬಾಗಿ ಒಂದೆಡೆ ನಿಂತ. ಅರ್ಧ ಶತಮಾನ ಬಾಳಿ ಬರೀ ವಯೋವೃದ್ಧನಾಗಿದ್ದ ಈ ವ್ಯಕ್ತಿಯ ವರ್ತನೆ ಕಿರಿವಯಸ್ಸಿನ ಉಮೇಶನಿಗೆ ಹೇಯವೆನಿಸಿತು. ಧಿಕ್ಕಾರ ಧಿಕ್ಕಾರ ಎಂದು ಘೋಷಣೆಯನ್ನು ಮಾತ್ರ ಮಾಡಲಿಲ್ಲ.

ಕೋಪದಿಂದ ತಪ್ತರಾಗಿದ್ದ ಸಾಹೇಬರು ಮ್ಯಾನೇಜರನ ಪ್ರವೇಶ ವಾದ ಕೂಡಲೆ ಅದೆಂತೋ ಪ್ರಸನ್ನವದನರಾಗಿದ್ದರು. ಸಾಹೇಬರ ಕಲ್ಪನಾ ವಿಲಾಸಗಳು ಮ್ಯಾನೇಜರನಿಗೆ ಹೊಸವಲ್ಲ. ಅವನ ಮುಖವೇ ಅವೆಲ್ಲಕ್ಕೂ ಮಹಾಮಂತ್ರ. ಅವರಿವರ ಬಾಯಿಂದ ಚಾಡಿಮಾತು ಕೇಳಿ ಮ್ಯಾನೇಜರ ನನ್ನು ಮನೆಗೇ ಕಳಿಸುತ್ತೇನೆಂದು ಆರ್ಭಟದಿಂದ ಬಂದ ಅಹಿರಾವಣರಂತಹ ಎಷ್ಟೋ ಸಾಹೇಬರುಗಳು, ನಾಲ್ಕೇ ದಿನಗಳಲ್ಲಿಯೇ ಮ್ಯಾನೇಜರನ ಕೈಗೊಂಬೆಯಾಗಿ ಕುಣಿದಾಡಿ, ಕಡೆಗೆ ಅವನ ಕಿಸೆಯಲ್ಲಿಯೆ ಬಿದ್ದಿದ್ದರು. ಅದು ಅವನ ಕುಶಲತೆ. ಅವನ ರುಮಾಲಲವಲ್ಲಿ ತಾಮ್ರದ ತಾಯಿತ ಒಂದು ಇದೆಯೆಂದು ಆಫೀಸಿನಲ್ಲಿ ಗುಜುಗುಜು. ಮುಂಗೈ ತಿಕ್ಕುತ್ತ ಮಾತಿಗೆ ಆರಂಭ ಮಾಡಿದ :

" ಅವಧಿ ಮೀರಿದ್ದರೂ ಸುಡಲು ಕೊಡಬೇಕಾಗಿದ್ದ ಕಾಗದಗಳನ್ನು ಇವನು ಕೊಟ್ಟಿಲ್ಲ. ಐದೂ ಆರೂ ದಿವಸಗಳ ವಿಳಂಬವಾಗಿದೆ " ಎಂದು ಹೇಳಿ, ಉಮೇಶನ ಮುಖವನ್ನು ನೋಡಲು ಧೈರ್ಯ ಸಾಲದೆ ಸಾಹೇಬರ ಬಣ್ಣ ಹಚ್ಚಿದ ಬೂಟನ್ನು ನೋಡಿದ. ಸಾಹೇಬರಿಗೆ ಎಳೆ ಸಿಕ್ಕಿತು.

" ಏಕೆ ಕೊಡಲಿಲ್ಲ? ಐಯ್ " ಮುದ್ದಾಯಿಯ ಕಡೆ ತಿರುಗಿದರು.

" ಹೆಚ್ಚಿನ ಮಹತ್ವದ ಕಾಗದಗಳು ಕೈಲಿದ್ದವು........ "

ಹುಬ್ಬುಗಂಟಿಕ್ಕಿ ನಡುವೇ ಬಾಯಿಹಾಕಿ ಸಾಹೇಬರು ಘರ್ಜಿಸಿದರು :

" ಅಷ್ಟೇಕೆ ಚೀರಬೇಕು ? "

" ಸಹಜವಾಗಿಯೇ ನನ್ನ ಕಂಠ ದೊಡ್ಡದು. "

" ನೌಕರಿಗೆ ಬಂದನಂತರ ಕಂಠವನ್ನೂ ತಿದ್ದಿಕೊಳ್ಳತಕ್ಕದ್ದು. ತಿಳಿಯಿತೇ ? "

" ನಡೆ ನಿನ್ನ ಸ್ಥಳಕ್ಕೆ. "

ಉಮೇಶ ಆವೇಶದಲ್ಲಿ ಬಂದು ತನ್ನ ಕುರ್ಚಿಯಲ್ಲಿ ಕುಳಿತ. ಮುಖ ಎಲ್ಲವೂ ಕೆಂಪಡರಿದ್ದಿತು. ಅವಮಾನವನ್ನು ನುಂಗಿಕೊಂಡದ್ದಕ್ಕಾಗಿ ತನ್ನ ಮೇಲೆ ತನಗೇ ಕೋಪ ಬಂದಿತು. ಬಾಗಿಲ ಹಿಂದಿನಿಂದ ಕಿಟಕಿಯ ಸಂದಿನಿಂದ ಕದ್ದು ಕೇಳಿದ ಸಹಸೇವಕರು ಗುಂಪುಕಟ್ಟಿದರು. ಉಮೇಶನ ಎದುರಿನಲ್ಲಿ ಅವನ ಸಾಹಸಕ್ಕೆ ಶಹಬಾಸು ಕೊಟ್ಟು ಬೆನ್ನು ಚಪ್ಪರಿಸಿದರು. ಹಿಂದಿನಿಂದ ಉಮೇಶನ ಸೊಕ್ಕನ್ನು ಮುರಿಯಬೇಕೆಂದು ಮ್ಯಾನೇಜರನನ್ನು ಅಂಗಲಾಚಿ ಪ್ರಾರ್ಥಿಸಿದರು.

ಉಮೇಶನ ತಲೆ ಕಾಲೇಜುದಿನಗಳ ನೆನಪಿನ ಸರಣಿಯಲ್ಲಿ ಓಡಿತು. ವಿದ್ಯಾರ್ಥಿದೆಸೆಯಲ್ಲಿದ್ದಾಗ ತಾನು ಸವಿದ ಕನಸುಗಳಾವು ? ಮನೋರಾಜ್ಯದಲ್ಲಿ ಕಟ್ಟಿದ್ದ ಗೋಪುರವೆಂತಹುದು ? ಅಂದು ಕಣ್ಮುಂದೆ ನಿಂತಿದ್ದ ಧ್ಯೇಯಗಳೆಂತಹವು ? ಕಾಲೇಜಿನ ಮ್ಯೂಸಿಕ್ ಅಕೆಡಮಿಯಲ್ಲಿ ಸಹಕಾರ್ಯದರ್ಶಿಯಾಗಿ ಸಂಗೀತದಲ್ಲಿ ಅಭಿರುಚಿಯನ್ನು ಪಡೆದಿದ್ದ. ದಕ್ಷಿಣದ ಮಧುರ ಕೋಕಿಲೆಯಾದ ಎಮ್. ಎಸ್ಸಳ ಕಛೇರಿಯನ್ನು ಕಾಲೇಜಿನಲ್ಲಿ ಏರ್ಪಡಿಸಿದಂದಿನಿಂದಲೂ ಬಿ. ಎ. ಮುಗಿಸಿದ ಕೂಡಲೆ ದಕ್ಷಿಣಕ್ಕೆ ಹೋಗಿ ಭಾಗವತರ್ ಆಗಲೇಬೇಕೆಂದು ನಿರ್ಧರಿಸಿದ್ದ. ಉದಯಶಂಕರನ ಶಿವಲಾಸ್ಯವನ್ನು ಕಂಡು ಮೈ ನಡುಗಿದಾಗ ತಾನೂ ನಟರಾಜನಾಗಬೇಕೆಂದು, ಬೆಳಗಾದ ಕೂಡಲೆ ನಿಲುಗನ್ನಡಿಯನ್ನೊಂದು ತಂದು ಗೋಡೆಗೆ ತಗಲಿಸಿ, ಕೈ–ಕಾಲು ತಿರುವಿ, ಹುಬ್ಬು ಹಾರಿಸಿ, ಗೆಜ್ಜೆ ಕಟ್ಟಿ, ಹೆಜ್ಜೆಹಾಕಿದ. ಮಣಿಪುರಿಯ ಕಲಾಮಂಡಲಿಯೊಡನೆ ಏರ್ಮೇಲಿನಿಂದ ಪತ್ರವ್ಯವಹಾರ ನಡೆಸಿದ. ಕಥಕ್ಕಲಿಯ ನಂಬಿ

ಯಾರಿಗಾಗಿ ತಾರು ಮಾಡಿದ. ಕಾಲೇಜು ಯೂನಿಯನ್ನಿನ ಭಾಷಣಗಳಲ್ಲಿ ಆಕರ್ಷಕಪದಗಳ ಬಂಡವಾಳವನ್ನೆಲ್ಲ ಬಳಸಿ ಸ್ತ್ರೀಸ್ವಾತಂತ್ರ್ಯವನ್ನು ಘೋಷಿಸಿದ, ಹಳ್ಳಿಗಳನ್ನು ಉದ್ಧರಿಸಿದ, ವಿಧವೆಯರಿಗೆ ಮಂಗಳಸೂತ್ರ ಕಟ್ಟಿಸಿದ, ಹರಿಜನರೊಟ್ಟಿಗೆ ಗಂಡು–ಹೆಣ್ಣು ನಡೆಸಿದ, ಮ್ಲೇಂಛ ರಾಜ್ಯವನ್ನು ಓಡಿಸಿ ರಾಮರಾಜ್ಯವನ್ನು ಸ್ಥಾಪಿಸಲು ಮುಖ್ಯವಾಗಿ ಸ್ಟೂಡೆಂಟ್ ಕಾಂಗ್ರೆಸ್ ನಿರ್ಮಿಸಿದ. ಶತಮಾನಗಳಿಂದ ದಾಸ್ಯದ ಸಂಕೋಲೆಯಲ್ಲಿ ಸೆರೆಬಿದ್ದ ಭಾರತ ಮಾತೆಯನ್ನು ಬಂಧವಿಮುಕ್ತಳನ್ನಾಗಿ ಮಾಡಿದ. ಇದೇ ತನ್ನ ಜನ್ಮಕರ್ತವ್ಯ, ಬಾಳಿನ ಧರ್ಮ, ಹುಟ್ಟಿನ ಅರ್ಥ, ಬದುಕಿನ ಮರ್ಮ, ಸಾವಿನ ಸಾರ್ಥಕ ಎಂದು ಚೀರಿ ಸಾರಿ ಹೂಮಾಲೆಗಳನ್ನು ಹಾಕಿಸಿಗೊಂಡ. ಮಾನವ ಸುಖಕ್ಕೆ ಗೆರಗಸಪ್ಪಾಯವಾಗಿ ಸಹಸ್ರಾರು ರಕ್ಕಸರಂತೆ ನಿಂತಿದ್ದ ಈಚಲು ಗಿಡಗಳ ರುಂಡ ಗಳನ್ನು ಚೆಂಡಾಡಿದ. ಆ ನೀಚ ಕುಲವನ್ನೇ ನಿರ್ಮೂಲ ಮಾಡಿದ. ಸಾತಂತ್ರ್ಯ ದಿನಾಚರಣೆ ಸಭೆಯ ಅಧ್ಯಕ್ಷ, ಮೆರವಣಿಗೆಯಲ್ಲಿ ಮುಂದಾಳು.

ಭಾರತಾಂಬೆಯ ಬಂಧವಿಮೋಚನೆಗೆ ಕಂಕಣತೊಟ್ಟು ರಾಷ್ಟ್ರಧ್ವಜದ ಅಡಿಯಲ್ಲಿ, ಮಹಾತ್ಮನ ಭಾವಚಿತ್ರದ ಎದುರಿನಲ್ಲಿ, ಜನತಾ ಸೇವೆಯ ಆಕಾಂಕ್ಷೆ ಯಲ್ಲಿ, ಉಕ್ಕುತ್ತಿದ್ದ ರಾಷ್ಟ್ರಭಕ್ತಿಯ ಉನ್ಮಾದದಲ್ಲಿ, ಸ್ತ್ರೀವಿದ್ಯಾರ್ಥಿಗಳ ಕರತಾಡನದ ಹುಮ್ಮಸದಲ್ಲಿ ಪ್ರತಿಜ್ಞೆಯನ್ನು ಮಾಡಿದ, ಪಣವನ್ನು ತೊಟ್ಟ, ಗಗನ ಭೇದಿಸುವಂತೆ ಜಯಜಯಕಾರ ಮಾಡಿದ. ಮೊಹರಮ್ಮಿನ ಪೀರಲಿ ನಂತೆ ಹೂಮಾಲೆಗಳನ್ನು ಹೊತ್ತು, ತಾರಿನ ಹೆದ್ದಾರಿಗಳ ಮೇಲೆ ವೀರನಾಗಿ ಹಣೆಯಲ್ಲಿ ಕುಂಕುಮವಿಟ್ಟು ಮೆರೆದ. ಅದೆಲ್ಲವೂ ಒಂದು ನಾಟಕ. ಬಣ್ಣ ಬಳೆದು, ವೇಷ ಧರಿಸಿ, ರಂಗಭೂಮಿಯ ಮೇಲೆ ಬಂದು ಪಾತ್ರಕ್ಕೆ ತಕ್ಕು ದಾದ ಮಾತುಗಳನ್ನಾಡಿದ್ದಾಯಿತು. ಪ್ರೇಕ್ಷಕರ ಮನಸ್ಸು ಮೆಚ್ಚುವಂತೆ, ಪಾತ್ರಕ್ಕೆ ಒಪ್ಪುವಂತೆ, ಸಮಯಕ್ಕೆ ತಕ್ಕಂತೆ ಕುಣಿದದ್ದಾಯಿತು. ನಾಟಕ ಮುಗಿಯಿತು. ಬಣ್ಣ ಅಳಿಸಿತು. ಪೋಷಾಕು ಹೋಯಿತು. ತಂಗಳ ನಿದ್ರೆ ಮುಗಿದು ನಡು ಹಗಲಿನ ಅರಿವು ಉಂಟಾಗಿದೆ. ಬೆಳ್ಳಂಬೆಳಗಾಗಿದೆ. ಈಗ ಆ ಉಮೇಶನೆಲ್ಲಿ ? ಏನನ್ನು ಮಾಡುತ್ತಿದ್ದಾನೆ ? ಯಾರ ಉದ್ಧಾರದಲ್ಲಿ ತೊಡಗಿದ್ದಾನೆ ? ಇಂದು ಆ ಉಮೇಶನ ರಕ್ತ ಸತ್ತ ಕಾಗದಗಳಿಗಾಗಿ ಮುಡಿಪು. ಮೂವತ್ತೇ ರೂಪಾಯಿ ವೇತನಕ್ಕೆ ತನ್ನನ್ನು ತಾನು ಮಾರಿ

ಕೊಂಡಿದ್ದಾನೆ. ಅಂದು ಭಾರತಾಂಬೆಗೆ ಬಂಧವಿಮೋಚನೆಯ ಅಭಯ ಕೊಟ್ಟ ರಾಷ್ಟ್ರವೀರ ಇಂದು ದಾಸಕೂಟದಲ್ಲಿ ಬಂಧಿತನಾಗಿ ಬಾಯಿಬಿಡುತ್ತಲಿದ್ದಾನೆ. ತನ್ನ ಸ್ಥಿತಿಯನ್ನು ಕಂಡು ತನಗೇ ಹೇಸಿಗೆ ಎನಿಸಿತು. ರೋಷ ತಲೆ ಎತ್ತಿತು. ತಲೆಯ ಮೇಲೆ ಕೈ. ಕಣ್ಣೆತ್ತಿ ನೋಡಿದ. ಮ್ಯಾನೇಜರ ! ತನ್ನ ಭಾವನಾಸ್ವರ್ಗ ದಿಂದ ನಿಜಸ್ಥಿತಿಯ ನರಕಕ್ಕೆ ಜರ್‍ರೆಂದು ಜಾರಿದ. ಕಣ್ಣಲ್ಲಿದ್ದ ಜ್ವರ ಮಾಯ ವಾಯಿತು. ವಿಚಾರ ಕುಂಠಿತವಾಯಿತು. ಸುತ್ತುಮುತ್ತಲಿನ ಅರಿವುಂಟಾ ಯಿತು. ಕುಳಿತಲ್ಲಿಂದ ಮೆಲ್ಲಗೆ ಎದ್ದು ಮಾತನಾಡಲು ತಡವರಿಸಿದ. ಉಗುಳು ನುಂಗಿದ. ಉಮೇಶನ ಭಾವನೆಯಲ್ಲಿಯ ಮುಗಿಲು ಮುಟ್ಟುವ ಗೋಪುರಗಳ ನ್ನೆಲ್ಲ ಒಮ್ಮೆಲೆ ನುಂಗುವ ಒಂದೇ ಒಂದು ನಗು—ಶಕುನಿಯ ಪಗಡೆ ಆಟದ ನಗು—ಮ್ಯಾನೇಜರನ ಮುಖದಲ್ಲಿ ಸುಳಿದಾಡುತ್ತಿದ್ದಿತು.

"ಸಾಹೇಬರ ಮೇಲೆ ಕೋಪ ಬಂದಿತೇನೋ, ಉಮೇಶ ?" ಎಂದು ರಮಿಸಿದರು. ಅವರ ದನಿಯಲ್ಲಿ ಅಡಕವಾಗಿದ್ದ ಅಣಕನ್ನು ಉಮೇಶ ಗುರುತಿ ಸಿರಲಿಲ್ಲ. ನಿರುತ್ತರನಾದ. ಕೋಪ ಬಂದುದೇನೋ ನಿಜ. ಆದರೆ ಅದು ಸಾಹೇಬರ ಮೇಲಲ್ಲ, ಮ್ಯಾನೇಜರನ ಮೇಲಲ್ಲ, ತನ್ನ ಮೇಲೂ ಅಲ್ಲ, ಈ ಅನರ್ಥಪರಂಪರೆಗೆ ಕಾರಣರಾಗಿದ್ದ ತನ್ನ ತೀರ್ಥರೂಪರ ಮೇಲೆ. ಆದರೆ ಉಮೇಶನ ಕೋಪ ಅಲ್ಲಿ ಸಾಗುವಂತಿಲ್ಲ.

## ೨. ಅಪ್ಪನಿಗೆ ಆಹುತಿ

ರಾವಸಾಹೇಬ ರಂಗನಾಥರಾಯರು ಹೆಮ್ಮೆ ಪಡುವಂತಹ ಸಾಹಸಿಗರು. ಬರಗಾಲದಲ್ಲಿ ಬರೀ ಹನ್ನೆರಡೇ ರೂಪಾಯಿ ವೇತನದ ಮೇಲೆ ಸರಕಾರದಲ್ಲಿ ನೌಕರಿಗೆ ಸೇರಿದ್ದರೂ ಬಹುಕಾಲ ತಹಸೀಲೆಯ ವರ್ಗದಲ್ಲಿ ತಾಲೂಕು ಗಳನ್ನು ಆಳಿ, ಹೆಚ್ಚಿನ ಪದವಿ ದೊರೆಯುವ ಮುನ್ನೆಯೇ ದುರ್ದೈವದಿಂದ ವಯಸ್ಸು ಮೀರಿ ಅಧಿಕಾರದಿಂದ ನಿವೃತ್ತರಾಗಿದ್ದರು. ಅವರ ರಾಜನಿಷ್ಠೆ ನಾಣ್ಣುಡಿಯಾಗಿದ್ದಿತು. ತಾವು ತಿನ್ನುವ ಉಪ್ಪು ತಮ್ಮನ್ನಾಳುತ್ತಿದ್ದ ಅರಸರ ದೆಂದು ಅವರ ಸಂಪೂರ್ಣ ವಿಶ್ವಾಸವಿದ್ದುದರಿಂದ ಕಾಯಾ, ವಾಚಾ, ಮನಸಾ ದಾತನ ಹಿತವನ್ನೇ ಸರ್ವದಾ ಕೋರುತ್ತಿದ್ದರು. ಕಾಂಗ್ರೆಸ್ ಎಂದರೆ ಅವರ ಪಾಲಿಗೆ ತುಂಟರ ತಂಡ. ಕೇಸುಗಳಿಲ್ಲದ ವಕೀಲರು, ರೋಗಿಗಳಿಲ್ಲದ

ಡಾಕ್ಟರುಗಳು, ಉದ್ಯೋಗ ದೊರೆಯದ ಬ್ರಾಹ್ಮಣರು, ಗಂಡಬಿಟ್ಟ ಗಯ್ಯಾಳಿಗಳು ನಡೆಸಿರುವ ಸಂಚು ಇದೊಂದು ಎಂದು ಆಗಾಗ್ಗೆ ತಮ್ಮ ಚಿಕ್ಕ ಹೆಂಡತಿಯ ಮುಂದೆ ಅಂದೂ ತೋರಿಸಿದ್ದರು. ಹಿಂದೂಸ್ಥಾನದ ಪ್ರಮುಖ ಭಾಷೆಗಳಲ್ಲಿ ಏಳನೆಯದಾದ ಕನ್ನಡಕ್ಕೆ ಲಿಂಗಾಯತರ ಭಾಷೆಯೆಂದೂ, ಗಾಂಧಿಯಂತಹ ಮಹಾ ವಿಭೂತಿಗಳಿಗೂ ಪವಿತ್ರವಾದ ಖಾದಿಗೆ ಬ್ರಾಹ್ಮಣರ ಬಟ್ಟೆಯೆಂದೂ ಎಷ್ಟೋ ಬಾರಿ ನಗೆಯಾಡಿದ್ದರು. ಜಗತ್ತಿನಲ್ಲಿ ಎರಡೇ ಅಭಿಪ್ರಾಯಗಳು ಅವರ ದೃಷ್ಟಿಯಲ್ಲಿ, ತಮ್ಮದೊಂದು—ಮೂರ್ಖರದಿನ್ನೊಂದು. ಅವರೊಡನೆ ವಾದ ಹೂಡುವವರೂ ವಿರಳ. "ಗೊತ್ತಿದೆ ನಿಮ್ಮ ಕಾಂಗ್ರೆಸ್. ಒಂದು ಸವುಟು ಹುಳಿಗಾಗಿ ಜೈಲಿನಲ್ಲಿ ಯಾದವೀ ಯುದ್ಧ ನಡೆಸಿದ ಮಹಾತ್ಯಾಗಿಗಳು ನೀವು. ಸ್ವರಾಜ್ಯವಂತೆ ಇವರ ತಲೆ" ಎಂದು ಮಾತು ಮುಗಿಸಿಬಿಡುತ್ತಿದ್ದರು. ಹೊಲೆಯರಿಗೆಂದೂ ಅವರು ಹರಿಜನರೆಂದಿರಲಿಲ್ಲ. ಮನೆಯ ಮುಂದೆ ಪಂಚಮರನ್ನು ಹಾಯಗೊಡದಿದ್ದರೂ ಒಳಕೋಣೆಯಲ್ಲಿ ಮಾತ್ರ ಷಡ್ಜಮರಾದ ಪಂಚಮ ಜಾರ್ಜ್ ಚಕ್ರವರ್ತಿಯವರ ಮತ್ತು ವಿಕ್ಟೋರಿಯಾ ಮಹಾರಾಣಿಯವರ ಭಾವಚಿತ್ರಗಳನ್ನು ತೂಗುಬಿಟ್ಟಿದ್ದರು. ರಾಜಾ ಪ್ರತ್ಯಕ್ಷ ದೇವತಾ!

ಕೈನಡೆಯುವ ಕಾಲದಲ್ಲಿ ಊರ ಬದಿ ದೊಡ್ಡೊಂದು ಬಂಗಲೆಯನ್ನು ಕಟ್ಟಿಸಿ ಆಧುನಿಕ ಪದ್ಧತಿಯಂತೆ ಅದಕ್ಕೆ 'ಆನಂದ ವಿಲ್ಲ' ಎಂದು ಹೆಸರು ಕೆತ್ತಿಸಿದರು. ಹಲವೇ ದಿವಸಗಳಲ್ಲಿಯೇ ಸಾಲುಸಾಲು ಮನೆಗಳಾಗಿ ಊರು ಅಲ್ಲಿಯೂ ಬೆಳೆಯಿತು. ಬಿಳೀ ಟೊಪ್ಪಿಗೆಯ ಕಿರಿಯರ ಹಿರಿತನದಲ್ಲಿ ಆ ಎಕ್ಸ್‌ಟೆನ್ಶನ್ನು ಗಾಂಧೀ ನಗರವಾಯಿತು. ಕೂಡಲೆ ರಂಗರಾಯರು ಕೈಗೆ ಬಂದ ಬೆಲೆಗೆ ಬಂಗಲೆಯನ್ನು ಮಾರಿ, ಜಾರ್ಜ್ ಟೌನಿನಲ್ಲಿ ಹಳೆಯ ಮನೆಯೊಂದನ್ನು ಹೊಸದಾಗಿ ಬೆಲೆಗೆ ತೆಗೆದುಕೊಂಡು ಕಾಪುರಮಾಡಿದರು.

ರಂಗನಾಥರಾಯರ ತಹಸೀಲೆಯ ಆಳಿಕೆಯಲ್ಲಿ ಅವರ ತಾಲೂಕು ಮೂರು ವರ್ಷಗಳು ಮಳೆ ಕಾಣದೆ ಮಹಾ ಕ್ಷಾಮಕ್ಕೆ ಈಡಾಯಿತು. ಅನ್ನವಿಲ್ಲದೆ ಜನರು ಸತ್ತರು. ಮೇವಿಲ್ಲದೆ ದನಗಳು ಮಡಿದವು. ರೈತರು ಮನೆಮಾರು, ಇದ್ದೆರಡು ದನಕರುಗಳನ್ನೂ ಬಿಟ್ಟು, ಹೊಟ್ಟೆಯ ಪಾಡಿಗಾಗಿ ಪರಪ್ರಾಂತಗಳಿಗೆ ಗುಳೆಹೋದರು. ಆದರೆ ಕರ್ತವ್ಯದಕ್ಷತೆಗೆ ಕಂಕಣಬದ್ಧರಾದ

ರಂಗರಾಯರು ಮಾತ್ರ ಸತ್ತ ದನಗಳನ್ನು ಸಹ ಲಿಲಾವು ಮಾಡಿಸಿ, ಭೂಕಂದಾಯವನ್ನೂ ತಕಾವಿ ರಕಮನ್ನೂ ಸರಕಾರಕ್ಕೆ ತುಂಬಿ ಅಧಿಕಾರ ದಿಂದ ನಿವೃತ್ತರಾದರು. ಅದೇ ವರ್ಷ ಅವರಿಗೆ ರಾವಸಾಹೇಬಗಿರಿಯೂ ಲಭಿಸಿತು. ಯುದ್ಧನಿಧಿಗೆ ಪುಷ್ಕಳವಾಗಿ ಸಹಾಯವನ್ನು ದೊರಕಿಸಿಕೊಟ್ಟು, ಸಭೆಯಲ್ಲಿ ಗವ್ಹರ್ನರರ ಭಾಷಣವನ್ನು ರಂಗರಾಯರೇ ಕನ್ನಡೀಕರಿಸಿದರು. ದೇವಾಂಶಸಂಭೂತರಾದ ಸಾಕ್ಷಾತ್ ಗವ್ಹರ್ನರರು ರಂಗರಾಯರ ಹಸ್ತ ಲಾಘವ ಮಾಡಿ, ಅವರ ಹೆಸರನ್ನು ಸಹ ವಿಚಾರಿಸಿ ಮರುಕ್ಷಣವೇ ಮರೆತೂ ಬಿಟ್ಟರು.

ಅಧಿಕಾರದಲ್ಲಿದ್ದಾಗ ರಂಗರಾಯರ ಹಣ ಸಂಪಾದನೆಯ ಮಾರ್ಗ ಗಂಭೀರ ಗೌರವ ಪರಿಪೂರ್ಣವಾಗಿದ್ದಿತು. ಸುಣ್ಣ, ಬೆಣ್ಣೆ, ಸಿಪ್ಪೆ, ಸೌದೆ ಮುಂತಾದವಕ್ಕೆಂದೂ ಅವರು ಬಾಯ್ತೆಗೆದವರಲ್ಲ. ಕಾಶೀಯಾತ್ರೆಯ ಮಾರ್ಜಾಲಋಷಿ ಗಜಭಕ್ಷಕರೆಂಬುದನ್ನು ಪಿಂಡ ಇಕ್ಕಿದವರು ಮಾತ್ರ ಎಂದೂ ಮರೆಯುವಂತಿರಲಿಲ್ಲ. ಆದರೂ ' ಸಾಚ ' ಎಂದು ಹೇಗೋ ಹೆಸರಾಗಿ ದ್ದರು. ಲಂಚದ ಪ್ರಶ್ನೆ ಬಂದಾಗ ರಾಯರಿಗೆ ರಾಜನಿಷ್ಠೆ ಎರಡನೆಯದು. ಒಬ್ಬನೇ ಮಗನಾದ ಉಮೇಶನ ಯಜ್ಞೋಪವೀತ ಮಹೋತ್ಸವವನ್ನು ಎರಡು ಬಾರಿ ಮಾಡಿದ್ದರು. ಎರಡನೆಯ ಸಲ ತಹಶೀಲದಾರರಾಗಿ ಮಾಡಿದ್ದ ಕ್ಕಾಗಿ ಉಡುಗೊರೆ, ಬೆಳ್ಳಿಯ ಆಭರಣಗಳು ಮಳೆಗರೆದವು. ತಾವಂತೂ ಮೂರು ಬಾರಿ ಮದುವೆಯಾಗಬೇಕಾಯಿತು. ಮೊದಲನೆಯ ಹೆಂಡತಿ ಬಹು ಚಿಕ್ಕಂದಿನಲ್ಲಿಯೇ ಗತಿಸಿಹೋಗಿದ್ದಳು. ನಡುಹರೆಯದಲ್ಲಿ ಕೈಹಿಡಿದು, ಬಡ ತನವನ್ನು ನೋಸಿ, ಉಮೇಶನನ್ನು ಹೆತ್ತು, ಹಲವು ಕಾಲ ಬಾಳಿ, ರಂಗ ರಾಯರ ಇಳಿವಯಸ್ಸಿನಲ್ಲಿ ಎರಡನೆಯ ಹೆಂಡತಿಯೂ ಕೈಬಿಟ್ಟು ರಾಯರಿಗೆ ಅನ್ಯಾಯ ಮಾಡಿದ್ದಳು. ಜೀವನದಲ್ಲಿ ದೊಡ್ಡ ಸಮಸ್ಯೆ ಘಟಿಸಿದುದು ರಂಗ ರಾಯರಿಗೆ ಅದೇ ಮೊದಲನೆಯ ಬಾರಿ. ಮದುವೆಯ ಮಾತೆತ್ತಿದವರ ಮೇಲೆ ಕೆಂಡ ಕಾರಿ, ಇನ್ನೊಂದು ಮದುವೆ ಎಂದಿಗೂ ಆಗದು ಎಂದು ಹಟಹಿಡಿದು ಸುಮಾರು ಹತ್ತು ವರುಷಗಳನ್ನು ವಿಧುರಾಶ್ರಮದಲ್ಲಿಯೇ ಕಾಲತೆಗೆದರು. ರಾಯರಿಗೆ ಕೈಕಾಲು ತೊಡಕಾಗುವ ಮಕ್ಕಳಿರಲಿಲ್ಲ. ಒಬ್ಬನೇ ಮಗನಾದ ಉಮೇಶ ಕಾಲೇಜಿನಲ್ಲಿ ಅಭ್ಯಾಸ ಮಾಡುತ್ತ ಪಟ್ಟಣದಲ್ಲಿಯೇ ಇದ್ದ.

ತಮ್ಮೊಬ್ಬರ ಊಟ ಉಪಚಾರಗಳಿಗೆ ಹೇಗೂ ಇದ್ದ ಅನ್ನದಾತ—ಉಡುಪಿ ನಾರಾಯಣ.

ಮುಪ್ಪಿನೊಟ್ಟಿಗೆ ತಹಸೀಲಿ ಬಂದು ತಲೆಶೂಲೆ ತಂದಿತು. ಅಧಿಕಾರ ದೊಂದಿಗೆ ಹಣ ಬಂದಿತು. ಅದರ ನೆರಳಾದ ಗೌರವವೂ ಹಿಂಬಾಲಿಸಿತು. ರಂಗರಾಯರು ಆಟಕ್ಕೆ ತಕ್ಕ ವೇಷ ಹಾಕಿ, ವೇಷಕ್ಕೆ ತಕ್ಕ ಭಾಷೆ ಆಡಿದರು. ದಿನವಹಿ ಜಿಲ್ಲಾ ಸಾಹೇಬರ ಬಂಗಲೆಗೆ ಹೋಗಿ ಅಮ್ಮಾವರ ಪರಾಮರಿಕೆ ನೋಡಿಕೊಂಡರು. ಅಮ್ಮಾವರು ತಲೆನೋವು ಎಂದ ದಿನವೆಲ್ಲಾ ರಾಯರಿಗೆ ಸಿಹಿಯೂ ಕಹಿಯೇ. ಉಮೇಶನ ತಾಯಿಗೆ ಇಷ್ಟು ಮಾತ್ರ ದೊರೆತಿದ್ದರೆ ಇನ್ನೂ ಹಲವು ಕಾಲ ಬದುಕುತ್ತಿದ್ದಳೋ ಏನೋ, ಪಾಪ! ಬಂಗಲೆಗೆ ಕೋಳಿಯ ಮೊಟ್ಟೆ, ಕ್ಯಾಬೇಜು ಬುಟ್ಟಿಗಳನ್ನು ರವಾನಿಸಿದರು. ಪುಣ್ಯತಿಥಿ ಗೌಣವಾರಗಳ ಲೆಕ್ಕ ತಪ್ಪಿ, ದಿನ ಬಿಟ್ಟು ದಿನ ಮುಖ, ವಾರ ಬಿಟ್ಟು ವಾರ ತಲೆ ಕ್ಷೌರಮಾಡಿಸಿ ನೇಮ ಬಿಟ್ಟರು. ಕೈಕೆಳಗಿನ ಹೊಸ ಕಾರಕೂನರಂತೆ ತಾವೂ ಆಂಗ್ಲ ರೀತಿಯ ಉಡುಪನ್ನೇ ತೊಡಹತ್ತಿದರು. ಕತ್ತಿನ ಗಂಟು ಮಾತ್ರ ಕೆಲಕಾಲ ಅವರಿಗೆ ತೊಡರೆನಿಸಿತು. ಆಫೀಸಿನಲ್ಲಿದ್ದ ಒಬ್ಬ ಚಿಕ್ಕ ಕಾರಕೂನರು ರಂಗರಾಯರಿಗೆ ನಿತ್ಯವೂ ಟೈಯನ್ನು ಬಿಗಿಯುತ್ತಿದ್ದರು. ಆ ಕಾರಕೂನರಿಗೆ ಉಳಿದವರೆಲ್ಲ ಅಂಜುತ್ತಿದ್ದರು. ವೇತನ ಹೆಚ್ಚಾಗಿ, ಕೆಲಸದ ವೇದನೆ ಕಡಿಮೆಯಾಗಿ ಬೊಜ್ಜು ದುಂಡಾಯಿತು. ಹಾಳುಬಿದ್ದ ಬಾಯಿ ಹಲ್ಲು ಕಂಡಿತು. ಮೀಸೆ ಕಪ್ಪಾಗಿ ಮೊಗ ಕಳೆಗಟ್ಟಿತು. ಬೋಳು ತಲೆಯಲ್ಲಿ ಬೈತಲು ಮೂಡಿತು. ಗೃಹಪತ್ನಿ ಇಲ್ಲದ ಗೃಹದಲ್ಲಿ ಸ್ತ್ರೀಪಾಕ ಸುರುವಾಗಿ ರಾಯರ ಪ್ರಾಯ ಮರುಕಳಿಸಿತು. ಲೇಹ್ಯ, ಘುಟಿಕ, ಗುಗ್ಗುಳ, ಘೃತ, ಖ್ವಾತ, ಮಕರಧ್ವಜ, ಶಿಲಾತ್ರಿವಂಗಗಳು ರಾಯರ ಮೇಜಿನ ಮೇಲೆ ಏರಿ ಸಾಲಾಗಿ ಕುಳಿತವು.

ಉಮೇಶನಿಗೆ ನಾತಾಳಿ ಸೂಟಿ. ಪಟ್ಟಣ ಬೇಜಾರೆನಿಸಿ ತಂದೆಯ ಕಡೆಯೊಮ್ಮೆ ಮನಸ್ಸು ಜಗ್ಗಿತು. ಸೂಟಿಯಲ್ಲಿ ಊರಿಗೆ ಬರುತ್ತೇನೆಂದು ಬಹು ಹಿಗ್ಗಿ ಬರೆದ. ಪತ್ರವನ್ನು ಕಂಡು ರಾಯರು ಹುಬ್ಬುಗಂಟಿಕ್ಕಿದರು. ತಾವು ಜಮಾಬಂದಿಯ ಗಡಿಬಿಡಿಯಲ್ಲಿದ್ದಾರೆಂತಲೂ ಉಮೇಶ ಊರಿಗೆ ಬರುವದು ಅನವಸರವೆಂತಲೂ ಸೂಚಿಸಿ, ಪಟ್ಟಣದಲ್ಲಿಯೇ ಇದ್ದು ಮುಂದಿ

ಬರುವ ಪರೀಕ್ಷೆಗೆ ಓದಿಕೊಳ್ಳತಕ್ಕದ್ದೆಂಬೂ ತಿಳಿಸಿ, ಕೇಳುವ ಮುನ್ನೆಯೇ ಹಣವನ್ನು ಕಳಿಸಿಕೊಟ್ಟರು. ಬಾಸ್ವೆಲ್ಲನ ಜಾನ್ಸನ್‌ನಲ್ಲಿ ಪುತ್ರಪ್ರೇಮಕ್ಕೆ ಕೊಟ್ಟ ಮಹತ್ವಕ್ಕೆ ಮೆಚ್ಚಿ ಬೆರಳು ಕಚ್ಚಿದ ಉಮೇಶನಿಗೆ ತಂದೆಯ ಪತ್ರ ವನ್ನು ಕಂಡ ಕೂಡಲೆ ಲಜ್ಜೆನಿಸಿತು. ಹಲವು ದಿನಗಳ ನಂತರ ಅವರಿವರ ಬಾಯಿಂದೊಂದು ವಿಷಯವನ್ನು ಕೇಳಿದ. ನಿಜವಿರಬಹುದೆಂದು ಎನಿಸಿದರೂ ನಂಬಲು ಮನಸ್ಸು ಒಗ್ಗಲಿಲ್ಲ. ಸುಳ್ಳಿರಬಹುದೆಂದು ಕಳ್ಳಸಮಾಧಾನವನ್ನು ಹೇಳಿಕೊಂಡ. ಆದರೆ ಅದು ಬಹುಕಾಲ ಉಳಿಯಲಿಲ್ಲ. ಹಲವರು ತನ್ನನ್ನೇ ಕೇಳಿದರು. ಕೆಲವರು ಆತ್ಮೀಯರು ನಿಜವೆಂದು ಹೇಳಿದಾಗ ಉಮೇಶನಿಗೆ ಖೇದವೆನಿಸಿತು. ಮುಪ್ಪಿನಲ್ಲಿ ತನ್ನ ತಂದೆಗೆ ಆದ ಬುದ್ಧಿಭ್ರಮೆಗೆ ವಿಷಾದ ವಾಯಿತು. ಹತ್ತು ವರ್ಷಗಳಿಲ್ಲದ ಹುಚ್ಚು ಇಂದೇಕೆ ಹಿಡಿಯಿತು ಎಂಬ ಯೋಚನೆಯಲ್ಲಿಯೇ ಹೈರಾಣಾದ. ಮನಸ್ಸು ಗೊಂದಲಕ್ಕೀಡಾಯಿತು. ತಲೆ ತಗ್ಗಿಸಿ ಗೆಳೆಯರ ಗುಂಪಿನಿಂದ ದೂರಾದ. ಕನ್ಯಾಬಲಿ ಆಗುವದೆಂದು ಕಂಬನಿ ಇಕ್ಕಿದ. ಹೇಗಾದರೂ ಮಾಡಿ, ಏನಾದರೂ ಹೂಡಿ ಈ ಮದುವೆ ಯನ್ನು ಮುರಿಯಲೇಬೇಕೆಂದು ಮನಸು ಮಾಡಿದ. ಆದರೆ ತನ್ನಿಂದಾ ಗುವದೇನು? ತಂದೆಯ ಮುಂದೆ ನಿಂತು ಮಾತನಾಡುವ ಸಾಹಸವನ್ನು ಸಹ ಇಂದಿನ ವರೆಗೂ ಮಾಡಿದವನಲ್ಲ. ಮೊದಲು ಭಯ, ಆ ಮೇಲೆ ಪ್ರೇಮ– ಅವಿಚ್ಛಿನ್ನ. ತಂದೆಯ ಇಚ್ಛೆ ತನಗೆ ವೇದ, ಧರ್ಮ, ಶಾಸ್ತ್ರ, ಇನ್ನೆಲ್ಲವೂ. ಸ್ವಪ್ನದಲ್ಲಿಯೂ ತಂದೆಯನ್ನು ಇದುರಿಸಲಾರ. ಮನದಲ್ಲಿಯೂ ತಂದೆಯನ್ನು ನಿಂದಿಸಲಾರ. ಇಂತಹ ಉಮೇಶ ತಂದೆಯ ಮದುವೆಗೆ ಅಡ್ಡಿತರುವದೆಂತು? ರಾತ್ರಿ ಹಗಲುಗಳು ಯೋಚನೆಯಲ್ಲಿಯೇ ಉರುಳಿದವು. ಜನ್ಮದಾತನ ಸುಖಕ್ಕೆ ಎರಡು ಬಗೆವುದು ಅನ್ಯಾಯದ ಪರಮಾವಧಿ ಎಂದು ಪರಿತಪಿಸಿದ. ವೃದ್ಧಪಿತೃವಿನ ದೃಷ್ಟಿಕೋನದಿಂದ ಸಮಸ್ಯೆಯನ್ನು ಪರಿಶೀಲಿಸಿದ. ತನ್ನ ಸಲುವಾಗಿಯೇ ತನ್ನ ತಂದೆ ಬಾಳಬೇಕೆ? ಅವರಿಗೆ ಮಾತ್ರ ಸುಖಭೋಗ ಗಳು ಬೇಡವೇ? ಇಳಿವಯಸ್ಸಿನಲ್ಲಿ ಕಡೆಗೊಂದು ಬಾರಿ ಲೈಂಗಿಕ ಚೈತನ್ಯ ಪುನರ್ವ್ಯಕ್ತವಾಗುತ್ತದೆಂದು ಮರ್ಮಶಾಸ್ತ್ರಜ್ಞರು ಅಂದುದು ನೆನಪಾಯಿತು. ವೃದ್ಧ ತಂದೆಗಾಗಿ ಮರುಕ ಹುಟ್ಟಿತು. ತಂದೆಯ ಇಚ್ಛೆಗೆ ಮನದಲ್ಲಿ ಎರಡು ಬಗೆದುದಕ್ಕಾಗಿ ಕೆಡಕೆನಿಸಿತು. ಅನನುಭವದ ರಭಸದಲ್ಲಿ, ಅಪಕ್ವ ವಿಚಾರದ

ಆರ್ಭಟದಲ್ಲಿ ಮಾಡಿದ ನಿರ್ಧಾರವನ್ನು ಬದಿಗಿಟ್ಟು ರದ್ದುಮಾಡಿದ. ತಾನೇ ಸೊಂಟಕಟ್ಟಿ ನಿಂತು ಮದುವೆಯನ್ನು ಮಾಡಿ, ಜನ್ಮದಾತನಿಗೆ ಮುಪ್ಪಿನಲ್ಲಿ ಐಹಿಕ ಸುಖವನ್ನು ಒದಗಿಸಿ ಕೊಡುವದು ಪುತ್ರನಾದ ತನ್ನ ಕರ್ತವ್ಯವೆಂಬು ದನ್ನು ಅರಿತುಕೊಂಡ. ಆದರೆ?

ಆದರೇನು? ತನ್ನ ಭಾವೀ ಮಾತೃವಿಗಾಗಿ ಅಂತಃಕರಣ ಕದಡಿತು. ಕರುಳು ಕುಟಿಕಿತು. ಜಾತಿದಾಸ್ಯ! ಶಾಸ್ತ್ರದಾಸ್ಯ! ಸಂಪ್ರದಾಯದಾಸ್ಯ, ಸಮಾಜದಾಸ್ಯ! ಹತ್ತು ವರ್ಷದ ಹಸುಳೆ ವಿಧವೆಯ ಪಟ್ಟಗಟ್ಟಿಸಿಕೊಳ್ಳುವ ದೃಶ್ಯ ಕಣ್ಣಿಗೆ ಕಂಡಿತು. ಹಣೆ ಬೆವರೊಡೆಯಿತು. ಬಾಯಾರಿತು. ಸ್ತ್ರೀ ಸ್ವಾತಂತ್ರ್ಯ, ಸ್ತ್ರೀ ಹಕ್ಕುಗಳು, ಸ್ತ್ರೀ ಶಿಕ್ಷಣ ಮುಂತಾದವುಗಳ ಬಗ್ಗೆ ತಾನು ಮೊನ್ನೆ ಮೊನ್ನೆ ಕಾಲೇಜ್ ಯೂನಿಯನ್ನಿನಲ್ಲಿ ಮಾಡಿದ ಉದ್ಬುದ್ಧ ಭಾಷಣ ಗಳು ನೆನಪಾದವು. ಅಂದಿನ ಕರತಾಡನ ಇಂದು ಪ್ರತಿಧ್ವನಿಗೈದು ಕಿವಿ ಯನ್ನು ಕಿವುಡು ಮಾಡಿತು. ತನ್ನರ್ಧವಯಸ್ಸಿನ ಕನ್ಯೆಯನ್ನು, ಚಿಕ್ಕೊಂಡು ಆಡುವ ಮಗುವನ್ನು ತನ್ನ ವೃದ್ಧ ತಂದೆಗೆ ಧಾರೆ ಎರೆವುದು ಅನ್ಯಾಯವೆಂದು ಉಮೇಶ ಉಸಿರುಬಿಟ್ಟನು. ತಂದೆಯ ಸುಖಕ್ಕಾಗಿ, ವೃದ್ಧಾಪ್ಯದ ಚಾಪಲ್ಯ ಕ್ಕಾಗಿ, :ಅಧಿಕಾರದ ಹೆಮ್ಮೆಗಾಗಿ, ಹಣದ ವೈಭವಕ್ಕಾಗಿ, ಅಡಿಗೆಯ ಅನು ಕೂಲತೆಗಾಗಿ, ಓರ್ವ ಮಗುವನ್ನು ಆಹುತಿ ಕೊಡುವದು ಯಾವ ನ್ಯಾಯ ವೆಂದು ತನ್ನಲ್ಲಿಯೇ ತಾನು ಟೀಕಿಸಿದ. ತಲೆಯಲ್ಲಿ ಕಾದಾಟ ರೇಗಿಗೆದ್ದು ಬಿಸಿಯಾಗಿ ತಲೆ ಚಿಟ್ಟೆಂದರೂ ಸಮಸ್ಯೆಗೆ ಮಾತ್ರ ಉತ್ತರ ದೊರೆಯು ವಂತಿರಲಿಲ್ಲ. ವೃದ್ಧ ತಂದೆಯ ಐಹಿಕ ಸುಖ ಒಂದೆಡೆ, ಸ್ತ್ರೀಹಿತ ಇನ್ನೊಂದೆಡೆ. ಗೊಂದಲದಲ್ಲಿ ಮುಂಗಾಣದಂತಾದ. ಹೊಸ ಯೋಚನೆಯೊಂದು ಹೊಳೆದು ಕಣ್ಣಲ್ಲಿ ನಗು ಮಿನುಗಿತು. ಅರೆನಿಮಿಷವನ್ನೂ ಕಳೆಯದೆ ಸೇವಾಸಮಾಜದೆಡೆ ಸಾಗಿದ. ವಿತಂತುವಿಗಾಗಿ ವಿಚಾರಿಸಿದ. ಸಮಾಜದ ಸಂಚಾಲಕರು ಉಮೇಶ ನನ್ನು ಮುಕಮುಕ ನೋಡಿ ಅನುಮಾನಿಸುತ್ತ ಒಳಗೆ ಕರೆದೊಯ್ದರು. ಅಲ್ಲಿ ನಿಂತು ತಾಯಿಗಾಗಿ ಹುಡುಕಿದ. ನಡುಹರಯದ ಓರ್ವ ವಿಧವೆಯ ಆತ್ಮ ಕತೆ ಉಮೇಶನ ಹೃದಯವನ್ನು ಕರಗಿಸಿತು. ಸಮಾಜಕ್ಕೆ ಹೆದರಿ ಹೆತ್ತ ಮಗುವನ್ನು ಕೊಂದು ಕಾರಾಗೃಹವಾಸವನ್ನು ಮುಗಿಸಿ ಸಮಾಜದೆದುರಿನಲ್ಲಿ ಪ್ರಶ್ನೆಚಿನ್ಹೆಯಂತೆ ನಿಂತಿದ್ದಳು. ಇವಳೇ ತನ್ನ ತಾಯಿಯೆಂದು ನಿರ್ಧರಿಸಿದ.

ತನ್ನ ತಂದೆಗೆ ಮುಪ್ಪಿನಲ್ಲಿ ಮನದನ್ನೆಯಾಗಿ ತನ್ನ ಬಾಳನ್ನೂ ತಿದ್ದಿಕೊಳ್ಳ ಬಲ್ಲ ತನ್ನ ತಾಯಿ ಇವಳೇ ಆಗುವಳೆಂದು ಒಪ್ಪಿದ. ಒಂದು ಬಿದ್ದ ನಕ್ಷತ್ರದ ಉದ್ಧಾರ, ತಂದೆಯ ಐಹಿಕ ಸುಖ ಇವೆರಡನ್ನೂ ಸಾಧಿಸಿದ್ದಕ್ಕಾಗಿ, ತನ್ನ ಮನೋಧರ್ಮಕ್ಕೆ ದೈವಾನುಕೂಲವೂ ಆದದ್ದಕ್ಕಾಗಿ ಹಿರಿಹಿರಿ ಹಿಗ್ಗಿದ. ಮನದಲ್ಲಿಯೇ ಮುಗಿಲಿನ ವರೆಗೂ ಹಾರಿದ. ತನಗೆ ತಾನೇ ಧನ್ಯವಾದಗಳನ್ನು ಹೇಳಿಕೊಂಡ. ಬೆನ್ನು ಚಪ್ಪರಿಸಿಕೊಂಡ. ವೇಳೆ ಕಳೆಯಕೂಡದೆಂದು ಊರಿನ ಹಾದಿ ಹಿಡಿದ.

ಉಮೇಶನ ಗಾಳಿಗೋಪುರ ಊರು ಮುಟ್ಟುವ ಮುನ್ನೆಯೇ ಉರುಳಿತು. ತನ್ನ ಉಚ್ಚ ಧ್ಯೇಯಗಳೂ ಹೆಬ್ಬಯಕೆಗಳೂ ಸುಖಸ್ವಪ್ನಗಳೂ ಮನೆಯ ಮುಂದಿನ ಮಾವಿನ ಹಂದರವನ್ನು ಕಂಡಕೂಡಲೆ ಬಿಸಿಲು ತಾಗಿದ ಮಂಜಿನಂತೆ ಕರಗಿದವು. ಸುಶ್ರಾವ್ಯವಾದ ಮದುವೆಯ ಮೇಳ ಉಮೇಶನ ಕಿವಿಯಲ್ಲಿ ಭಾವೀಮಾತೃವಿನ ವೈಧವ್ಯದ ಅಮಂಗಳ ಹಾಡನ್ನು ಕೊರೆಯಿತು. ಹುಚ್ಚನಂತೆ ಅಂಗಣದಲ್ಲಿ ನುಗ್ಗಿದ. ಮದುಮಗನಾಗಿ ಮಣೆಯ ಮೇಲೆ ಕುಳಿತಿದ್ದ ತಂದೆಯನ್ನು ನೋಡಿದ. ಎಡಬದಿಯಲ್ಲಿ ಕುಳಿತಿದ್ದ ಕನ್ಯೆಯನ್ನು ನೋಡಿದ! ಹನ್ನೆರಡೇ ವರ್ಷದ ಹಸುಳೆ— ಊರ ಕುಲಕರ್ಣಿಯ ಮಗಳು —ಕಾವೇರಿ! ಉಮೇಶ ಅವಳನ್ನು ಎತ್ತಿ ಆಡಿಸಿದ್ದ. ಅವಳು ಆಡುತ್ತಿದ್ದಾಗ ಏಟಿಕ್ಕಿ ನಕ್ಕಿದ್ದ. ಅಳುವಾಗ ಆಡಿಸಿ ನಗಿಸಿದ್ದ. ಆ ಕಾವೇರಿ ಇಂದಿನಿಂದ ಉಮೇಶನ ತಾಯಿ! ರಂಗರಾಯರ ಹೆಂಡತಿ! ತನ್ನ ತಂದೆಯ ಕಡೆ ಇನ್ನೊಮ್ಮೆ ನೋಡಿದ. ಕೈಬಾಡಿಗೆ ಬಂದ ಪ್ರಾಯ ಮುಖದಲ್ಲಿ ಮೂಡಿದೆ. ಬಿಳಿ ತಲೆಯಾದರೂ ಮೀಸೆ ಕಪ್ಪು. ಮುಖದಲ್ಲಿ ಚರ್ಮ ಸುಕ್ಕಾದರೂ ಬಾಯಿ ಹಲ್ಲಿನಿಂದ ಅಲಂಕೃತವಾಗಿದೆ. ಬೆರಳಿಗೆರಡೆರಡು ಉಂಗುರಗಳು. ಮದುವೆಯಾಟದಲ್ಲಿ ಮಗ್ನಳಾಗಿದ್ದ ಕಾವೇರಿ ಉಮೇಶನನ್ನು ಕಂಡೊಡನೆ ಹಲ್ಲು ಕಿಸಿದು ನಕ್ಕಳು. ಅವಳ ಆ ಎಳೆನಗು ಅವಳ ಮಗುವಿನಂತಹ ಹೃದಯವನ್ನು ಹೊರಚೆಲ್ಲಿತ್ತು. ಕಟುಕನ ಅಂಗಡಿಯಲ್ಲಿ ಕುರಿಮರಿ ಚಿಗುರು ತಿಂದಿತು! ಕಾವೇರಿಯ ಮುಂದಿನ ಕತೆಯೆಲ್ಲವೂ ಉಮೇಶನ ಕಣ್ಮುಂದೆ ಓಡಿಬಿಟ್ಟಿತು. ಬಂಜೆ ಕಾವೇರಿ, ವಿಧವೆ ಕಾವೇರಿ, ಶಿಶುಹತ್ಯೆ ಮಾಡಿ ಕಾರಾಗೃಹ ಕಂಡ ಕಾವೇರಿ, ದುಶ್ಶೀಲೆ ಕಾವೇರಿ, ರಕ್ಕಸಿ ಕಾವೇರಿ—ಒಬ್ಬೊಬ್ಬರೇ

ಬಂದು ಮುಂದೆ ನಿಂತರು. ತಂದೆ ತನ್ನನ್ನೇ ನೋಡುತ್ತಿದ್ದರೂ ಉಮೇಶನಿಗೆ ಪರಿವೆಯೇ ಇಲ್ಲ. ಕಾವೇರಿಯ ಜೀವನ ಕತೆಯನ್ನು ಮನಸ್ಸಿನ ಒಳಗಣ್ಣಿನಿಂದ ನೋಡಿ ಹೊರದೃಷ್ಟಿಗೆ ಕುರುಡಾಗಿದ್ದ. "ಉಮೇಶಾ" ಎಂದು ರಂಗರಾಯರು ಕರೆದರು. ಕೀಲುಬೊಂಬೆಯಂತೆ ಗೋಣು ತಿರುವಿ ಅವರೆಡೆ ನೋಡಿದ. ಕೂಡಲೆ ತಲೆಬಾಗಿ ನಿಂತ. ಅವರ ಕಣ್ಣಲ್ಲಿ ನೋಡುವ ಧೈರ್ಯ ಎಂದೂ ಇಲ್ಲ—ಇಂದೂ ಇಲ್ಲ. ಕಲ್ಲಿನಂತೆ ಮುಂದೆ ನಿಂತ. ಮಾತು ಮುಖದಿಂದ ಹೊರಡಲಿಲ್ಲ. ವೇದೋಕ್ತವಾದ 'ತದೇವ ಲಗ್ನಂ' ಮಾತ್ರ ಸ್ವರಬದ್ಧವಾಗಿಯೇ ಸಾಗಿದ್ದಿತು. ತಂದೆ—ಮಕ್ಕಳ ಸಂಭಾಷಣೆ ಅದೆಲ್ಲಿಂದಲೋ ಸುರುವಾಯಿತು.

"ಇದೀಗ ಬಂದೆ."

"ಸರಿ."

"ಈಗಲೇ ಹೋಗಬೇಕು."

"ಸರಿ."

ಉಮೇಶ ಕಾಲ್ತೆಗೆದ. ಊಟ ಮುಗಿಸಿ ಹೋಗೆಂದು ಕಾವೇರಿಯ ತಂದೆ ಕುಲಕರ್ಣಿಗಳು ಬಹುವಾಗಿ ಆಗ್ರಹಮಾಡಿ ಹಿಂಬಾಲಿಸಿದರು. ಎರಡೇ ಎರಡು ಉಂಡಿಗಳನ್ನಾದರೂ ತಿನ್ನಲೇಬೇಕೆಂದು ಅಡ್ಡಗಟ್ಟಿದರು. ಹೊಟ್ಟೆ ತುಂಬಿದೆ ಎಂದಿಷ್ಟೇ ಹೇಳಿ ಹಂದರದಿಂದ ಹೊರಬಿದ್ದ. ಹೊಟ್ಟೆಯೂ ತುಂಬಿದ್ದಿತು! ಮೂರು ತಾಸು ಮುಂಚಿತವಾಗಿಯೇ ಬಂದು ರೈಲ್ವೆ ನಿಲ್ದಾಣದಲ್ಲಿ ತಲೆಗೆ ಕೈಕೊಟ್ಟು ಬೆಂಚಿನ ಮೇಲೆ ಕುಳಿತ.

## ೩. ಆಗಸ್ಟ್ ಆದರ್ಶಗಳು.

ಈ ಸಡಗರವೆಲ್ಲವೂ ಇಂದು ಹಳೆಯ ಮಾತು. ಈಗ ರಾವಸಾಹೇಬ ರಂಗರಾಯರು ನಿವೃತ್ತ ಅಧಿಕಾರಿಗಳು. ಇದ್ದೂರ ಕಚೇರಿಯಲ್ಲಿಯೇ ಉಮೇಶ ಕಾರಕೂನ. ಬಿ. ಎ. ಮುಗಿಸುವ ಮುನ್ನೆಯೇ ಕಾಲೇಜಿಗೆ ಕೈ ಮುಗಿದು ಉಮೇಶ ಮನೆ ಸೇರಬೇಕಾಯಿತು.

ದೇಶದಲ್ಲೆಲ್ಲ ರಾಜಕೀಯ ವಾತಾವರಣ ಹದಗೆಟ್ಟು, ವಿಷಮ ಅವಸ್ಥೆಗೆ ಬಂದಿಳಿಯಿತು. ಕಾಡುಗಿಚ್ಚಿನಂತೆ ಕ್ರಾಂತಿ ಹಬ್ಬಿತು. ದಿನವಹಿ ದಂಗೆಗಳು

ಎದ್ದವು. ರೈಲಿನ ಹಳಿಗಳು ಹೊಳೆ ಸೇರಿದವು. ಸೇತುವೆಗಳು ನೀರ ಬುಡ ಕಂಡವು. ತಂತಿಗಳು ತುಂಡಾದವು. ಧರ್ಮಜ ಆಳಿದ ಭರತಖಂಡದಲ್ಲಿ, ಬುದ್ಧದೇವ ಬಾಳಿದ ಅಹಿಂಸಾಯುಗದಲ್ಲಿ ಪ್ರಾಣಹಾನಿ ದೇಶರಕ್ಷಣೆಯ ಗೌರವ ಪಡೆಯಿತು. ಲೆಕ್ಕವಿಲ್ಲದೆ ತೋಫುಗಳು ಹಾರಿದವು. ಗುಂಡಿನೇಟಿಗೆ ಜನರು ನಿಂತಲ್ಲಿಯೇ ಸತ್ತುಬಿದ್ದರು. ಸತ್ತವರ ಗೊತ್ತು ಸಹ ಹತ್ತಲಿಲ್ಲ. ಉಮೇಶನಿಂದ ಪತ್ರಗಳೇ ಇಲ್ಲ. ಹೊರಗಿನ ಅಶಾಂತತೆ ರಾವಸಾಹೇಬ ರಂಗರಾಯರ ತಲೆಯಲ್ಲಿಯೂ ನುಗ್ಗಿತು. ಮಗನ ಕ್ಷೇಮದ ಬಗ್ಗೆ ಖತಿ ಗೊಂಡು ತಳಮಳದಿಂದ ವಿಶ್ವವಿದ್ಯಾಲಯದ ಅಧಿಕಾರಿಗಳಿಗೆ ತಾರುಮಾಡಿ ಹಾದಿ ಕಾದರು. ಒಂದು ವಾರದ ನಂತರ ತಿಳಿಯಿತು, ಉಮೇಶನನ್ನು ವೆಲ್ಲೂರ ಜೇಲಿನಲ್ಲಿ ಕೂಡಿದ್ದಾರೆಂದು. ಅಲ್ಲಿ ಇಲ್ಲಿ ವಿಚಾರಿಸಲಾಗಿ ಉಮೇಶನ ತಲೆಯ ಮೇಲೆ ಯಾವ ತರಹದ ನೇರವನ್ನು ಹೊರಿಸಿಲ್ಲವೆಂತಲೂ ಬರೀ ಅನುಮಾನದ ಮೇಲೆ ಸ್ಥಾನಬದ್ಧತೆಯಲ್ಲಿ ಇರಿಸಿದ್ದಾರೆಂತಲೂ ತಿಳಿದು ಬಂದಿತು. ಮಗನ ರಾಜದ್ರೋಹಕ್ಕೆ ರಾಯರು ನಾಚಿ ತಲೆಬಾಗಿ ಖೇದ ಪಟ್ಟು ಗಲ್ಲಗಲ್ಲ ಹಾಕಿಕೊಂಡರು. ಮುಂದೇನು ಮಾರ್ಗವೆಂದು ಯೋಚಿ ಸುತ್ತ ರಾತ್ರಿ ಎಲ್ಲವೂ ಎದ್ದು ಕುಳಿತರು. ಲೌಕಿಕಪಟುಗಳಾದ ಮಾವನವ ರನ್ನು ಬೆಳಗಿನ ಜಾವದಲ್ಲಿಯೇ ಗುಪ್ತಾಲೋಚನೆಗೆ ಕರೆಸಿಕೊಂಡರು. ರಾಯರ ಕಾತರಕ್ಕೆಲ್ಲ ಉತ್ತರವಾಗಿ ಕೊನೆಗೆ "ಇಷ್ಟೇನಾ ಪ್ರಸಂಗ" ಎಂದು ಕಲಕರ್ಣಿ ಯವರು ಕೈಲಿದ್ದ ನಶ್ಯವನ್ನು ಕೆಳಗೆ ಕೊಡವಿ, ಕೈಗೆ ಬಂದ ರೂಪಾಯಿಗಳನ್ನು ಎಣಿಸಿ ಸೊಂಟಕ್ಕೇರಿಸಿ ರೈಲು ಏರಿದರು.

ಇತ್ತ ಜೈಲಿನಲ್ಲಿ ಉಮೇಶನ ಮನಸ್ಥಿತಿ ಅದೊಂದು ಬಗೆಯ ಹೊಯ್ದಾ ಟಕ್ಕೆ ಸಿಕ್ಕಿಬಿದ್ದಿದ್ದಿತು. ಏನಿದೆ ಜೈಲಿನಲ್ಲಿ? ಧ್ವನಿವಾಹಕ ಯಂತ್ರವಿಲ್ಲ, ಜೈಜೈಕಾರವಿಲ್ಲ, ಹೂಮಾಲೆಗಳಿಲ್ಲ, ಭಾಷಣವಿಲ್ಲ, ಸ್ತ್ರೀವಿದ್ಯಾರ್ಥಿಗಳ ಕರತಾಡನವಿಲ್ಲ. ಬಾಳು ಸಪ್ಪೆ ಎನಿಸಹತ್ತಿ, ಹಿಂದೆಯೇ ನೆನಪು ಕೊಟ್ಟಿತು, ರಾಷ್ಟ್ರಸೇವೆಯ ಕಾವು. ಅವೆಲ್ಲವೂ ಹೆಮ್ಮೆಯ ಹುಚ್ಚು ಬಾಳು. ತ್ಯಾಗ ವಿರುವದು ಇಲ್ಲಿಯೆ ಎಂದು ಕುಳಿತಲ್ಲಿಯೇ ಆದರ್ಶದ ಒರೆಗಲ್ಲಿಗಾಗಿ ಹುಡು ಕಾಡಿದ. ಬರುಬರುತ್ತ ಕೈದಿಗಳಿಗೆ ಕಾರಾಗೃಹವಾಸ ಕಷ್ಟವಾಗಹತ್ತಿತು. ಅಂದು ಸತ್ಯಾಗ್ರಹಿಗೆ ಸಪ್ಪೆಯಾಗಿದ್ದುದು ಇಂದು ಕಹಿಯಾಗಹತ್ತಿತು. ಬಿಡು

ಗಡಿಯಂತೂ ಅಸಿಶ್ಚಯದ ಮಾತು, ಸ್ಥಾನಬದ್ಧ ಕೈದಿಗೆ. ಅನಿಯಮಿತ ಅವಧಿ. ಊಟದ ಸುಖಕ್ಕೆ ಅಡಚಣೆಯಾಗಿ ಸರಿಯಾಗಿ ನಿದ್ರೆಯೂ ಬೀಳ ದಾಯಿತು. ಆಹಾರ ಆರೋಗ್ಯವನ್ನು ಕೆಡಿಸಿತು. ಮುಂದೇನು ಗತಿ ಉಮೇಶ ನಿಗೆ? ಮೊದಲನೆಯ ವಾರದಲ್ಲಿಯೇ ಹತ್ತು ಸ್ವಯಂಸೇವಕ ವೀರರು ತಪ್ಪಿತ ಪತ್ರಗಳನ್ನು ಬರೆದುಕೊಟ್ಟು ಹೊರಬಿದ್ದುದಂತೂ ಉಮೇಶನ ಮನಸ್ಸಿನ ಮೇಲೆ ವಿಲಕ್ಷಣವಾಗಿ ಪರಿಣಾಮ ಮಾಡಿದ್ದಿತು. ಎದೆಗುಂದಲಿಲ್ಲ ನಿಜ, ಆದರೆ ಇದು ಕೊನೆಗಾಣುವದೆಂದು? ಎಂದೆನಿಸಿತು. ಮನಸ್ಸು ಗೊಂದಲ ಕ್ಕೀಡಾಗಿ, ಓರ್ವನೇ ಮೂಲೆಯಲ್ಲಿ ಕುಳಿತು ಮೂಗಿಗೆ ಬೆರಳಿಡುವದು ಹೆಚ್ಚಾಯಿತು. ಇದು ಹಿತವಲ್ಲವೆಂದು, ಆಗಾಗ್ಗೆ ಹೊರಬಂದು ಸಹಕೈದಿ ಗಳೊಟ್ಟಿಗೆ ಸಮಯವನ್ನು ಕಳೆಯತೊಡಗಿದ. ನೆರೆಹೊರೆ ಪ್ರಾಂತಗಳಿಂದ ಬಂದವರ ಪರಿಚಯವನ್ನು ಸಂಪಾದಿಸಿದ. ಗಡ್ಡ ಹೊತ್ತವರು, ಮೀಸೆ ಮೂಡ ದವರು, ಅಂಗಿ ಬಿಟ್ಟವರು, ಮಡಿವಂತರು, ಅತಿಮಾತಿನ ಮಲೆಯಾಳಿಗಳು, ಆಕ್ರಮಣಾಕಾಂಕ್ಷೆಯ ಮರಾಠಿಗರು, ದುರಭಿಮಾನಿ ತೆಲುಗರು, ನಿರಭಿಮಾನಿ ಕನ್ನಡಿಗರು, ಶೀಘ್ರಕೋಪಿ ಆಂಧ್ರರು, ವ್ಯವಹಾರನಿಪುಣ ತಮಿಳರು ಇನ್ನೆಲ್ಲರೂ ಗೆಳೆಯರಾದರು. ಉತ್ತರ ಕರ್ನಾಟಕದವರ ಉತ್ತರನ ಮಾತು ಗಳನ್ನು ಎದುರಾಡದೆ ಕೇಳಿದ. ತಮ್ಮ ತಂಗಿಯರ ವೀಣೆಯ ಪಾಂಡಿತ್ಯದ ಕತೆಗಳನ್ನು ಸಿಹಿ ಮಾತಿನ ಮೈಸೂರಿಗರಿಂದ ಬೇಸರವಿಲ್ಲದೆ ಕೇಳಿದ. ಇಂತೆಲ್ಲ ಸಹಿಸಬಲ್ಲವನಿಗೆ ಜೈಲುಜೀವನ ಕಷ್ಟವೆ? ಒಟ್ಟಾರೆ ದೇಶದಾಸರ ಪ್ರಪಂಚ ಬಹು ರೀತಿಗಳಲ್ಲಿ ಆದರ್ಶಪ್ರಾಯವಾಗಿದ್ದಿತು. ಅನುಗಾಲವೂ ಎಲ್ಲರ ಬಾಯಲ್ಲಿಯೂ ಗೀತೆ, ಗಾಂಧಿ, ಹಿಂದಿ, ಖಾದಿ! ಆದರೂ ಆಗಾಗ್ಗೆ ಚಿಕ್ಕಪುಟ್ಟ ವಿಷಯಗಳಲ್ಲಿ ದೊಡ್ಡವರು ಅತಿ ಚಿಕ್ಕವರಾಗುತ್ತಿದ್ದರು. ಉಮೇಶ ಅದನ್ನು ಹೆಚ್ಚು ಗಮನಿಸುತ್ತಿರಲಿಲ್ಲ. ಒಮ್ಮೆ ಮಾತ್ರ ಇದೆಲ್ಲವೂ ಹೇಯವೆನಿಸಿ, ತಪ್ಪಿತ ಪತ್ರವನ್ನು ಗೀಚಿಕೊಟ್ಟು ಹೊರಬೀಳಬೇಕೆನಿಸಿತು. ಉಮೇಶನಿಗೆ. ಅದು ಬಹುಭಕ್ತರ ಗುಟ್ಟು ರಟ್ಟಾದಾಗ. ಚಿಕ್ಕೊಂದು ವಿಷಯದಲ್ಲಿ ಮನಸ್ತಾಪವಾಗಿ ದೊಡ್ಡ ಜಗಳವೇ ಆಯಿತು ಒಂದು ಬಾರಿ. ತಮ್ಮತಮ್ಮಲ್ಲಿಯೇ ಬೈದಾಡಿಕೊಳ್ಳಹತ್ತಿದರು ದೇಶಪ್ರೇಮಿಗಳು. 'ಸಿವಿಲ್ ಜೈಲು ತಪ್ಪಿಸಿಕೊಳ್ಳಲು ನಾನು ಚಳವಳಿಯಲ್ಲಿ ಸೇರಲಿಲ್ಲ' ಎಂದು ಗೋಪಾ

ಲಾಚಾರಿ ಕೆಣಕಿದ್ದಕ್ಕೆ, ' ಸರಕಾರದ ಗ್ರ್ಯಾಂಟು ತಿಂದೂ ಮಾಸ್ತರನಾಗಿ ದುಡಿಯಲು ಮೈ ಬಾಗದೆ ನಾನು ಇಲ್ಲಿಗೆ ಬರಲಿಲ್ಲ ' ಎಂದು ರಾಮುಸೆಟ್ಟಿಯ ಮಾರುತ್ತರ. ಹೆರಿಗೆಗಾದ ಹೆಂಡತಿಯನ್ನು ಮಾವನ ಮನೆಗೆ ಓಡಿಸಲು ಕೃಷ್ಣನ ಜನ್ಮಸ್ಥಾನಕ್ಕೆ ಬಂದಿದ್ದ ರುದ್ರಣ್ಣನೂ ಈ ಮಲ್ಲಯುದ್ಧದಲ್ಲಿ ಮುಂದಾಳು. ಮಂತ್ರಿಪದವಿಗಾಗಿ ಮ್ಯಾಂಚೆಸ್ಟರ್ ಪಂಚೆಯನ್ನು ಸಹ ತ್ಯಜಿಸಿ, ಹಚಡವನ್ನುಟ್ಟು ಜೇಲಿಗೆ ಬಂದ ಜಾಣ ಆಶಾವಾದಿಗಳು ಜಗಳಕ್ಕೆ ಬಾರದಿದ್ದರೂ ಹಲವು ಆಧಿಕಪ್ರಸಂಗಿಗಳು ಎಲ್ಲರ ಹುಳುಕನ್ನೂ ಹೊರಗೆಡವ ಹತ್ತಿದರು. ಈ ದೇಶಭಕ್ತರ ಪ್ರಾಮಾಣಿಕತನದ ಮಾದರಿಯೊಂದು ಉಮೇಶ ನಿಗೆ ಕಂಡುಬಂದಿತು. ಎಲ್ಲ ಸ್ಥಾನಬದ್ಧ ಕೈದಿಗೂ ವರ್ಷಕ್ಕೆರಡು ಬಾರಿ ಐವತ್ತು ರೂಪಾಯಿಗಳ ಬಟ್ಟೆ ಕೊಡಿಸಲು ಸರ್ಕಾರ ನಿರ್ಧರಿಸಿತು. ಖಾದಿ ಭಂಡಾರಗಳಿಂದ ಬಂದ ವ್ಹಿ. ಪಿ. ಗಳಿಗೆ ಸರಕಾರ ಹಣ ತೆತ್ತು ಆಯಾ ಕೈದಿ ಗಳಿಗೆ ಸಲ್ಲಿಸಿತು. ಬಂದ ಬಟ್ಟೆಯನ್ನು ಹಲವರಂತೂ ಅಲ್ಲಿಯೇ ಹೆಚ್ಚು ಬೆಲೆಗೆ ಮಾರಿಕೊಂಡರು. ಬಟ್ಟೆಯೆಂದು ಮೇಲೆ ಬರೆಸಿ ಬರೀ ಗೋಣಿ ಚಿಂದಿಗಳನ್ನು ತರಿಸಿ ಹಣವನ್ನು ಗಿಟ್ಟಿಸಿದ ಗಾಂಧೀ ಭಕ್ತರನ್ನು ಕಂಡು ಉಮೇಶನ ಆಸೆ ಆಕಾಂಕ್ಷೆಗಳು, ಆದರ ವಿಶ್ವಾಸಗಳು ಬಟ್ಟಬಯಲಾದವು. ದೇಶಸೇವೆಯೇ ದಂದುಗೆಯಾಯಿತೆಂದು ಉಮೇಶ ಹೇಸಿದ. ಸ್ವಾರ್ಥವೇ ಬಾಳಿನ ಮೂಲ ವೆಂದು ಹೇಳಿಕೊಂಡು ಸುಮ್ಮನಾದ. ಇವೆಲ್ಲಕ್ಕೂ ಕಾರಣ ವೈಯಕ್ತಿಕ ಆಸ್ತಿ ! ಅಂದಿನ ಕುತೂಹಲ ಇಂದು ಉಳಿಯಲಿಲ್ಲ ಉಮೇಶನಿಗೆ. ಇತ್ತ ಆರೋಗ್ಯವೂ ಕೆಡುತ್ತ ನಡೆದು, ಅಶಕ್ತತೆಯೂ ಹೆಚ್ಚಿತು. ಒಂದು ಬಾರಿ ಇದ್ದಕ್ಕಿದ್ದಂತೆ ಎಚ್ಚರ ದಪ್ಪಿ ಬಿದ್ದನು. ಅಂದಿನಿಂದ ಉಮೇಶ ಆಸ್ಪತ್ರೆಯಲ್ಲಿಯೇ.

ಕುಲಕರ್ಣಿ ವೆಲ್ಲೂರಿಗೆ ಬಂದುದು ಈ ದಿನಗಳೊಂದರಲ್ಲಿ. ಹುಟ್ಟಾ ಹಳ್ಳಿಗನಾಗಿದ್ದರೂ ವ್ಯವಹಾರಚತುರನಾದ ಕುಲಕರ್ಣಿ ಅಧಿಕಾರಿಗಳನ್ನು ಒಲಿಸಿಕೊಳ್ಳುವದರಲ್ಲಿ ಎತ್ತಿದ ಕೈ. ಆ ಕಸುಬಿನಲ್ಲಿಯೇ ಚೆನ್ನಾಗಿ ಪಳಗಿದ ಮನುಷ್ಯ; ಸಾಲದುದಕ್ಕೆ ರಂಗರಾಯರ ರಾವಸಾಹೇಬಗಿರಿಯೂ ಸಹಾಯ ಕ್ಕಿದೆ. ಮುಖ್ಯವಾಗಿ ಕೈಯಲ್ಲಿ ಹಣವಿದೆ. ಡಾಕ್ಟರ ಬಾಯಿಂದ ಅನಿಸ ಬೇಕಾದದ್ದನ್ನು ಅನಿಸಿಬಿಟ್ಟು, ರಾತ್ರಿಯ ಗಾಡಿಗೆ ಉಮೇಶನನ್ನು ತಂದೇ ಬಿಟ್ಟನು. ಜ್ವರದ ತಾಪದಲ್ಲಿ ಬಡಬಡಿಸುತ್ತ ಉಮೇಶ ಊರು ಸೇರಿದ.

ಔಷಧೋಪಚಾರಗಳು ನಡೆದು ಒಂದೆರಡು ವಾರಗಳ ನಂತರ ಉಮೇಶನಿಗೆ ಈ ಲೋಕದ ಅರಿವು ಉಂಟಾಯಿತು. ತಿಂಗಳುಗಳುರುಳಿದವು. ಉಮೇಶ ಎದ್ದು ಓಡಾಡುವಂತಾದ. ಕೆಮ್ಮು-ದಮ್ಮಿನಿಂದ ರಂಗರಾಯರು ಹಾಸಿಗೆ ಹಿಡಿದರು. ಅನ್ನ ನಿದ್ರೆ ತೊರೆದು, ಹೊಲಸು ಹೇಸಿಗೆ ಎನ್ನದೆ ತಂದೆಯ ಸೇವೆಯಲ್ಲಿ ತೊಡಗಿದ. ರಂಗರಾಯರು ಉಸಿರು ಉಳಿದಾಗಲೆಲ್ಲ "ಉಮೇಶಾ, ಇನ್ನು ಮಾತ್ರ ಅಂಥಾ ಕೆಲಸಕ್ಕೆ ಹೋಗಬ್ಯಾಡಪ್ಪಾ" ಎನ್ನುತ್ತಿದ್ದರು. ತಂದೆಯ ಕಾಯಿಲೆಯ ಕಾರಣ ತಾನು ಜೇಲಿಗೆ ಪುನಃ ಹೋಗಲಿಲ್ಲ ಎಂದು ಬುದ್ಧಿ ಮನಸ್ಸಿಗೆ ಸಮಾಧಾನ ಹೇಳಿತು. ಮನಸ್ಸು ನಕ್ಕಿತು. ಇಲ್ಲದಿದ್ದರೆ ಹೋಗುತ್ತಿದ್ದೆನೇ ಎಂದು ತನ್ನನ್ನು ತಾನೇ ಕೇಳಿಕೊಂಡು, ಉತ್ತರಕ್ಕಾಗಿ ಹುಡುಕಾಡಿದ. ರಾಜಕೀಯ ಚದುರಂಗ ಬಹಳ ಬದಲಿಸದಿದ್ದರೂ ಒಳಗಿದ್ದ ಹಲವರು ಬಿಡುಗಡೆಯಾಗಿ ಹೊರಬಂದರು--ಬೇರೆ ಬೇರೆ ಕಾರಣಗಳಿಂದ.

## ೪. ಬ್ರಾಹ್ಮಣ ತಿಂದರೇನು ತಪ್ಪು?

ಹಲವೇ ದಿನಗಳಲ್ಲಿ ರಾವಸಾಹೇಬ ರಂಗರಾಯರು ಮುಂದಿನ ಕೆಲಸವನ್ನೆಲ್ಲ ಅವಸರದಿಂದ ಮಾಡಿದರು. ಉಮೇಶ ತಂದೆ ಕೊಡಿಸಿದ ಕೆಲಸಕ್ಕೆ ಸೇರಿದ, ಅಂತೆಯೇ ತಂದ ಹುಡಿಗೆಯನ್ನು ಲಗ್ನವಾದ. ಎಲ್ಲವೂ ಸರಿ ಹೋಯಿತೆಂದು ರಾಯರು ಸಮಾಧಾನಪಟ್ಟುಕೊಂಡರು. ಹೊರಗಾಳಿಗೆ ಹೊಯ್ದಾಡುತ್ತಿದ್ದ ಉಮೇಶನ ಆತ್ಮಜ್ಯೋತಿ ಮಾತ್ರ ಎಲ್ಲಿಯೋ ಜೀವ ಹಿಡಿದು ಮಿಣುಕುತ್ತಿದ್ದಿತು. ಆದರೆ ಆದಕ್ಕೆ ಅದರ ಪರಿವಿರಲಿಲ್ಲ. ಮೈಮುರಿದು ದುಡಿಯುತ್ತಿದ್ದಾನೆ ಉಮೇಶ. ಆದರೆ ಲೌಕಿಕಕ್ಕೆ ಬೇಕಾದ ಜಾಣತನವನ್ನು ಸಾಧಿಸಿಲ್ಲ. ಮೇಲಿನವರು ಬೈದಾಗ ಅದು ತನಗಲ್ಲ ಅಂದುಕೊಳ್ಳುವ ವ್ಯವಹಾರ ಚತುರತೆ ಇಲ್ಲ. ಕಕ್ಷಿದಾರರ ಕತ್ತನ್ನು ಕತ್ತರಿಯಲ್ಲಿ ಇರಿಕಿಸಿ ಹಣ ಸೆಳೆಯುವ ವಕೀಲಿ ಜಾಣ್ಮೆ ಕೈವಶವಾಗಿಲ್ಲ. ತನಗೆ ಲಾಭವಾಗುವ ಸುವರ್ಣ ಸಂದರ್ಭಗಳಲ್ಲಿಯೂ ಸಾಗದ 'ಸಾಚ'ಕ್ಕೆ ಬಿದ್ದು ನಷ್ಟಹೊಂದುವ ದಡ್ಡನಾಗಿದ್ದಾನೆ. ಅನ್ಯಾಯಕ್ಕೆ ಒಗ್ಗದ ಮನಸ್ಸು, ಅವಮಾನಕ್ಕೆ ಅಂಜುವ ಶಿರಸ್ಸು ಇಟ್ಟುಗೊಂಡರೆ ವ್ಯವಹಾರದಲ್ಲಿ ಏರಿಗೆ ಬರುವದಾದರೂ ಹೇಗೆ? ಸತ್ಯದ ಮೋಹಕ್ಕೆ ಬಿದ್ದು, ಲತ್ತೆ ತಿನ್ನುತ್ತ ತನ್ನ 'ಸಾಚ'ದ ಹಡಗವನ್ನು

ವ್ಯವಹಾರದ ಚಕ್ರತೀರ್ಥದಲ್ಲಿ ತೇಲಬಿಟ್ಟಿದ್ದಾನೆ. ಹಿಂದಿನದಕ್ಕೆ ಪಶ್ಚಾತ್ತಾಪ ವಿಲ್ಲ, ಇಂದಿನದಕ್ಕೆ ಹೆಮ್ಮೆ ಇಲ್ಲ, ಮುಂದಿನದಕ್ಕೆ ಆಸೆ ಇಲ್ಲ, ಮರಳಿನಲ್ಲಿ ಉರುಳುವ ಚಕ್ರದ ಬಂಡಿಯಂತೆ ಸಾಗಿದೆ ಬಾಳು. ವೇಗವಿಲ್ಲ ಉತ್ಸಾಹ ಇಲ್ಲ. ಜೀವನದಲ್ಲಿ ಕವನವಿಲ್ಲ. ರಸವಿಹೀನ ಜೀವನದಲ್ಲಿ ನಿರ್ಲಿಪ್ತ ಉಮೇಶ. ದಾಸಕೂಟಯಂತ್ರವಲ್ಲಿ ಅವನೊಂದು ಕಿರಿದಾದ ಮೊಳೆ. ತನ್ನದೇ ಆದ ವ್ಯಕ್ತಿತ್ವಕ್ಕೆ ಅಲ್ಲಿ ಎಡೆ ಇಲ್ಲ. 'ಇಟ್ಹಾಂಗೇ ಇರುವೇನು ಹರಿಯೆ' ಎಂದು ಹಾಡುವವರ ಕಾರ್ಯಕ್ಷೇತ್ರವದು. ಪರಿಸ್ಥಿತಿಗಳ ಕೈಗೊಂಬೆ ಮನುಷ್ಯನೆಂಬು ವವರಿಗೆ ಒಂದು ಉದಾಹರಣೆ ಉಮೇಶ. ಮಾನವನೇ ಪರಿಸ್ಥಿತಿಗಳ ಕರ್ತ ಎಂಬುದು ಅವನಿಗೆ ನಿಲುಕದ ಮಾತು.

ಆಫೀಸಿನಲ್ಲಿ ಇವನೊಬ್ಬ ಅಪಹಾತ. ಏರಿಕೆಗೆ ಬೇಕಾಗುವ ಬಾಯಾ ರಿಗೆ ಇಲ್ಲ. ಬಾಗಿ ನಡೆವ ಬಂಡವಾಳವಿಲ್ಲ. ಬಾಗಿದವರನ್ನು ಬಡಿಯುವ ಭಂಡತನವೂ ಇಲ್ಲ. ಮೇಲಿನವರನ್ನು ಮೆಚ್ಚಿಸುವ ಕೈಚಕಮವಿಲ್ಲ. ಕಸಬು ಮಾಡಿದ ಕೈಯಲ್ಲ. ಬರೀ ವೇತನ ಮಾತ್ರವೇ, ತಿಂಗಳು ದುಡಿದರೂ. ತಂದೆಯ ಪಿಂಚಿನಿ ಕಾಣದ ಪೆಟ್ಟಿಗೆಗೆ ಸೇರುತ್ತಿದ್ದಿತು. ಮುದುಕನ ಹೆಂಡತಿ ಯಾಗಿ, ಬಂಜೆಯಾಗಿ, ಮಲಮಗನ ತಾಯಿಯಾದವಳಿಗೆ ಹಣದ ಆಸೆ ಯಾದರೂ ಬೇಡವೇ? ಬ್ರಿಟ್ಯಾಳಿಗೆ ಬರುವ ಗೋಮಾಂಸಕ್ಕೂ ಉಮೇಶನೇ ಹಣ ತೆರಬೇಕಾಗಿದ್ದಿತು. ಸಂಸಾರದ ಹೊರೆ ಸಂಪೂರ್ಣವಾಗಿ ಉಮೇಶನ ತಲೆಯ ಮೇಲೆಯೇ ಬಿದ್ದಿತು. ಹೊತ್ತನು. ತನ್ನ ಚಿಕ್ಕ ವೇತನ ಬಾಳಿನ ನಾಟಕಕ್ಕೆ ಸಾಕೂಸಾಲದಾಗಿ ಉಮೇಶನ ಊಟ ಉಡುಪುಗಳಲ್ಲಿ ದಾರಿದ್ರ್ಯ ತಲೆದೋರಹತ್ತಿತು. ಮೊಣಕೈ ಹರಿದ ಅವನ ಅಂಗಿ ಅವನ ದೇಶದ ಆರ್ಥಿಕ ಪರಿಸ್ಥಿತಿಯನ್ನು ಪ್ರತಿಬಿಂಬಿಸಿತು.

"ಇದು ಏನಪಾ ಉಮೇಶ, ನಿನ್ನ ವೇಷ?" ಎಂದು ಪಕ್ಕದಲ್ಲಿ ಕುಳಿ ತಿದ್ದ ಮಲ್ಹಾರಿಭಟ್ಟರು ನಟನೆಯ ಕನಿಕರದಿಂದ ಕೆಣಕಿ, ಅರ್ಧ ನಕ್ಕು, ಇದ್ದೊಂದು ಹಲ್ಲನ್ನು ಪೂರ್ಣ ಹೊರದೋರಿದರು. ಮಲ್ಹಾರಿಭಟ್ಟರು ಅದೇ ಆಫೀಸಿನಲ್ಲಿ ಇಪ್ಪತ್ತೇಳು ವರ್ಷಗಳಿಂದ ಇದ್ದವರು. ಇಪ್ಪತ್ತೇ ರೂಪಾಯಿ ವೇತನದ ಮೇಲೆ ಸುಭಿಕ್ಷ ಕಾಲದಲ್ಲಿ ನೌಕರಿಗೆ ಸೇರಿ, ಸ್ವಂತೊಂದು ಮನೆ, ಸೇರುಗಟ್ಟಲೆ ಚಿನ್ನ ಸಂಪಾದಿಸಿದ್ದರು. ಮ್ಯಾಟ್ರಿಕ್‌ನಲ್ಲಿ ಕಲಿಯುತ್ತಿದ್ದಾಗ

ಮದುವೆಯಾಗಿ, ಮರುದಿನವೇ ಶಾಲೆಗೆ ಶರಣು ಹೊಡೆದು ನೌಕರಿಗೆ ಬಂದರು. ಮ್ಯಾಟ್ರಿಕ್ ಆಗದಿದ್ದುದರಿಂದ ಅವರ ವೇತನ ಅರ್ಧ ಶತ ಮಾನಕ್ಕೆ ತಟಸ್ಥವಾಗಿದ್ದಿತು. ಆದರೂ ತಮ್ಮ ಜಾಣಾಕ್ಷತನದಿಂದ ತಾವು ಮೇಲುಗಳಿಕೆಯನ್ನು ಮಾಡಿಕೊಂಡು ಸುಖವಾಗಿದ್ದರು. ಇದು 'ದೇವರು ಕೊಟ್ಟದ್ದು!' ಕಾಲೇಜಿನಿಂದ ಹೊಸದಾಗಿ ನೌಕರಿಗೆ ಬಂದ ಹುಡುಗರ ಬಗ್ಗೆ ಮಲ್ಲಾರಿಭಟ್ಟರ ವರ್ತನೆ ಬಹು ವಿಲಕ್ಷಣವಾಗಿದ್ದಿತು. ಅವರ ಠಾಕು ಠೀಕಿನ ಉಡುಪು, ತಲೆತುಂಬ ಕ್ರಾಪು ಇವೆಲ್ಲವನ್ನು ಕಂಡು ಮೂಗು ಮುರಿಯು ತ್ತಿದ್ದರು. 'ಸಾಚ' ಇದ್ದವರಂತೂ ಭಟ್ಟರಿಗೆ ಜನ್ಮಶತ್ರುಗಳೇ. "ನಾನೂ ಹಂಗೆ ಜಂಬಕ್ಹೋಗೇ ಸಾಲಗಾರನ ಮಗ ಆಗಿದ್ದೆ" ಎಂದು ಒಳಗೇ ನಗು ತ್ತಿದ್ದರು. ಹೊಸ ಮದುವಣಗಿತ್ತಿ ನಮಸ್ಕರಿಸಿದಾಗ ನೀನೂ ನನ್ನಂತೆಯೇ ಆಗು ಎನ್ನುವ ವಿಧವೆಯ ಮನೋವೃತ್ತಿ ಭಟ್ಟರದು.

"ಬಟ್ಟೆ ಹರಿದು ಹೋಗಿವೆ ಸಾರ್" ಎಂದು ಕುಳಿತಲ್ಲಿಂದಲೆ ನುಡಿದು ಕೆಲಸವನ್ನು ಮುಂದುವರಿಸಿದ ಉಮೇಶ.

"ಹೊಸವು ಹೊಲಿಸಬೇಕ್ರೀ, ಉಮೇಶರಾಯ್ರೇ. ಹೇಳಿಕೇಳಿ ಫ್ಯಾಶನ್ ಹುಡುಗರು ನೀವು" ಮಲ್ಲಾರಿಭಟ್ಟರು ಮಾರ್ಮಿಕವಾಗಿ ನುಡಿದು, ಕೈಲಿದ್ದ ಸೀಸಕಡ್ಡಿಗೆ ಕ್ಷೌರ ಮಾಡಿದರು.

"ಎಲ್ಲಿಂದ್ರೀ ಹೊಲಿಸೋದು? ದುಡ್ಡು ಒಂದು ಬೇಕಲ್ಲ, ದುಡ್ಡು" ಎಂದು ಬಡತನದೊಂದಿಗೆ ಮಾತಿನ ದಡ್ಡತನವನ್ನೂ ಹೊರಹಾಕಿಕೊಂಡನು; ಬಡತನವನ್ನು ಒಪ್ಪಿಗೊಳ್ಳುವದು ನಾಚಿಕೆಗೇಡು ಎಂದೆಂದೂ ಅನಿಸಿರಲಿಲ್ಲ, ಉಮೇಶನಿಗೆ.

"'ಸಾಚ' ಅಪಾ ನೀವೆಲ್ಲ" ಎಂದು ವಾದದಲ್ಲಿ ಗೆದ್ದವರಂತೆ ಮಾತು ಮುಗಿಸಿದರು ಮಲ್ಲಾರಿಭಟ್ಟರು. ಉಮೇಶನಿಗೂ ಅದೇ ಬೇಕಾಗಿದ್ದಿತು. ತಗ್ಗಿದ ತಲೆಯನ್ನೆತ್ತದೆ ಕಾಗದಗಳನ್ನು ನೋಡುತ್ತ ಕುಳಿತ.

ಆಗಾಗ್ಗೆ ಅವರೀರ್ವರ ಮಧ್ಯೆ ಮಾತುಗಳೇನೋ ಕೊಂಚ ಬರೆ ಕೊಟ್ಟಂತೆಯೇ ಜರುಗುತ್ತಿದ್ದವು. ಮೂಲೆಯಲ್ಲಿಟ್ಟ ಮಣ್ಣಿನ ಮಡಿಕೆಯಿಂದ ಉಮೇಶ ಒಂದು ಬಾರಿ ನೀರು ಕುಡಿದಾಗ ಮಲ್ಲಾರಿಭಟ್ಟರು ಮೋರೆ ಕಿವುಚಿ ಟೀಕಿಸಿದರು.

" ಕಂಡೂ ಕಂಡೂ ಸೂದ್ರರ ನೀರು ಕುಡೀತೀರಲ್ರೀ ಉಮೇಶರಾಯರೆ? ಇನ್ನೆಲ್ಲಿ ಉಳೀತ್ರೀ ಬ್ರಾಹ್ಮಣಿಕಿ ಇನ್ನ?"

"ಲಂಚಕ್ಕೆ ಕೆಡಲಾರದ ಕುಲ ಕೊಂಚಕ್ಕೇ ಕೆಟ್ಟು ಅಂದ್ಹಂಗ ಅದ ಬಿಡ್ರಿ. ರೂಪಾಯಿಗೆ ನಾಲ್ಕಾಣೆ ಬಡ್ಡಿ ಶೂದ್ರರಿಂದ ತಿನ್ನಬಹುದು, ಅವರು ತಂದಿಟ್ಟ ನೀರು ಕುಡೀಬಾರದೇ? ಒಳ್ಳೇ ಬ್ರಾಹ್ಮಣಿಕಿ ನಿಮ್ದೂನು?"

ಕೈಕೆಳಗಿನ ಸಣ್ಣ ವೇತನದ ಬಡ ನೌಕರರಿಗೆ 'ಸಹಾಯ' ಮಾಡುವದು ಮಲ್ಲಾರಿಭಟ್ಟರಲ್ಲಿದ್ದ ಒಂದು ದೊಡ್ಡ ಗುಣ. "ಕಂಡಲ್ಲಿ ಸಾಲ ತಗದು ಕೆಲಸ ಕಳಗಿಳಕೊಂಡೀಯೋ ದಡ್ಡ. ತೊಗೋ, ಎಷ್ಟು ಬೇಕೋ ಅಷ್ಟು ನಾನು ಕೊಡ್ತೀನಿ. ಪೈಲಾಕ್ಕೆ ಪರತು ಕೊಟ್ಟುಬಿಡುವಂತಿ" ಎಂದು ಉದಾರ ಹಸ್ತದಿಂದ ಸೆರೆಕುಡುಕ ಜವಾನರಿಗೆ ಸಂಜೆಗೆ ಸಾಲ ಕೊಟ್ಟು, ವೇತನದ ದಿನ ಮಾತ್ರ ಬಾಯಿಂದಲೂ ಅನ್ನದೆ ಬಡ್ಡಿ ಗಿಟ್ಟಿಸುತ್ತಿದ್ದರು ಮಲ್ಲಾರಿಭಟ್ಟರು.

ನಿತ್ಯದಂತೆ ದೀಪ ಹಚ್ಚಿ ಬರೆಯುತ್ತ ಕೂಡದೆ ಅಂದೇಕೋ ಕತ್ತಲಾಗುವ ಮುನ್ನೆಯೇ ಕಾಗದಗಳನ್ನು ಕೈಚೀಲದಲ್ಲಿ ತುಂಬಿ ಅವಸರದಲ್ಲಿ ಆಫೀಸಿನಿಂದ ಹೊರಬಿದ್ದರು. "ಏನೋ ಬೇಟಿ ಇದ್ದಂತಿದೆ ಭಟ್ಟರಿಗೆ" ಎಂದು ಕಣ್ಣುಸನ್ನೆಯಿಂದ ಮಾತನಾಡಿಕೊಂಡು ಮುಸಿಮುಸಿ ನಕ್ಕರು ಉಳಿದ ನೌಕರರು. ರಸ್ತೆಯ ಬಳಿಗಿದ್ದ ಸೇತುವೆಯ ಮೇಲೆ ಕುಳಿತಿದ್ದ ಎರಡು ವ್ಯಕ್ತಿಗಳು ಭಟ್ಟರನ್ನು ಕಂಡ ಕೂಡಲೆ ಹಲ್ಲು ಕಿರಿದು ಎದ್ದು ಹಿಂಬಾಲಿಸಿದವು. ಕಪ್ಪು ಹಣೆಯ ಮೇಲೆ ಬಿಳೀ ಗಂಧದ ಚಿಕ್ಕೆಯನ್ನಿಟ್ಟ ಮಂಡ ಮೂಗಿನ ಮೊದಲಿಯಾರರು ಮುಂದೆ ಮುಂದೆ, ಜುಲುಮೆಯ ನಗುವನ್ನು ಅಭ್ಯಾಸಿಸುತ್ತಿದ್ದ ಸಾಬಿಯೊಬ್ಬ ಹಿಂದೆ ಹಿಂದೆ, ನಡುಬೀದಿಯಲ್ಲಿಯೇ ಅವರ ಗುಟ್ಟಿನ ಮಾತುಕತೆಗಳು ನಡೆಯಹತ್ತಿದವು. ಸಾಚ ಅಲ್ಲದ ಭಟ್ಟರಿಗೆ ಎಲ್ಲಿಯಾದರೇನು, ಯಾರಾದರೇನು? ಸಾಬಿಯ ಮುಂಗೈ ತಿಕ್ಕುವದೂ ಹಲ್ಲು ಕಿರಿಯುವದೂ ಲೌಕಿಕಪಟುಗಳಾದ ಮಲ್ಲಾರಿಭಟ್ಟರಿಗೆ ಎಷ್ಟೂ ಸರಿಬೀಳಲಿಲ್ಲ. ಮೊದಲಿಯಾರರ ಮಧ್ಯಸ್ತಿಕೆಯೂ ಮೆಚ್ಚುವಂತಿರಲಿಲ್ಲ. ಕೂಡಲೆ ಮೋರೆ ಗಂಟುಹಾಕಿ ಗಂಟಲ ಗೊಗ್ಗರ ಮಾಡಿದರು.

"ಈಗೆಷ್ಟು ತಂದೀದಿ ಅದನಾರೆ ಹೇಳು ಜಟ್ಟಿ" ಎಂದು ನುಡಿದು, ಧೋರಣೆಯನ್ನು ಒಂದು ನಿಲುಕಿಗೆ ತಂದರು. ಕೂಡಲೆ ಜಾದೂ ಆಟ ವಾಯಿತು. ಸಾಬಿಯ ಕಿಸೆಯಿಂದ ನೋಟುಗಳು ಮೊದಲಿಯಾರರ ಮುಷ್ಟಿಗೆ ಹಾರಿ ಭಟ್ಟರ ಕೈಯಲ್ಲಿ ತೂರಿ ಅವರ ಸೊಂಟಕ್ಕೆ ಸೇರಿದವು.

"ಆ ಸುಡುಗಾಡ ಕಾಗದ ನನ್ನದಾರೆ ಅಲ್ಲ. ಅದಕ್ಕೆ ಯೋಚನಿ" ಎನ್ನುತ್ತ, ಅಂದುದಕ್ಕೆ ತಕ್ಕಂತೆ ಯೋಚನೆಯನ್ನು ಮುಖದಲ್ಲಿಯೂ ಮೂಡಿಸಿದರು.

"ತಾವು ಕೈಯಿಟ್ಟರೆ ಇನ್ನೇನದೆ?" ಅರ್ಥಗರ್ಭಿತವಾಗಿ ನುಡಿದು ಮೊದಲಿ ಯಾರರು ಭಟ್ಟರ ಮುಖ ನೋಡಿದರು. ಮುಖಸ್ತುತಿಯೂ ಕೊಂಚ ನಾಟಿತು. ಪ್ರಸನ್ನವದನರಾದ ಮಲ್ಲಾರಿಭಟ್ಟರು ಮಾತು ಮುಂದುವರಿಸಿದರು ;

"ತಲೀ ಮ್ಯಾಲಿನ ಮಾಸ ಆರದ ಹುಡುಗರೂ ಬಂದಾರೋ ಮೊದಲಿ ಯಾರಿ ಆಫೀಸ್ ತುಂಬ. ಈ ಸಿನ್ನ ಕಾಗದ ಆ ಎಡವಟ್ಟು ಉಮೇಶಂದು ಇದೂ...." ಎಂದು ಮಾತು ಮುಗಿಸುವ ಮುನ್ನೆಯೇ ಬೈಸಿಕಲ್ಲನ್ನೇರಿ ಬಂದೇ ಬಂದ ಉಮೇಶ.

"ಸ್ವಲ್ಪ ಇತ್ತಲಾಗ ಹೊಳ್ರೀ ಉಮೇಶರಾಯ್ರೀ" ಎಂದು ಕೂಗಿ ಕರೆ ದರು ಭಟ್ಟರು. ಮೊದಲಿಯಾರನ ಕಿವಿಯಲ್ಲಿ ಅದೇನೊ ಗುಜುಗುಜು ನಡೆ ಯಿತು. ಕಿಸೆಯಿಂದ ತೆಗೆದು ಒಂದೈದು ರೂಪಾಯಿಯ ನೋಟನ್ನು ಭಟ್ಟರ ಕೈಗೆ ಕೊಟ್ಟು, ಸಾಬಿಯೊಂದಿಗೆ ಮೊದಲಿಯಾರಿ ಮಾಯವಾದನು.

ಸೇತುವೆಯ ಕಲ್ಲಿಗೆ ಕಾಲು ಒದೆದು ಸೈಕಲ್ಲ ಮೇಲೆ ಕುಳಿತೇ ಉಮೇಶ "ಏನು ?" ಎಂದ.

"ಆಗ್ಲೆ ಮನೀಗೆ ಏನಪಾ ? ಹೊಸದಾಗಿ ಲಗ್ನ ಆದ ಹುಡುಗರೂ" ಎಂದು ಹಿರಿಯರಿಗೆ ಸಲ್ಲದ ಹುಡುಗಾಟಿಕೆ ಮಾಡಿ ನೋಟನ್ನು ಉಮೇಶನ ಕೈಯಲ್ಲಿಕ್ಕಿದರು. ಕೈಯನ್ನು ಮುಚ್ಚದೆ ಕಕ್ಕಾಬಿಕ್ಕಿಯಾಗಿ ಉಮೇಶ "ಇದಾರಿಗೆ?" ಎಂದ,

"ಇಲ್ಲಿ ತೊಗೋ. ಅಡಚಣಿ ವಳಗೆ ಬಿದ್ದೀದಿ ನೀನೂನು" ಎಂದು ದೊಡ್ಡಸ್ತಿಕೆಯ ಮಾತನಾಡಿ, ಆರೆನಗುತ್ತ ನಶ್ಯದ ಡಬ್ಬಿಗಾಗಿ ಹುಡುಕಾಡಿದರು ಮಲ್ಲಾರಿಭಟ್ಟರು.

"ನನ್ನ ಆಡಚಣೀಗೆ ನೀವ್ಯಾಕೆ ಕೊಡಬೇಕು?" ಏನೂ ಅರ್ಥವಾಗದೆ ಭಟ್ಟರ ಮುಖವನ್ನೇ ದಿಟ್ಟಿಸಿದ.

"ಇದಕ್ಕೇ ಮತ್ತೆ ಹುಡುಗ ಬುದ್ಧೀ ಅನ್ನೋದು. ಸಿಕ್ಕಿದ್ದು ಮುಕ್ಕಣ್ಣ ಅಂತ ಕಿಸೇ ಸೇರಿಸಿ ಹಾರಲಿಲ್ಲ ಸುಮ್ನೆ" ಎಂದು ಕಣ್ಣುಸನ್ನೆ ಮಾಡಿ ಮುಂದಿನ ಸಂದರ್ಭವನ್ನು ಬಹು ಜಾಣತನದಿಂದ ಸೂಚಿಸಿದರು. ಉಮೇಶನಿಗೆ ಎಲ್ಲವೂ ಹೊಳೆಯಿತು ಸಾವಕಾಶವಾಗಿ.

"ಇದು ಮಾತ್ರ ಬ್ಯಾಡ ನೋಡ್ರಿ. ದಯಮಾಡಿ ಕ್ಷಮಿಸ್ರಿ ನನ್ನ" ಎಂದು ನೋಟನ್ನು ಭಟ್ಟರ ಕಿಸೆಗೆ ಚೆಲ್ಲಿ ಸೈಕಲ್ಲು ಜೋರಾಗಿ ತುಳಿದ.

"ಎಲಾ ಇಲ್ಲಿ ಬಾರೋ, ಹುಡುಗ ನೀನಿನ್ನೂ. ಬಂದ ಲಕ್ಷ್ಮೀನ್ನ ಹಿಂಗೆ ಒದೀಬಾರದು, ಅದೂ ಸುಕ್ಕರವಾರ ಸಂಜೀಮುಂದೆ."

"ಕೊಡೋ ದೇವರು ಕೊಟ್ಟೇ ಕೊಡ್ತಾನೇಳ್ರಿ."

"ಕೊಡ್ತಾನ ನಿನ್ನ ತಲಿ! ಇನ್ಹ್ಯಾಂಗೆ ಕೊಡಬೇಕು ನಿನಗೆ? ಶಂಖಚಕ್ರ ಗದಾಪದ್ಮ ಹಿಡಕೊಂಡು ಬಂದು ನಿನ್ನ ಮುಂದ ನಿಂತು, ನಾನು ದೇವರಪಾ ಅಂತ ಆಣಿಮಾಡಿ ಒದರಿ ಹೇಳಿ ಕೊಡ್ಬೇಕು ಕಾಣ್ತದೆ ನಿಂಗೆ." ಈ ಕಲಿ ಯುಗದಲ್ಲಿ ಇದ್ದಂತೆ ಕಾಣಿಸಿಗೊಳ್ಳಲು ದೇವರಿಗೂ ಅಂಜಿಕೆಯೆಂಬ ಭಟ್ಟರ ಭಾವನೆ ಉಮೇಶನಿಗೆ ನಗೆಯನ್ನು ತಂದಿತು. ಅಂತೂ ಉಮೇಶನೇನೋ ಪಾರಾದ. ಕೂಡಲೆ ಟ್ರಾನ್ಸಫರ್ ಸೀನರಿ ಆಯಿತು. ಸಾಬಿ ಮತ್ತು ಮೊದಲಿ ಯಾರಿ ಭಟ್ಟರ ಮುಂದೆ ನಿಂತಿದ್ದರು. ನಿರಾಶೆಯನ್ನು ವ್ಯಕ್ತಪಡಿಸಿ, ಹಿಂಡುವ ಹಸುವನ್ನು ಕೊಂದುಕೊಳ್ಳುವಷ್ಟು ಹೆಡ್ಡರಲ್ಲ ಮಲ್ಹಾರಿಭಟ್ಟರು. ಮೂಗು ಎಳೆಯುತ್ತ ಮುಂದೆ ನುಡಿದರು :

"ಈಗಿನ ಕಾಲದ ಹುಡುಗರಿಗೆ ಆಶಾನಾದರೂ ಎಷ್ಟು ಅಂತೀನಿ. ಐದು ರೂಪಾಯಿ ಅಂದ್ರ ನಜ್ರೇ ಇಲ್ಲ!"

"ಇನ್ನಾ ಎಷ್ಟು ಅಂದ್ರುರೀ ಆ ರಾಯರು?"

"ಐಬಃ ಹತ್ತಗೊಡವಲ್ಲ ಅಂದ್ರೆ! ಎರಡಕ್ಕೆ ಕಡಿಮಿ ಆದ್ರೆ ಅವನೇನು ಜುಂ ಅನ್ಹ್ಯಾಂಗೆ ಕಾಣಲಿಲ್ಲ ಬಿಡು."

"ಇರಲಿ ತಗಳ್ರಿ, ಅವರೂ ತಿಲ್ಲಿ ಪಾಪ."

"ಬಾ,ಮ್ಣ—ತಿಂದ್ರೇನು ತೆಪ್ಪು ಬಿಡು. ತಿಲ್ಲಿ."

ಮಲ್ಲಾರಿಭಟ್ಟನೂ ಬ್ರಾಹ್ಮಣನೇ. ಸಾಬಿಯು ಹಣಕ್ಕೆ ಯಾವ ಬ್ರಾಹ್ಮಣನಾದರೇನು?

## ೫. ದೇವರು ಕೊಡಬೇಕು.

ಸಂಜೆಯ ಸೂರ್ಯ ಪಶ್ಚಿಮಾಂಬುಧಿಯನ್ನು ಹೊಕ್ಕು ಕೆನ್ನೀರನ್ನು ಭೂಮಿಗೆ ಎರಚುತ್ತಿದ್ದಾನೆ. ಬೆಳಕು ಹೋಗುವ ಓಟದಲ್ಲಿದೆ. ಕತ್ತಲು ಅಂಜಂಜುತ್ತ ಕಾಲಿಡುತ್ತಲಿದೆ. ಇಡೀ ದಿನವೂ ಬಿಸಿಯುಸಿರನ್ನು ಬೀಸಿ ಬೇಸತ್ತು, ಅದೀಗ ಗಾಳಿ ತಂಪಾಗುತ್ತಲಿದೆ. ನೆಲದ ಕಾವು ಆರುತ್ತಲಿದೆ. ಆಟದ ಬಯಲುಗಳಲ್ಲಿ ಕಿರಿ ಹಿರಿ ಬಾಲಕರು ಗುಂಪುಗುಂಪಾಗಿ ಸೇರಿ, ಭರದಿಂದ ಓಡಿ ಕಾಲ್ಚೆಂಡನ್ನು ಒದಿಯುತ್ತಲಿದ್ದಾರೆ. ಕೆಳಗಣ ವರ್ಗದ ಮಧ್ಯಮ ತರಗತಿಯ ಪಿಂಚಿನಿಖೋರರು ಕೈಬಡಿಗೆಗಳನ್ನು ಹಿಡಿದು ಹೂದೋಟದಲ್ಲಿ ಬರಹತ್ತಿದ್ದಾರೆ. ಮುನ್ನೆಯೇ ಬಂದು ಕುಳಿತ ಹಲವರು ಹೆರವರ ಕತೆಗಳನ್ನು ಅರಿಯದವರ ಮುಂದೆ ತಮ್ಮದಾಗಿ ಹೇಳಿಕೊಂಡು ಹೆಮ್ಮೆಪಡುತ್ತಲಿದ್ದಾರೆ.

ಹೊರ ಕಟ್ಟೆಯ ಮೇಲೆ ಕುಳಿತು ಬೇಸತ್ತು ಎರಡೆರಡು ಬಾರಿ ಆಕಳಿಸಿ ನಾಗಮ್ಮ ಒಳಬಂದಳು. ಮಾವನವರಿನ್ನೂ ಒಳಗೆ ಬಂದಿರಲಿಲ್ಲ. ಉದಕ ಮಂಡಲದಿಂದ ಹೊಸದಾಗಿ ತಂದಿದ್ದ ಅಲ್ಶೇಶನ್ ತೋಳ್ನಾಯಿ ಅವರನ್ನು ಆಡ್ಡಾಡಿಸಲು ಕರೆದೊಯ್ದಿದೆ. ಕಾವೇರಿ ಪಕ್ಕದ ಓಣಿಯಲ್ಲಿರುವ ತಪ್ಪುರ ಮನೆಗೆ ಹೋಗಿದ್ದವಳು ಇನ್ನೂ ಬರಲಿಲ್ಲ. ಏನೂ ಮಾಡಲು ತೋಚದೆ ನಾಗಮ್ಮ ಕಾವೇರಿಯ ಕೋಣೆಯಲ್ಲಿ ಕಾಲಿಟ್ಟಳು. ತಲೆದಿಂಡಿನ ಮೇಲೆ ಒರಗಿದ್ದಿತು 'ಮಹಾಸತಿವೃತೆಯರ ಕತೆಗಳು'. ಅಂದೊಮ್ಮೆ ರಂಗರಾಯರು ಡಾಕ್ಟರನ್ನು ಕಂಡು ಹಿಂತಿರುಗಿ ಬರುವಾಗ ಕೊಂಡುತಂದ ಪುಸ್ತಕವಿದು. ಕಣ್ಣಿಗೆ ನಿದ್ರೆ ಬರುವ ವರೆಗೂ ಇದರಲ್ಲಿಯ ಶ್ರೇಷ್ಠ ಮಹಿಳೆಯರ ಕತೆಗಳನ್ನು ನಿತ್ಯವೂ ಓದಲೇಬೇಕೆಂದು ಕಾವೇರಿಗೆ ಕಟ್ಟಾಜ್ಞೆಯಾಗಿದ್ದಿತು. ಕಾವೇರಿ ಮಲಗುವ ವರೆಗೂ ರಾವಸಾಹೇಬರು ವರಾಂಗಣದಲ್ಲಿ ಬ್ರಿಟ್ಟಾಳೊಟ್ಟಿಗೆ ಆಡಿ ದಣಿದು ಸಲಾಮು ತೆಗೆದುಕೊಂಡು ಕಡೆಗೆ ಬಂದು ಮಲಗುವದು ನಿತ್ಯದ ವಾಡಿಕೆ. ನಸುಕಿನಲ್ಲಿಯೇ ಉಣ್ಣೆಯ ಮಫ್ಲರ ಕಿವಿ ಮುಚ್ಚುವಂತೆ ಕಟ್ಟಿ ನಾಯಿಯೊಂದಿಗೆ ಚೆಂಡಾಡುತ್ತಿದ್ದರು. ಬ್ರಿಟ್ಟಾಳು ಚೆಂಡು ಹಿಡಿದು ತಂದಾಗ

ಲೆಲ್ಲ ರಾಯರ ಆನಂದ ಇಮ್ಮಡಿಯಾಗುತ್ತಿದ್ದಿತು. [illegible] ಅದೊಂದು ಬಾರಿ ಬ್ರಿಟ್ಟಾಳು ಭಿಕ್ಷುಕರ ಕುತ್ತಿಗೆಜೆಂಡನ್ನು ಹಿಡಿದಾಗ ಮಾತ್ರ ಸಿಟ್ಟಿಗೆ ಬಂದು ಆದರ ಬಾಯಿಗೆ ಸಿಕ್ಕ ಭಿಕ್ಷುಕನನ್ನು ಸಿಕ್ಕಾಪಟ್ಟೆ ಬೈಯುತ್ತಿದ್ದರು. ಇದವರ ಉಷಃ ಕಾಲದ ಕಾರ್ಯಕ್ರಮ.

ದೀಪದ ಮುಂದೆ ಕುಳಿತು ನಾಗಮ್ಮ ಒಂದೆರಡು ಪುಟಗಳನ್ನು ತಿರುವಿದಳು. ಪುರುಷರಚಿತ ಪುಸ್ತಕ. ಹೆಣ್ಣಿಗೊಂದು ಮುಳ್ಳ ಬೇಲಿ. ತನ್ನ ಪಾತಿವ್ರತ್ಯಕ್ಕೆ ತಾನೇ ಹೆಮ್ಮೆಪಟ್ಟುಕೊಂಡಳು. ಮುನ್ನೋಡಿ ಓದುವ ಆವೇಶದಲ್ಲಿ ಒಳಬಂದವರ ಸುಳಿವೇ ಹತ್ತಿರಲಿಲ್ಲ ಆವಳಿಗೆ. ಹಿಂದಿನಿಂದಾರೋ ಕಣ್ಣು ಮುಚ್ಚಿದರು. ಒಮ್ಮೆಲೆ ಚಕಿತಳಾದಳು.

" ತಗೀರಿ, ಸಾಕು ನಾನೊಲ್ಲೆ. ಇದೇನು ಸುಡುಗಾಡು ಸಿನೇಮಾದಾಗ ಮಾಡಿಧಾಗೆ." ಕೋಪದ ಸೋಗು ಹಾಕಿದಳು. ಕಣ್ಣು ಮುಚ್ಚಿದ ಕೈ ಮುಟ್ಟಲು ಮಾತ್ರ ನಾಚಿದಳು.

" ತಗೀರೀ, ಕಾವೇರಿ ಬಂದಗಿಂದಾಳು ಧಿಡೀನೆ " ಎಂದು ಕೈ ಬಿಡಿಸಿಕೊಳ್ಳಲು ಹವಣಿಸಿದಳು. ಆ ಕೈಯಲ್ಲಿಯ ಬಳೆಗಳು ನಾಗಮ್ಮನ ಕೈಗೆ ತಾಗಿದವು. ಕಾವೇರಿ ಗಹಗಹಿಸಿ ನಕ್ಕುಬಿಟ್ಟಳು. ನಾಗಮ್ಮನ ಮುಖ ಕೊಂಚ ಹುಚ್ಚಿಟ್ಟಿತು.

" ಇದೇನು ಹುಚ್ಚುಚ್ಚೀ ಕಾವೇರಿ ? ಇದೆಲ್ಲ ನನಗೆ ಸೇರೋದಿಲ್ಲವ್ವ ನನ್ತಾಯಿ " ಎಂದು ಚೆದುರಿದ ಮುಂಗುರುಳುಗಳನ್ನು ನಾಗಮ್ಮ ಸರಿಪಡಿಸಿಕೊಂಡಳು. ಮಾತಿನಲ್ಲಿ ತೋರಿಸಿದಷ್ಟು ಕೋಪ ಮುಖದಲ್ಲಿ ಬರಲಿಲ್ಲ.

ಅತ್ತೆ-ಸೊಸೆಯರು ಅಕ್ಕ-ತಂಗಿಯರಂತೆ ಕಂಡರು. ಕಾವೇರಿಗೆ ಅತ್ತೆಯ ಹಿರಿತನ ಎಂದೋ ಬಂದಿದ್ದರೂ ವಯಸ್ಸಿನಲ್ಲಿ ಮಾತ್ರ ನಾಗಮ್ಮನಕಿಂತಲೂ ಹಲವಾರು ತಿಂಗಳುಗಳು ಕಿರಿಯವಳೇ. " ಅತ್ತೇರೆ " ಎಂದು ಸಂಬೋಧಿಸುವ ಅಭ್ಯಾಸವೇ ಆಗಲಿಲ್ಲ ಸೊಸೆಗೆ, ಮೊದಲಿನಿಂದಲೂ. ಒಂದೆರಡು ಬಾರಿ ಅತ್ತೆ ಎಂದಾಗ " ಹಾಗ ಮಾತ್ರ ಕರೀಬ್ಯಾಡ ನೋಡು, ನಾಗೂ " ಎಂದು ಕಾವೇರಿ ಬಹು ದೈನ್ಯದಿಂದ ಕೇಳಿಕೊಂಡಿದ್ದಳು. " ನೀನು ಅತ್ತೆ ಸುಳ್ಳೇನೆ ? " ಎಂದು ನಾಗಮ್ಮ ನಗೆಯಾಡಿದ್ದಳು. ಕಾವೇರಿಯ ಕಣ್ಣು ಇಡೀ ದಿನವೂ ತೇವವಾಗಿದ್ದವು. ಮುದಿಗಂಡನ ಹೆಂಡತಿಯೆಂಬ ನೆನವು

ಅವಳನ್ನು ತಲೆಬಾಗುವಂತೆ ಮಾಡಿದ್ದಿತು. "ತಪ್ಪಾತೇ ನಮ್ಮನ್ನ, ಅತ್ತೆ ಅಂದದ್ದು" ಎಂದು ಹತ್ತು ಹತ್ತು ಸಲ ಗಲ್ಲ ಹಿಡಿದು ಸಮಾಧಾನಪಡಿಸಿ ನಾಗಮ್ಮ ಬುದ್ಧಿ ಕಲಿತಿದ್ದಳು. ಈರ್ವರಲ್ಲಿಯೂ ಸ್ನೇಹ ಸೌಹಾರ್ದತೆ ಸಹಜವಾಗಿ ಬೆಳೆದು ಒಬ್ಬರ ಮನಸ್ಸನ್ನೊಬ್ಬರು ಚೆನ್ನಾಗಿ ಅರಿತಿದ್ದರು. ಎಂತಹ ಗುಟ್ಟಿನ ವಿಷಯವನ್ನಾದರೂ ಕೊಂಚವೂ ಮರೆಮಾಜವೆ ಮನಬಿಚ್ಚಿ ಮಾತನಾಡಿಕೊಳ್ಳುತ್ತಿದ್ದರು ತಾವಿಬ್ಬರೇ ಇದ್ದಾಗ.

"ಉಮೇಶನೇ ಬಂದು ಕಣ್ಣು ಮುಚ್ಚಿದ ಅಂತ ಮಾಡಿದ್ದೆಲ?" ಎಂದು ಕಾವೇರಿ ಗೇಲಿಗೆ ಸುರುಮಾಡಿದಳು. ನಾಗಮ್ಮ ಯಾವ ಉತ್ತರವನ್ನೂ ಕೊಡದೆ ಕೈಲಿದ್ದ ಪುಸ್ತಕವನ್ನು ಓದುವವಳಂತೆ ನಟಿಸಿದಳು. ಅವಳ ತುಟಿಯಲ್ಲಿ ಮಾತ್ರ ತೃಪ್ತಿಯ ನಗುವೊಂದು ಸುಳಿಯಿತು.

"ಎಲ್ಲಾದಕ್ಕೂ ಪುಣ್ಯ ಬೇಕು ನೋಡೇ ನಾಗೂ" ಎಂದು ಕಾವೇರಿ ಮಾತು ಮುಂದುವರಿಸಿ, ಮಾತಿನ ಝುರಿಯನ್ನೇ ಡೊಂಕು ಮಾಡಿದಳು. ಹೃದಯದ ಹಗುರತೆಯೂ ಮಾಯವಾಯಿತು. ನಿರುತ್ಸಾಹ ಅವಳ ಮಾತಿನಲ್ಲಿ ದನಿಗೂಡಿತು.

"ಸಾಕು, ನೋಡ್ಲಾರೆ. ನಿನಗೆ ಮಾತ್ರ ದೇವ್ರು ಕಡಿಮಿ ಮಾಡ್ಯಾನೇ, ಕಾವೇರಿ?" ಮಾತನಾಡಲೇಬೇಕಾದುದರಿಂದ ನಾಗಮ್ಮ ಈ ಮಾತನ್ನಾಡಿದಳು.

"ಉಡ್ಲಿಕ್ಕೆ ಕೊರತೇ, ಉಣ್ಲಿಕ್ಕೆ ಕೊರತೇ. ದೇವ್ರೂ...."

ಕಾವೇರಿ ಮಧ್ಯದಲ್ಲಿಯೇ ಬಾಯಿ ಹಾಕಿದಳು.

"ಆ ತುತ್ತನ್ನ, ಗೇಣು ಬಟ್ಟೆಯೇನು ತಿರಕೊಂಬೋವ್ರಿಗೂ ಇರ್‍ತದೆ" ಎಂತಹ ಎದೆಗುರುಡರಿಗೂ ಅರ್ಥವಾಗುವಂತೆ ನುಡಿದು ಕಾವೇರಿ ಸುಮ್ಮನಾದಳು. ಪುಸ್ತಕವನ್ನೋದಿದಂತೆ ನಾಗು ಕಾವೇರಿಯ ಹೃದಯವನ್ನೋದಿದಳು. ಮಾತುಗಳೇನೋ ಹಾಗೆಯೇ ಬೆಳೆದವು.

"ಹಾಗಾದರೆ ಯಾವನಾರ ತಿರುಕರ ಹುಡುಗನ್ನ ಮದಿವಿ ಆಗಿದ್ದರೇ ಛಲೋ ಇತ್ತು ಅಂತ ಎಂದಾದರೂ ಅನಿಸೇದೇನು ಕಾವೇರಿ ನಿನ್ಗೆ?"

"ಇನ್ನೂ ಹ್ಯಾಗೆ ಹೇಳ್ಲೇ ನಾಗೂ ನಿಂಗೆ? ದಿನದಾಗ ಒಂದು ಸಾವಿರ ಬಾರಿ ಆದರೂ ಅನುಕೋತೀನಿ ನೋಡು."

"ಹಾಗೇ ಮಾಡಲಿಲ್ಲ ಯಾಕೆ ಮೊದಲು? ಯಾರೇನು ಬ್ಯಾಡಂದ್ರೇನು ನಿನ್ನ, ಮಾಡಿಕೊಂಬಾಕಿನ್ನ?"

ನಿಜವಾಗಿಯೂ ಬೇಡವೆಂದೇ ಅಂದಿದ್ದರು. ತನ್ನ ತಂದೆಯ ದ್ರೋಹವೆಲ್ಲವೂ ಪೂರ್ತಿಯಾಗಿ ತಿಳಿದಿದ್ದಿತು ಕಾವೇರಿಗೆ. ಎರಡು ಸಾವಿರ ರೂಪಾಯಿಗಳನ್ನು ಗಳಿಸಿಕೊಂಡು ಕಾವೇರಿಯನ್ನು ರಂಗರಾಯರಿಗೆ ಕೊಟ್ಟಿದ್ದರು ಕುಲಕರ್ಣಿಗಳು. ಇದು ನೆನಪಾದಾಗಲೆಲ್ಲವೂ ತಂದೆಯನ್ನು ಮನದಲ್ಲಿಯೇ ಶಪಿಸುತ್ತಿದ್ದಳು. ತೌರುಮನೆಯ ಹೊಸ್ತಿಲಲ್ಲಿ ಕಾಲಿಡದೆ ಎಷ್ಟೋ ದಿನಗಳು ಕಳೆದಿದ್ದಳು. ತನ್ನ ವಗತನ ಮಾತ್ರ ಚೆನ್ನಾಗಿದ್ದಿದ್ದರೆ ತವರನ್ನು ತಿಪ್ಪೆಯಂತೆ ಕಾಣುತ್ತಿದ್ದಳು. ಹೃದಯದ ನೋವನ್ನು ತೋಡಿಕೊಳ್ಳಲು ತಾಯಿಗಿಂತ ಹೆಚ್ಚಿನವರಾರೆಂದು ಅಳಲು ಆಗಾಗ್ಗೆ ಆ ಮನೆಗೆ ಹೋಗುತ್ತಿದ್ದಳು.

"ಹುಚ್ಚೀ, ನಾಡಹುಚ್ಚೀ. ಇದಕ್ಕೆಲ್ಲ ಅತ್ರೆ ಭಾಳಾತು. ಆದಾವು ಆಗೋ ಕಾಲಕ್ಕೆ, ದೇವ್ರು ಕೊಡಬೇಕು" ಎಂದು ಏನೊಂದು ಸುಳ್ಳು ಸಮಾಧಾನವನ್ನು ಹೇಳಿ ಕಳುಹುತ್ತಿದ್ದಳು.

ನಾಗಮ್ಮನ ಪ್ರಶ್ನೆಗೆ ಉತ್ತರವನ್ನು ಕೊಡುವ ಹವ್ಯಾಸಕ್ಕೇ ಹೋಗದೆ "ಇನ್ಯಾಕೆ ಬಿಡು ಆ ಮಾತು — ಅದೇನೋ ಅಂತಾರಲ್ಲ .... ಹಾಗೆ" ಎಂದು ಮಾತು ಮುಗಿಸುವ ರೀತಿ ನುಡಿದು ಉಸಿರುಬಿಟ್ಟಳು. ಸತ್ತ ಮಾತನ್ನೇ ಅತ್ತಿತ್ತ ಜಗ್ಗಾಡುತ್ತ ನಾಗಮ್ಮ ಏನೇನನ್ನೋ ಕೇಳಿದಳು. ಮುಂದಿನ ಪ್ರಶ್ನೆಗಳು ಕಾವೇರಿಯ ಹಳೆಯ ಗಾಯಕ್ಕೆ ಹೊಸ ಬರೆ ಕೊಟ್ಟಂತಾಯಿತು. ಆದರೂ ಮಾತಿನ ಮರೆಯಲ್ಲಿ ಅಂತಃಕರಣದ ಕಾವಿದ್ದುದರಿಂದ ಸಂಕೋಚವಿಲ್ಲದೆ ಕಾವೇರಿ ಮನಬಿಚ್ಚಿ ಹೇಳಿಕೊಂಡಳು. ಈರ್ವರೂ ಬಹಳ ಹೊತ್ತು ಹಾಗೆಯೇ ಕುಳಿತರು. ದುಃಖ ತನ್ನದೆಂಬಂತೆ ನಾಗು ಮರುಗಿದಳು. ಈರ್ವರ ಕಂಗಳೂ ನೀರೊಡೆದವು. ಇವುಗಳಲ್ಲಿ ಅವರವರ ಹೃದಯಗಳು ತೇಲಿದವು.

"ಅಸ್ರಂತ ಆ ನಾಯಿಯೊಟ್ಟಿಗೇ ಸಾಯ್ತಾರೆ...." ಮುಂದೆ ಏನನ್ನೋ ಹೇಳುವವಳಿದ್ದಳು.

"ಛೇ! ಹಾಲು ತುಪ್ಪ ಅನ್ನು" ಎಂದು ಕಾವೇರಿಯ ಬಾಯಿಗೆ ನಾಗಮ್ಮ ಕೈ ಇಟ್ಟಳು.

ಹೊರಬಾಗಿಲಲ್ಲಿ ಬ್ರಿಟ್ವಾಳು ಗವ್ ಎಂದಿತು. ಸೆರಗು ಸರಿಪಡಿಸಿ ಕೊಂಡು ನಾಗಮ್ಮ ಒಳನಡೆದಳು. ಕಾಲು ಚಾಚಿಕೊಂಡು ಕುಳಿತ ಕಾವೇರಿ ಕದಲಲಿಲ್ಲ.

## ೬. ಕತ್ತೆಯ ಮುಂದೆ ಕಡಲೆ ಹೂರಣ

ಊರಲ್ಲಿ ಚುನಾವಣೆ. ಅದೂ ಒಂದು ದೊಡ್ಡ ಹಬ್ಬ. ಮೈಗಳ್ಳರಿಗೂ ಬೇಕಾದಷ್ಟು ಕೆಲಸ. ಮತವನ್ನು ಮಾರಿಕೊಳ್ಳುವವರಿಗೆ ಉತ್ತಮ ಸಂಧಿ. ಧನಿಕರ ದುಂದುಗಾರಿಕೆಯ ದೊಡ್ಡಸ್ತಿಕೆಗೆ ಅನುಕೂಲಿಸುವ ಸುಯೋಗ. ಸೆರೆ ಕುಡಿಯುವವರಿಗೆ ಸೆರೆ, ಭಾಷಣಗಳನ್ನು ಮಾಡುವವರಿಗೆ ಕೇಳುವವರು, ಅಂತೂ ಎಲ್ಲರ ತಲುಬುಗಳನ್ನೂ ತೃಪ್ತಿಪಡಿಸುವ ಸಮಾರಾಧನೆ. ಮಹಾ ಸಂತರ್ಪಣೆ. ಒಂದು ಪಿಡುಗು. ಸಾಂಕ್ರಾಮಿಕ ಪ್ರಜಾಪ್ರಭುತ್ವದ ಕಾಲ ಶ್ರಾದ್ಧ.

ಆಫೀಸಿನಲ್ಲಿ ಹಗಲೆಲ್ಲವೂ ಎತ್ತಿನಂತೆ ದುಡಿದು ಕತ್ತೆಯಂತೆ ಮೂಟೆ ಹೊತ್ತು ಕಾಗದಗಳನ್ನೂ ಮನೆಗೆ ತರುತ್ತಿದ್ದ ಉಮೇಶ. ಚುನಾವಣೆಯ ಮೋಜನ್ನು ನೋಡುತ್ತ ನಿಂತವರೊಟ್ಟಿಗೆ ತಾನೂ ನಡು ರಸ್ತೆಯಲ್ಲಿಯೇ ನಿಂತ. ಕಳ್ಳಪೇಟೆಯ ಸೊಲ್ಲನ್ನೇ ಅಡಗಿಸಲು ಕಂಕಣತೊಟ್ಟು, ಸೊಂಟ ಕಟ್ಟಿ, ಸಚಿತ್ರ ಕರಪತ್ರಗಳನ್ನು ಹಂಚಿಸಿದ ಮುಖಂಡರೇ ಯುದ್ಧಕಾಲದ ಬೆಲೆ ಕೊಟ್ಟು ಮತಗಳನ್ನು ಕೊಳ್ಳುತ್ತಿದ್ದರು ಲಿಲಾವಿನಲ್ಲಿ. ಪಾನನಿರೋಧ ವನ್ನು ಕಾಯಿದೆ ಮಾಡಿಸುತ್ತೇವೆ ಎಂದು ಸಾರುತ್ತಿದ್ದ ಮುಂದಾಳುಗಳು ಬಹುಸಂಖ್ಯಾಕರಾದ ಮೂರನೆಯ ದರ್ಜೆಯ ಮಂದಾಳುಗಳಾದ ಮತ ದಾರರಿಗೆ ಸೆರೆಸುರಿಸುತ್ತಿದ್ದರು. ಮತಗಳಿಗಾಗಿ ಶೀಲವಿಲ್ಲದವರ ಕುಲದ ಗೊಂದಲ ವಂತೂ ಮೇರೆ ತಪ್ಪಿದ್ದಿತು. ಜಾತಿ-ಪಂಗಡಗಳನ್ನು ಕಟ್ಟಿ ಜನರು ಜಗಿಯು ತ್ತಿದ್ದರು. ಉಮೇಶ ಬೆಮರೊಡೆದು ನಿಂತ. ಮೂರ್ಖ ಮತದಾರರು, ದುಡುಕಿನ ಹುರಿಯಾಳುಗಳು! ಚುನಾವಣೆಗೆ ಏನಾದರೂ ಅರ್ಥವಿದೆಯೆ ಎಂದೆನಿಸಿತು ಉಮೇಶನಿಗೆ. ಪ್ರಜಾಪ್ರಭುತ್ವವೆಂದು ಚೀರಾಡುವ ಪ್ರಜಾ ಹಿತೈಷಿಗಳಿಗೆ ಈ ನಿಜಸ್ಥಿತಿಯ ಪರಿವೆ ಇದೆಯೇ ಎಂಬ ಸಂಶಯ ತಲೆ

ಡೋರಹತ್ತಿತು. ಸರ್ವಾಧಿಕಾರಿತ್ವ ನಾಗರಿಕತೆಗೇ ಸಾವು ತಂದೀತು ನಿಜ, ಆದರೆ ನೂರು ಮೂರ್ಖರು ಸೇರಿ ಒಬ್ಬ ಜಾಣನಾಗಲು ಸಾಧ್ಯವೆ?

ಉಮೇಶ ಕಾಲೇಜಿನಲ್ಲಿದ್ದಾಗ ಜರುಗಿದ ಬಹು ಸ್ವಾರಸ್ಯದ ಚುನಾವಣೆಯೊಂದರ ನೆನಪು ಬಂದಿತು. ಹಾಸ್ಟೆಲಿನ ಕಾರ್ಯದರ್ಶಿಯಾಗಿ ತಾನು ಅವಿರೋಧಿಯಾಗಿ ಆರಿಸಿ ಬಂದಿದ್ದನು. ಎಲ್ಲ ವಿದ್ಯಾರ್ಥಿಗಳಿಗೂ ಊಟ ತಿಂಡಿಯನ್ನೊದಗಿಸಿ ಎಲ್ಲರ ಪ್ರೀತಿಯನ್ನೂ ಪಡೆದನು. ವಾರಕ್ಕೊಂದು ಸಿಹಿ, ಊಟಕ್ಕೆರಡು ಪಲ್ಲೆ, ಬೆಳಗಿನಲ್ಲಿ ಕ್ಯಾಬೇಜು, ರಾತ್ರಿಗೆ ಹಪ್ಪಳ, ಲಿಂಬೇಕಾಯಿ ಮಾವಿನಕಾಯಿ ಹಗಲಕಾಯಿ ಉಪ್ಪಿನಕಾಯಿಗಳು, ಈರುಳ್ಳಿಯ ಹುಳಿ, ಕೆನೆಮೊಸರು ಮುಂತಾದ ಕಾರ್ಯಕ್ರಮಗಳು ಸುಗಮವಾಗಿ ಸಾಗಿದವು. ತಿಂಗಳೊಪ್ಪತ್ತಿಗೆ ಮೂವತ್ತು ಮೂವತ್ತೈದು ರೂಪಾಯಿಗಳ ವರೆಗೂ ಪ್ರತಿ ವಿದ್ಯಾರ್ಥಿಗೂ ಖರ್ಚು ಬರುತ್ತಿದ್ದಿತು. 'ಹಾಕಿ' ಆಡಿ ಹಿಂತಿರುಗುವಾಗ ಜೋಯಿಸ ರಾಮಾಚಾರಿ ಒಂದು ಸಲಹೆಯನ್ನು ಸೂಚಿಸಿದ. ಎಲ್ಲರೂ ಒಪ್ಪುವಂತಹದೇ—ಇನ್ನು ಮೇಲೆ ವಾರಕ್ಕೆರಡು ಸಿಹಿಗಳು ಆಗಬೇಕೆಂದು. ಹರುಕು ಬಟ್ಟೆಯ ಹಲವರೂ ಗಾಂಧೀ ಮರಿಗಳು ಕೆಲವರೂ ಇದಕ್ಕೆ ಸಮ್ಮತಿಸಲಿಲ್ಲ. ಬಂಗಾಲದ ಬರಗಾಲವನ್ನು ನೆನಪಿಗೆ ತಂದು ಕೊಟ್ಟು ದೇಶ ಕ್ಷೋಭೆಯಲ್ಲಿ ಗೋಳಿಡುತ್ತಿರುವಾಗ ಸಿಹಿ ಊಟಗಳನ್ನು ಹೆಚ್ಚಿಸುವುದು ಅನವಶ್ಯ ದುಂದುಗಾರಿಕೆಯೆಂದು ಅರ್ಥಸಚಿವರಂತೆ ತಿಕ್ಕಾಡಿದರು. ಎರಡು ಸಿಹಿಯ ಗೊತ್ತುವಳಿ ರೂಪು ತಾಳಿತು. ಶಾಸನಸಭೆಯ ಮೇಲ್ಮನೆಯಲ್ಲಿಯ ಪೂರ್ವಿಕ ಮಂತ್ರಿಗಳ ಭಾಷಣಗಳಂತೆ ವಿದ್ಯಾರ್ಥಿಗಳು ಭೀಕರ ಭಾಷಣಗಳ ಸುರಿಮಳೆ ಮಾಡಿದರು. ಈ ಗೊತ್ತುವಳಿಯನ್ನು ಮಂಡಿಸಿದ ರಾಮಾಚಾರಿಗೆ ಇಡೀ ವರ್ಷವೂ ಪಕ್ಷ ಮಾಸವೇ ಇರಬೇಕೆಂದು ಒಬ್ಬ ಟೀಕಿಸಿದನು. ಹಾಕಿ ಸ್ಟಿಕ್ಕನ್ನು ಮೇಲೆತ್ತಿ ಅವನ ತಲೆಯೊಡೆಯುತ್ತೇನೆಂದು ರಾಮಾಚಾರಿ ಪರಾಕ್ರಮವನ್ನು ತೋರಿಸಿದನು. ಅಹಿಂಸಾವಾದಿಗಳು ಅಡ್ಡ ಬಂದು ಬರೀ ತಲೆಗಳ ಬಡಿದಾಟವನ್ನು ತಡೆಹಿಡಿದರು. ಖರ್ಚನ್ನು ಹೀಗೆ ಅಪರಿಮಿತವಾಗಿ ಹೆಚ್ಚಿಸುತ್ತ ಹೊರಟರೆ ಬಡಹುಡುಗರ ಗತಿ ಏನೆಂದು ಉಮೇಶ ಎಲ್ಲರನ್ನೂ ಕೇಳಿಕೊಂಡ. ಇದರ ಪ್ರತಿಕ್ರಿಯೆಯಾಗಿ ಕಾರ್ಯದರ್ಶಿ ಉಮೇಶನ ಮೇಲೆಯೇ ಅವಿಶ್ವಾಸ ಗೊತ್ತುವಳಿಯ ಸೂಚನೆಯೂ ಹಿಂದೆಯೇ ಬಂದಿತು.

ಅಂತೂ ಎರಡು ಸಿಹಿಗಳ ಪ್ರಶ್ನೆ ಬಹು ಗಹನವಾಗಿ ಬೆಳೆದು ಪೂರ್ಣ ಸಭೆ ಸೇರಿತು. ಈ ಗೊತ್ತುವಳಿಯ ಬಗ್ಗೆ ಮತಗಣನೆಯಾಗಲೇಬೇಕಾಯಿತು. ರಾಮಾಚಾರಿಯ ಗೊತ್ತುವಳಿಗೆ ಬಹುಸಂಖ್ಯಾಕರಾದ ಬಲ್ಲಿದರ ಮಕ್ಕಳ ಬೆಂಬಲ ದೊರೆಯಿತು. ಬಡ ವಿದ್ಯಾರ್ಥಿಗಳ ಕಡಿತದ ಸೂಚನೆಗಳೆಲ್ಲವೂ ಬಿದ್ದುಹೋದವು. ಕಡೆಗೆ ಹರ್ಷೋದ್ಗಾರಗಳಿಂದ ದುಂದುಗಾರಿಕೆಯ ಗೊತ್ತುವಳಿ ಬಹುತದಿಂದ ಸ್ವೀಕರಿಸಲ್ಪಟ್ಟಿತು. ಎಲ್ಲರ ಖರ್ಚನ್ನೂ ಬಡ ಹುಡುಗರೇ ಭರಿಸಬೇಕೆಂಬ ಗೊತ್ತುವಳಿ ಬಂದಿದ್ದರೆ ಅದನ್ನೂ ಸ್ವೀಕರಿಸುವಷ್ಟು ಬಹುಮತ ಅತ್ತ ಇದ್ದಿತು. ಪ್ರಜಾಪ್ರಭುತ್ವದ ರುಚಿಯನ್ನು ಸವಿದ ಉಮೇಶ ಕೂಡಲೆ ಕಾರ್ಯದರ್ಶಿಯ ಕೆಲಸಕ್ಕೆ ಕೈಮುಗಿದು ರಾಜಿನಾಮೆ ಸಲ್ಲಿಸಿಬಿಟ್ಟಿದ್ದನು.

ತಲೆ ಇಲ್ಲದವರ ತಲೆ ಎಣಿಸುವದಕ್ಕೆ ಪ್ರಜಾಪ್ರಭುತ್ವವೆಂಬ ಹೆಸರಾದರೂ ಏಕೆ? ಅಕ್ಷರವರಿಯದ ಹೆಡ್ಡರು ಎತ್ತು, ಕೋಳಿ, ಕತ್ತೆ, ಕುರಿ, ಗಣೇಶ ಮುಂತಾದ ಚಿತ್ರಗಳಿಗೆ ಮತ ಕೊಡಲು ಮುಂದೆ ಬಂದಿದ್ದಾರೆ. ನಿರಕ್ಷರಿ ಮತದಾರರನ್ನು ಕುರಿಯ ಮಂದೆಯಂತೆ ತರುಬಿ ನೆರೆಸಿದ ಜಾತ್ರೆ ಚುನಾವಣೆ! ತಮ್ಮ ಮತಗಳನ್ನು ಯಾರಿಗೆ ಕೊಡಬೇಕೆಂಬುದು, ಏಕೆ ಕೊಡಬೇಕೆಂಬುದೂ ತಿಳಿಯದು ಅವರಿಗೆ. ಮತವೆಂದರೇನೆಂಬುದಂತೂ ಮೊದಲೇ ತಿಳಿಯದು. ಇಂತಹ ಮತದಾರರಿಂದ ಯಾವ ಬಣ್ಣದ ಪೆಟ್ಟಿಗೆ ತುಂಬಿದರೇನು? ನೂರಕ್ಕೆ ತೊಂಬತ್ತಾದರೂ ಸುಶಿಕ್ಷಿತರಿದ್ದೆಡೆ ಅತ್ಯವಶ್ಯವಾದ ಪ್ರಜಾಪ್ರಭುತ್ವ ಹತ್ತಕ್ಕೆ ತೊಂಬತ್ತು ಅಶಿಕ್ಷಿತರಿದ್ದೆಡೆ ಹಾನಿಕರವಲ್ಲದೆ ಮತ್ತೇನು? ಪೋಲಿಂಗ್ ಅಧಿಕಾರಿಗಳ ಮುಂದೆ ನಿಂತು ಒಬ್ಬ ಮತದಾರನಂತೂ ಹೋ ಎಂದು ಅತ್ತೇಬಿಟ್ಟ, ಕೈ ಬಿಡಿ ಎಂದು ಕೇಳಿಕೊಂಡು ಕಾಲಿಗೆ ಬಿದ್ದುಬಿಟ್ಟನು. ನಿರಪರಾಧಿಯಾದ ತನ್ನನ್ನು ಅನ್ಯಾಯವಾಗಿ ಎಳೆದು ತಂದಿದ್ದಾರೆಂದು ಅವನ ದೂರು. ಬಿಟ್ಟ ಕೂಡಲೆ ಬದುಕಿದೆನೆಂದು ಹಾರಿ ಓಟಬಿಟ್ಟ ಆ ಮತದಾರ. ಉಮೇಶ ನೋಡುತ್ತ ನಿಂತಿರುವಾಗಲೇ ಮತದಾನದ ಇನ್ನೊಂದು ಉತ್ತಮ ಮಾದರಿ ದೊರೆಯಿತು. ಯಲ್ಲವ್ವನ ಜಾತ್ರೆಗೆ ಹೊರಟಂತೆ ಕಂಡ ಹೊಸ ಸೀರೆಯುಟ್ಟ ಸ್ತ್ರೀ ಒಬ್ಬಳು ಬಿಳೀ ಮೀಸೆಯ ಮುದುಕನೊಟ್ಟಿಗೆ ಕುದುರೆಗಾಡಿಯಿಂದಿದಳು.

ಬಾಗಿಲಲ್ಲಿ ನಿಲ್ಲಿಸಿ ಮುದುಕ ಗಂಟೆಹೊತ್ತು ಅವಳಿಗೆ ಉಪನ್ಯಾಸ ಮಾಡಿದನು. ತಿಳಿಯಿತೆಂದು ತಲೆಯಾಡಿಸಿ ಒಳಹೊರಟ ಸ್ತ್ರೀ ಪೆಟ್ಟಿಗೆಯ ಮುಂದೆ ನಿಂತು ಗಟ್ಟಿಯಾಗಿ ಕೂಗಿಕೊಂಡಳು "ಎರಡು ಅದಾವಲ್ಲ ಮಾವಾ ಪೆಟಿಗಿ" ಎಂದು. ನಿಂತವರೆಲ್ಲರೂ ಖೊಳ್ಳೆಂದು ನಕ್ಕರು. ಉಮೇಶನಿಗೆ ಮಾತ್ರ ಅಳು ವಂತಾಯಿತು.

ಸಾಲದುದಕ್ಕೆ ಹಣಕ್ಕೆ ಮತಗಳನ್ನು ಮಾರುವವರು ಹಲವರು. ಹಟಕ್ಕೆ ಮತಗಳನ್ನು ಬೀರುವವರು ಕೆಲವರು. ತಮ್ಮ ರಾಷ್ಟ್ರದ ಉದ್ಧಾರವನ್ನು ಕೈಲಿ ಹಿಡಿದು ಕೈಯಲ್ಲೇನಿದೆ ಎನ್ನುವುದನ್ನೇ ಅರಿಯದೆ, ಮಾಣಿಕ್ಯವನ್ನು ಹಿಡಿದ ಮಂಗನಂತೆ ಜಿಗಿಯುತ್ತಿದ್ದ ಮತದಾರರನ್ನು ಕಂಡು ಉಮೇಶನಿಗೆ ನಗು ಬಂದಿತು, ಅಳು ಬಂದಿತು. ಚುನಾವಣೆಯೊಂದು ಮಾರೆಮ್ಮನ ಜಾತ್ರೆ, ಆಹುತಿ ಯಾದುದು ಪ್ರಜಾಪ್ರಭುತ್ವದ ತಲೆ!

ಮಂದಾಳಿಗೊಂದು ಮುಂದಾಳು. ಎಲ್ಲ ಹುರಿಯಾಳುಗಳೂ ಹಿರಿ ಯಾಳುಗಳೇ. ಮತದಾರರು ಹೊಟ್ಟೆಗಿಲ್ಲದವರು, ಇಲ್ಲವೆ ತಲೆಯಿಲ್ಲದವರು. ಹೊಟ್ಟೆಗಿಲ್ಲದವನಿಗೆ ಹಣ ಬೇಕು, ತಲೆ ಇಲ್ಲದವನಿಗೆ ಕೂಗು ಚೀರಾಟ ಅಬ್ಬರ ಬೇಕು. ಎಲ್ಲಕ್ಕೂ ಹೆಚ್ಚು ಜಾತಿಪದ್ಧತಿಯ ದುರುಪಯೋಗ. ವರ್ಣಾಶ್ರಮ ಧರ್ಮದ ವ್ಯಭಿಚಾರ. ಎಲ್ಲಿ ನೋಡಿದರಲ್ಲಿ ಬ್ರಾಹ್ಮಣ ಬ್ರಾಹ್ಮಣೇತರನೆಂಬ ಕೂಗು. ಹಿಂದೂ ಮುಸ್ಲಿಮರೆಂಬ ಗುಡುಗು. ಮತ್ಸರ, ಮುಷ್ಕರ, ದ್ವೇಷ, ಅಸೂಯೆ! ಜಾತಿಪದ್ಧತಿ ಜನ್ಮತಾಳಿದುದು ಕೇವಲ ಚುನಾವಣೆಗಳಿ ಗಾಗಿಯೇ ಎಂಬಂತೆ ತೋರಿತು. ಈರ್ವರು ಬೇರೆ ಬೇರೆ ಜಾತಿಯವರಾದ ಕಾರಣ ಜನ್ಮಶತ್ರುಗಳಾಗಿ ಬಿಟ್ಟರೆ? ಬ್ರಾಹ್ಮಣನೆಂದ-ಮಾತ್ರಕ್ಕೆ ಬ್ರಾಹ್ಮ ಣೇತರನೇಕೆ ಅವನ ಮೇಲೆ ವಿಷ ಕಾರಬೇಕೊ ಉಮೇಶನಿಗೆ ಹೊಳೆಯ ದಾಯಿತು. ಓರ್ವ ಬ್ರಾಹ್ಮಣ ಬೇಡಾದವನು ಆಗಿರಬಹುದು. ಇಡೀ ಬ್ರಾಹ್ಮಣ ಜನಾಂಗವೇ ಕದೇಕೆ ಬೇಡಾಗಬೇಕು? ವಿವೇಚನಾಶಕ್ತಿ ಭಸ್ಮೀಭೂತವಾದ ಜನಜಂಗುಳಿ ಸರ್ವೇ ಜನಾಃ ಸುಖಿನೋ ಭವಂತು ಎಂಬುದನ್ನು ಮರೆಯಿತು. ಎದುರು ಮನೆಯ ತಿಮ್ಮ ಎಂದು ಸತ್ತಾನು ಎಂದು ದಾರಿ ನೋಡಿತು. ಬ್ರಾಹ್ಮಣ ಸ್ತ್ರೀಯರೂ ಹೊಲಗಳಲ್ಲಿ ಕಳೆ ತೆಗೆಯಲು ಕೂಲಿ ಹೋಗುವದನ್ನು ಎಂದು ಕಂಡೇನು ಎಂಬ ಉದ್ಗಾರವನ್ನು ಬ್ರಾಹ್ಮಣೇ

ತರ ಮುಖಂಡ ಏಕೆ ತೆಗೆಯಬೇಕು ? ತನ್ನ ಸುಖದಕಿಂತಲೂ ಇತರರ ದುಃಖವೇ ಹೆಚ್ಚು ಹಿತವೆನಿಸಬೇಕೇ ? ಇಂದು ಆ ಬ್ರಾಹ್ಮಣನ ಬ್ರಾಹ್ಮಣಿಕೆ ಯಾವರೂ ಎಷ್ಟಿದೆ ? ಶತಮಾನಗಳಿಂದ ಅಜ್ಞರಿಗೆ ದಾರಿ ತೋರುತ್ತ ಬಂದ ಬ್ರಾಹ್ಮಣ ಇಂದು ತಾನೇ ದಾರಿ ಕಾಣದೆ ಹುಡುಕಾಡುತ್ತಿದ್ದಾನೆ. ಹಿರಿಯಣ್ಣನಾಗಿ ಕರದೀಪ ಹಿಡಿದು ಸರ್ವರ ಹಿತಕ್ಕಾಗಿ ತಪೋಬಲವನ್ನು ಬೆಳೆಸಿದ ಅಂದಿನ ಆ ಬ್ರಾಹ್ಮಣನೆಲ್ಲಿ ? ಬ್ರಾಹ್ಮಣನೆಂದರೆ ಬ್ರಹ್ಮಜ್ಞಾನಿ ಎಂಬ ಮಾತು ಯಾವ ಬ್ರಾಹ್ಮಣನಿಗೆ ನೆನಪಿದೆ ? ಬ್ರಾಹ್ಮಣನ ಬ್ರಾಹ್ಮಣಿಕೆ ಕಳೆದಿದೆ, ಆದರೆ ಉಳಿದಿರುವದಾದರೂ ಏನು ? ನತ್ತು ಕಳೆದು ತೂತು ಉಳಿದೆ. ಇದೇ ಅವನ ಹೆಮ್ಮೆಗಾಗಿ ಉಳಿದ ಇಂದಿನ ಸರ್ವಸ್ವ. ಆಚರಣೆಯಲ್ಲಿಲ್ಲದ ಬ್ರಾಹ್ಮಣಿಕೆ ಮತ್ತೆಲ್ಲಿ ಉಳಿದಿದೆ ? ಹುಟ್ಟಿನೊಂದಿಗೆ ಬಂದು, ಜನಿವಾರದ ಕಟ್ಟಿನಿಂದ ಜುಟ್ಟಿನಲ್ಲಿ ಜೀವ ಹಿಡಿದು, ಸಾವಿನೊಂದಿಗೆ ಸುಡುತ್ತಿದೆ. ಬದುಕಿನಲ್ಲಿಲ್ಲ, ಬಾಳಿನಲ್ಲಿಲ್ಲ, ಮನೋವೃತ್ತಿಯಲ್ಲಿ ಮೊದಲೇ ಇಲ್ಲ. ವೃತ್ತಿಯಲ್ಲಿ ಉಳಿಯಲು ಸಾಧ್ಯವೇ ಇಲ್ಲ. ಮಧ್ವಾಚಾರಿಯೆಂಬ ಉತ್ತಮ ಬ್ರಾಹ್ಮಣ ವಂಶಜ ಇಂದು ಸೆರೆ ಸೇಂದಿ ಅಂಗಡಿಯ ಗುತ್ತೆದಾರ. ಚರ್ಮದ ಕಾರಖಾನೆಯಲ್ಲಿ ಕಾರಕೂನ ಶಂಕರಭಟ್ಟ. ರಾಮಸ್ವಾಮಿ ಎಲುವಿನ ಫ್ಯಾಕ್ಟರಿಯಲ್ಲಿ ಮ್ಯಾನೇಜರ. ಹನ್ನೆರಡು ಜವಳಿ ಅಂಗಡಿಗಳು, ಎಂಟು ಕ್ಷೌರದ ಸಲೂನುಗಳು, ಮೂರು ಮಾಂಸಭಕ್ಷಕರ ಊಟದ ಹೋಟೆಲುಗಳು, ಏಳು ಅಗಸರ ಲಾಂಡ್ರಿಗಳು, ಒಂಬತ್ತು ವೇಶ್ಯಾ ಗೃಹಗಳು, ಐದು ತುಪಾಕಿ ಗುಂಡಿನ ಡಿಪೋಗಳು, ಒಂದು ಮುಸಲರ ಮಸೀದಿಯೂ ಉಳ್ಳ ಬಳ್ಳಾರಿಯ ಒಂದು ಬೀದಿ ಈಗಲೂ ಹಳೆಯ ಹೆಸರಾದ 'ಬ್ರಾಹ್ಮಣ ಬೀದಿ' ಎಂದು ಕರೆಸಿಗೊಂಡಂತಿದೆ ಇಂದು ಬ್ರಾಹ್ಮಣ ಸಮಾಜ ಎಂದು ನಗು ಬಂದಿತು ಉಮೇಶನಿಗೆ. ಗುಡ್ಡಗಾಡಿನಲ್ಲಿ ಬಾಳಿ ಗಡ್ಡ ಮಿಸೆ ಹೊತ್ತು ಶುಷ್ಕ ಪತ್ರಗಳನ್ನು ತಿಂದು ಮೂಗು ಹಿಡಿದು ಕೂಡುವವನೇ ಬ್ರಾಹ್ಮಣನೆಂಬ ಹಿರಿಹೆಡ್ಡತನ ಇಂದು ಸಲ್ಲದು. ಅಂದಿನಂತೆ ಇಂದು ಮೂಗು ಹಿಡಿದು ಕುಳಿತರೆ ಉಸಿರಾಡದು. ಉಸಿರಾಡುವದೆಂಬ ವಿಶ್ವಾಸವಂತೂ ಯಾರಿಗೂ ಇದ್ದಂತಿಲ್ಲ. ಬ್ರಾಹ್ಮಣಿಕೆಯನ್ನು ಬತ್ತಲೆ ಮಾಡಿದರೆ ಏನಿದೆ ಇಂದು ? ಯಾವುದರಲ್ಲಿ ಮಾತ್ರ ಏನಿದೆ ಹಾಗಾದರೆ ? ಟೀಕೆಗೆ ಬ್ರಾಹ್ಮಣಿಕೆ ಮಾತ್ರ ಏಕೆ ತುತ್ತಾಗ

ಬೇಕು ? ಪ್ರಾಣಿಹಿಂಸೆಯ ಭಯದಿಂದ ಅಂದು ದೀಪ ಹಚ್ಚದ ಜೈನ ಇಂದು 'ಬೋವ್ರಿಲ' ಮುಂತಾದ ಗೋಮಾಂಸದ ವ್ಯಾಪಾರದಲ್ಲಿ ಹಣ ವನ್ನು ಗಳಿಸುತ್ತಿದ್ದಾನೆ. ಕುರಾನಿನ ದೃಷ್ಟಿಯಲ್ಲಿ ಅತಿ ಹೇಯವಾದ ಬಡ್ಡಿ ಗಾಗಿ ಅನೇಕ ಮುಸ್ಲಿಮರು ಸಾಲಗಾರರನ್ನು ಸುಲಿಯುತ್ತಿದ್ದಾರೆ. ಅಂತರಂಗ ಬಹಿರಂಗ ಶುದ್ಧಿಗಾಗಿ ಹುಸಿಯನಾಡಲು ಅಂಜಿದವನು ಇಂದು ನ್ಯಾಯ ಸ್ಥಾನದಲ್ಲಿ ಸುಳ್ಳು ಸಾಕ್ಷಿ ಹೇಳಿ ಹಣ ಸಂಪಾದನೆ ಮಾಡುತ್ತಿದ್ದಾನೆ. ಹದಿ ಬದಿಯುವರನ್ನು ಪ್ರೇಮಿಸಲು ಬೈಬಲಿನಿಂದ ಕಲಿತವನು ಹದಿಬದಿ ದೇಶ ಗಳನ್ನು ಬೂದಿ ಮಾಡುತ್ತಿದ್ದಾನೆ. ಎಲ್ಲರಿಗೂ ವ್ಯಾಪಾರ ಬೇಕು, ಉದ್ಯೋಗ ಬೇಕು. ಬಡ್ಡಿ ಬಾಡಿಗೆ ಲಾಭಗಳಿಗೆ ಕೈಯೊಡ್ಡಬೇಕು. ಏಕೆ? ಇಂದು ಜೀವನದ ಉಸಿರು ಹಣ! ಸಿರಿವಂತನ ಸಿರಿಯನ್ನೂ ದರಿದ್ರನ ದಾರಿದ್ರ್ಯವನ್ನೂ ಮುಗಿಲ ಆ ಬದಿವರೆಗೂ ಬೆಳೆಸಲು ಬೆಳೆದಿವೆ ಅತ್ಯುತ್ತಮವಾದ ಹಳೆ ಹೊಸ ಯೋಜನೆಗಳು, ವ್ಯಾಪಾರ ಮತ್ತು ವಿವಿಧೋದ್ಯಮಗಳು. ದುಡಿವ ಬಡವನ ಬೆವರಿನಿಂದ ದುಂಡಾದ ಸಿರಿವಂತನ ಹಣವನ್ನು ಕಾಯ್ದುಕೊಡಲು ಬೇಕಾ ದಷ್ಟು ಕಾಯಿದೆ ಕಾನೂನುಗಳು, ಸೈನ್ಯ ಸಿಬ್ಬಂದಿಗಳು ಸಿದ್ಧವಾಗಿವೆ. ಹಣದ ಚೀಲದಂತಿರುವ ಹಣವಂತನಿಗೆ ತಲೆನೋವು ಸಹ ಬಾರದಂತೆ ನೋಡಿ ಕೊಳ್ಳಲು ವೈದ್ಯರನೇಕರು ರಸ್ತೆ ತುಂಬ ಅಂಗಡಿ ತೆರೆದಿದ್ದಾರೆ. ಅವನ ಅನಂತರವೂ ಅವನ ಹೆಂಡಿರು ಮಕ್ಕಳನ್ನು ಕಾಪಾಡುವ ಅಭಯ ಹಸ್ತವನ್ನು ಕೊಡುತ್ತಿವೆ ವಿಮಾ ಕಂಪನಿಗಳು. ವಿಶಿಷ್ಟ ಸಿರಿವಂತರ ಮಕ್ಕಳಿಗೆ ಡಿಗ್ರಿಗಳನ್ನು ಮಾರಲು ಬಾಗಿಲು ತೆರೆದಿಟ್ಟಿವೆ ವಿಶ್ವವಿದ್ಯಾಲಯಗಳು. ಬಡವನನ್ನು ಇಲ್ಲಿ ಬರಗೊಡುವದಿಲ್ಲವೆಂದು ಇದರ ಅರ್ಥವಲ್ಲ. ಅನ್ನ ವಸ್ತ್ರ ಗುಡಿಸಲುಗಳಿಗಾಗಿ ಇಡೀ ಜೀವನವೇ ಒಂದು ಹೋರಾಟವಾದ ಹಣಹೇಡಿಗೆ ಸರ್ವರಿಗೆಂದಿಟ್ಟ ಈ ಅನುಕೂಲತೆಗಳು ದೊರೆವುದಾದರೂ ಹೇಗೆ? ಕುಕಲ್ಪಿತವಾದ ಆರ್ಥಿಕ ದುರ್ವ್ಯವಸ್ಥೆಯಿಂದ ನಿರ್ಮಿಸಲ್ಪಟ್ಟ ಒಂದು ಚಕ್ರಬಿಮ್ಮನ ಕೋಟೆ ಇಂದು ನಾವು ಬಾಳುತ್ತಿರುವ ಸಮಾಜ. ನಾಣ್ಯಪದ್ಧತಿಯ ಉಬ್ಬರವೂ ಸಾಕಷ್ಟು ಹಾನಿ ಮಾಡಿದೆ. ವೃತ್ತಿಗಳೆಲ್ಲವೂ ಒಂದೇ ಮಟ್ಟಕ್ಕೆ ಇಳಿದಿವೆ. ಎಲ್ಲವೂ ಹಣದ ಸಲುವಾಗಿ ಹೂಡಿದ ಹೂಟಗಳು. ಕೈ ಕೆಲಸದ ಮೇಲೆ, ಕಣ್ಣು ಹಣದ ಮೇಲೆ. ಪ್ರಾಣಿಯನ್ನು ಕೊಂದು ಮಾಂಸವನ್ನು ಮಾರುವ ಕಟುಕ

ನಿಗೂ. ಸಾಯುವ ಪ್ರಾಣಿಯನ್ನು ಬದುಕಿಸಲು ಇಟ್ಟ ಔಷಧಿಯನ್ನು ಮಾರುವ ಡಾಕ್ಟರನಿಗೂ ಒಂದೇ ಗುರಿ. ಸಟೆಯನ್ನು ಸಾಧಿಸಿ ನ್ಯಾಯಕ್ಕೆ ಅಪಜಯ ತರುವ ವಕೀಲನಿಗೂ ನಿಜವನ್ನು ಪರಿಶೀಲಿಸಿ ನ್ಯಾಯವನ್ನು ವಿಧಿಸುವ ನ್ಯಾಯಾಧೀಶನಿಗೂ ಅದೇ ಗುರಿ. ಅಡವಿಯಲ್ಲಿ ತಿರುಗಿ ವನಗಳನ್ನು ಕಾಯುವವನಿಗೂ ಕುರ್ಚಿಯಲ್ಲಿ ಕುಳಿತು ಮಕ್ಕಳನ್ನು ಕಾಯುವವನಿಗೂ ಒಂದೇ ಗುರಿ. ಕಾಮುಕರಿಗಾಗಿ ದೇಹವನ್ನು ವಿಕ್ರಯಿಸುವ ವೇಶ್ಯೆಗೂ ದೇವಾಲಯಕ್ಕೆ ಬರುವ ಭಕ್ತರಿಗಾಗಿ ಪ್ರಸಾದವನ್ನು ವಿಕ್ರಯಿಸುವ ಪೂಜಾರಿಗೂ ಒಂದೇ ಗುರಿ. ತ್ಯಾಗದ ಸೋಗು ಹಾಕಿ ದುಡಿಯದೆ ಮಾತನಾಡುವವನಿಗೂ ಬಾಗಿದ ಬೆನ್ನು ಹೊತ್ತು ಮಾತನಾಡದೆ ದುಡಿಯುವವನಿಗೂ ಒಂದೇ ಗುರಿ. ರೀತಿ ಬೇರೆ ಇದ್ದರೂ ನೀತಿ ಮಾತ್ರ ಒಂದೆ. ತಲೆಕೆಳಗಾದ ಈ ಅರ್ಥಶಾಸ್ತ್ರ ಪ್ರಯೋಗಕ್ಕೆಲ್ಲ ಒಂದೇ ಕಾರಣ—ವೈಯಕ್ತಿಕ ಆಸ್ತಿಪದ್ಧತಿ. ಮಕ್ಕಳು ಮರಿಗಳ ತೊಂದರೆ ತಾಪತ್ರಯಗಳಿಲ್ಲದ ಅವಿವಾಹಿತ ಮೇಲಧಿಕಾರಿಗೆ ನಾಲ್ಕಂಕೆಯ ವೇತನ. ಅವನೆಲ್ಲ ಖರ್ಚುಗಳನ್ನು ವಹಿಸಲು ನಾ ಮುಂದೆ ನೀ ಮುಂದೆಂದು ಪೋಟಿ ಹೂಡಿದೆ ಅಲ್ಪ ವೇತನದ ದಾಸಮಂಡಳಿ. ಮೂವತ್ತು ದಿನಗಳು ದುಡಿದು, ಮೂವತ್ತು ರೂಪಾಯಿಗಳನ್ನು ಪಡೆದು, ಆದಾಯವ್ಯಯಗಳ ತುದಿಗಳನ್ನು ಮುಟ್ಟಿಸಲು ಮಣಿದು ಹೆಣಗಾಡಿ ತಿಪ್ಪೆಯಲ್ಲಿ ತಿಪ್ಪರಲಾಗ ಹಾಕುವವರು ಅಗಣಿತರು. ಅಸಾಮ್ಯತೆಗೂ ಅಳತೆ ಬೇಕು. ಅವಶ್ಯ ಸೌಕರ್ಯಗಳನ್ನು ಜಾಣ ದಡ್ಡರಿಗೂ ಒದಗಿಸುವ ಹೊರೆ ಸಮಾಜದ ಮೇಲಿದೆ, ಸರಕಾರದ ಮೇಲಿದೆ. ಹೆಚ್ಚು ವಿದ್ಯೆ ಕಲಿತವನಿಗೆ ಹೆಚ್ಚು ವೇತನ ಬೇಕೇ ಬೇಕೇನು? ಹೆಚ್ಚು ಸಾಲ ಕೊಟ್ಟವನು ಹೆಚ್ಚು ಬಡ್ಡಿ ಪಡೆಯುವಂತೆ, ಹೆಚ್ಚು ಮನೆಗಳನ್ನು ಕಟ್ಟಿದವನು ಹೆಚ್ಚು ಬಾಡಿಗೆ ಗಿಟ್ಟಿಸುವಂತೆ, ಹೆಚ್ಚು ವ್ಯಾಪಾರ ಮಾಡುವವನು ಹೆಚ್ಚು ಲಾಭಕ್ಕೆ ಕೈಯೊಡ್ಡುವಂತೆ ಹೆಚ್ಚು ವಿದ್ಯೆ ಕಲಿತವನೂ ಹೆಚ್ಚಿನ ವೇತನಕ್ಕೆ ಭಾಗಿಯಾಗಬೇಕೆಂದರೆ ವಿದ್ಯೆಗೂ ವ್ಯವಹಾರದಲ್ಲಿ ಇಳಿದ ಬಂಡವಾಳಕ್ಕೂ ಭೇದವಾದರೂ ಏನು? ವ್ಯಕ್ತಿಯ ವಿದ್ಯೆ ಸಮಾಜದ ಸೊತ್ತಾಗದಿದ್ದರೆ ಅದೇ ವಿದ್ಯೆಯಿಂದಲೇ ಸಮಾಜದ ಸುಲಿಗೆಯಾದೀತು. ಶತಮಾನದ ಹಿಂದೆ ಸ್ವಪ್ನದಲ್ಲಿಯೂ ಬಾರದಾಗಿದ್ದ ಸ್ವಾತಂತ್ರ್ಯ ಇಂದು ಭಾರತದ ಬಾಗಿಲಿಗೆ ಬಂದಿದೆ.

ಅಂದು ಕನ್ನಡಿಯಲ್ಲಿಯ ಗಂಟಾಗಿದ್ದ ಸ್ವಾತಂತ್ರ್ಯ ಇಂದು ಕೈಗೆ ಸಿಕ್ಕುವ ಗಂಟಾಗಿದೆ. ಆದರೆ ಇದಕ್ಕೂ ತುಂಡಾಗುವ ಭೂತ ಬಡಿದಿದೆ. ಅಲ್ಪ ಸಂಖ್ಯಾಕರಿಗೆ ಬಹುಸಂಖ್ಯಾಕರ ಬಗ್ಗೆ ಅವಿಶ್ವಾಸ. ಅವ್ಯವಸ್ಥೆಯ ಅನುಕೂಲ ಪಡೆದು ಅನಾಯಾಸವಾಗಿ ದೊರೆವ ನಾಯಕತ್ವವನ್ನು ಹಿಡಿದು ತಲೆ ಇಲ್ಲದ ಅನುಯಾಯಿಗಳ ತಲೆಯ ಮೇಲೆ ಕೈಯಾಡಿ ತನ್ನ ಬೆನ್ನನ್ನು ತಾನೇ ಚಪ್ಪರಿಸಿ ಕೊಂಡು ಹಿರಿಹಿರಿ ಹಿಗ್ಗುವ ಹಿರಿಮೆ ಪಡೆಯುವವರಿಗೊಂದು ಸುವರ್ಣ ಸಂದರ್ಭ. ತಲೆ ಚಿಕ್ಕದಿದ್ದರೂ ಬಾಯಿ ಮಾತ್ರ ಬೆಳೆದಿದೆ ಮುಖಂಡರಿಗೆ. ಒಂದು ಜನಾಂಗದ ಆಹುತಿಯಾದರೂ ತಮ್ಮ ಮುಖಂಡತ್ವಕ್ಕೆ ಆರತಿ ಆಗಲೇ ಬೇಕು. ಉಮೇಶನ ತಲೆ ಕಾದು ಕೆಂಡವಾಯಿತು. ನಾನಾ ಬಗೆಯ ವಿಚಾರ ಗಳು ತಲೆಯಲ್ಲಿ ಗುದುಮುರಿಗೆ ಹಾಕಹತ್ತಿವೆ. ಅವನ ತಲೆಯೊಂದು ಯುದ್ಧರಂಗ. ವಿಚಾರಗಳ ಪಾಣೀಪತ್ತು. ನಿರಂಕುಶ ಸರ್ವಾಧಿಕಾರತ್ವವನ್ನು ತೆಗಳಿದ ಗಳಿಗೆಯಲ್ಲಿಯೆ ಕಣ್ಮುಂದೆ ಬರುವದು ಪ್ರಜಾಪ್ರಭುತ್ವದ ಹೆಣ. ಕಾಗದದ ವಜ್ಜೆಗೆ ಕೈಚೀಲದ ಹಿಡಿಕೆ ಹರಿದು ಚೀಲ ನೆಲಕ್ಕೆ ದುಪ್ಪೆಂದು ಬಿದ್ದಿತು. ಉಮೇಶನಿಗೆ ಆಗ ಎಚ್ಚರವಾಯಿತು. ಚೀಲವನ್ನು ಮೇಲಕ್ಕೆ ಎತ್ತಿದ, ತನ್ನ ದಾಸ್ಯದ ಅರಿವೂ ಆಯಿತು.

ಜನಸಂದಣಿ ಸರಿದು ತಿಕ್ಕಾಟ ಕಡಿಮೆಯಾಯಿತು. ಉಮೇಶನಿಗೆ ಹಾದಿ ದೊರೆಯಿತು. ಮತ ಪ್ರತಿಯೊಬ್ಬನ ಹಕ್ಕು. ಮತದಾನ ಮಾಡಲು ಮುಂದೆ ಸಾಗಿದ. ತಲೆಯಲ್ಲಿ ಪ್ರಶ್ನೆಚಿನ್ಹೆಗಳು ಗುಂಪುಗುಂಪಾಗಿ ಎದ್ದವು. ತನ್ನ ಮತವನ್ನು ಯಾರಿಗೆ ಕೊಡುವದು ? ಯಾರು ಅರ್ಹರು ? ಇಬ್ಬರು ಉಮೇದವಾರರೂ ಪ್ರಜಾಹಿತೈಷಿಗಳೇ. ಪಾಪ ! ಪ್ರಜರ ಹಿತಕ್ಕಾಗಿ ಅಲ್ಲವೇ ಈರ್ವರೂ ಕಂಕಣ ತೊಟ್ಟಿರುವದು. ಆದರೆ ತಮ್ಮಿಂದಲೇ ಈ ಪ್ರಜಾಹಿತವಾಗಲೆಂದು ಅವರ ಹಟ—ಅಷ್ಟೆ ! ಪ್ರಜರ ಹಿತ ಇಂದು ಯಾರಿಗೆ ಇಲ್ಲ ? ಪ್ರಜರ ವಿನಃ ಬೇರೆಲ್ಲರಿಗೂ ಇದೆ. ಮೂರು ಶತಮಾನಗಳ ಹಿಂದೆ ಕಡಲಾಚೆಯಿಂದ ಬಂದು ಹಿಂದೂಸ್ಥಾನವನ್ನು ಇಷ್ಟು ದಿನಗಳು ಕಪಿ ಮುಷ್ಟಿಯಲ್ಲಿ ಹಿಡಿದುದೂ ಪ್ರಜಾಹಿತಕ್ಕಾಗಿಯೇ. ಇಂದು ಕಡಿವ ಹುಳುವನ್ನು ಎಸೆದಂತೆ ಅವಸರದಲ್ಲಿ ಬಿಸುಟಿ ಓಡಬೇಕೆನ್ನುತ್ತಿರುವದೂ ಅದೇ ಪ್ರಜಾಹಿತ ಕ್ಕಾಗಿಯೇ ! ಮುತ್ತನ್ನು ತುಂಡರಿಸಿ ತನ್ನರ್ಧವನ್ನು ತನಗೆ ಕೊಡೆಂದು

ಮುನಿದು ಹಟಮಾರಿ ತಮ್ಮ ಕುಳಿತಿರುವದೂ ಪ್ರಜಾಹಿತಕ್ಕಾಗಿಯೇ! ಮತ ಕೊಡಲು ನೆರೆದ ಜನರಲ್ಲಿ ಉಮೇದವಾರರ ಚುನಾವಣೆಯ ಘೋಷಣೆಗಳನ್ನು ಓದಿದವರೆಷ್ಟು ಮಂದಿ ಎಂಬ ಆಲೋಚನೆ ಹೊಳೆಯಿತು ಉಮೇಶನಿಗೆ. ಮತ ಕೊಡುವದು ಯಾರಿಗೆ ಎಂದು ಉಮೇಶ ಯೋಚಿಸಹತ್ತಿದನು. ತನ್ನ ಜಾತಿಯವನೇ ಆದ ಹುರಿಯಾಳಿಗೇಕೆ ಕೊಡಕೂಡದೆಂಬ ಪ್ರಶ್ನೆ ಉಮೇಶನ ತಲೆಯಲ್ಲಿ ಕಳ್ಳಹಾದಿಯಿಂದ ಒಳತೂರಿತು. ಮರುಕ್ಷಣವೇ ತನ್ನ ಕ್ಷುದ್ರತೆಗಾಗಿ ತನಗೇ ನಾಚಿಕೆಯಾಯಿತು. ಮೂರ್ಖ ಜಾತ್ಯಂಧತೆ ತನ್ನಲ್ಲಿಯೂ ಮನೆಮಾಡಲು ಬಂದುದನ್ನು ಕಂಡು ಕೋಪಾಶ್ಚರ್ಯಗಳು ತಲೆ ಎತ್ತಿದವು. ಉಮೇಶ ತಲೆ ತಗ್ಗಿಸಿದ. ನಾಡಿನ ಬಂಧವಿಮೋಚನೆಗಾಗಿ ಹೋರಾಡುತ್ತಿರುವ ಏಕಮೇವ ಸಂಸ್ಥೆಗೇ ತನ್ನ ಮತವನ್ನು ಕೊಡತಕ್ಕದ್ದೆಂದು ನಿಶ್ಚಯಿಸಿದ. ಆದರೆ ಆ ಮಹಾನುಭಾವನ ಹೆಸರು ನೆನಪಾದ ಕೂಡಲೆ ಉಮೇಶ ಜರ್‍ರೆಂದು ಜಾರಿದ. ವ್ಯಕ್ತಿತ್ವ ಬಾಧಿಸಕೂಡದು ಎಂದು ಬುದ್ಧಿಗೆ ಮನಸ್ಸು ನೀತಿ ಹೇಳಿತು. ವ್ಯಕ್ತಿಗಳಿಂದಲೇ ಅಲ್ಲವೆ ಸಂಸ್ಥೆ ಎಂದು ಬುದ್ಧಿ ವಾದ ಹೂಡಿತು. ಏನೇ ಆಗಲಿ, ದೊಡ್ಡ ಸಂಸ್ಥೆ ದೊಡ್ಡ ಸಂಸ್ಥೆಯೇ ಎಂದು ನೀತಿ ಪುಷ್ಟೀಕರಿಸಿತು. ಅಂದು ಮಠದ ಮುದ್ರೆ ಎಂದು ನಕ್ಕ ನಿನಗೆ ಇಂದು ಸಂಸ್ಥೆಯ ಮುದ್ರೆ ಮಾತ್ರ ಪೂಜ್ಯವಾಯಿತೆ ಎಂದು ಬುದ್ಧಿ ಕೆರಳಿಸಿತು. ಮುಲ್ಲಾನನ್ನು ಕೊಂದು ಅಲ್ಲಾನನ್ನು ಮೆಚ್ಚಿಸುತ್ತೇನೆ ಎನ್ನುವ ದಾರಿ ನಿನ್ನದು ಎಂದು ಮನಸ್ಸು ನಗೆಯಾಡಿತು. ನಿನ್ನಿಷ್ಟ ಎಂದು ಹೇಳಿ ಅಂಜಂಜುತ್ತ ನೀತಿ ಹಿಂದೆ ಸರಿಯಿತು. ಬುದ್ಧಿಯ ಗಂಟಲು ದೊಡ್ಡದಾಯಿತು. ಮನಸ್ಸಿನ ಮುಖ ಚಿಕ್ಕದಾಯಿತು. ಏನೂ ಅರಿಯದೆ ಮತ ಕೊಡಲು ಬಂದಿದ್ದ ನಿರಕ್ಷರ ಕುಕ್ಷಿಗಳಿಗೂ, ಎಲ್ಲವನ್ನೂ ಬಲ್ಲೆನೆಂದು ತಿಳಿದ ತನಗೂ ಏನು ಭೇದವೆಂದು ಯೋಚಿಸುತ್ತ ಅಲ್ಲಿಯೇ ನಿಂತ ಉಮೇಶ. ಕಡೆಗೊಮ್ಮೆ ಪೆಟ್ಟಿಗೆಗಳ ಬಳಿ ಹೋದ. ತನ್ನ ನಾಡಿನ ರಕ್ಷಾಬಂಧನವನ್ನು ಕೈಯಲ್ಲಿ ಹಿಡಿದು ನಿಂತ. ಪುನಃ ಅದೇ ಕುರುಕ್ಷೇತ್ರ. ಎರಡು ನಿಮಿಷಗಳಾದವು. ಕೂಗಿ ಕರೆದರು. ಧಿಡಿಲ್ ಎಂದು ಹೊರಬಂದನು. ಕಾಲು ಮನೆಯ ಹಾದಿ ಹಿಡಿಯಿತು. ತಲೆ ತನ್ನ ಹಾದಿ ನಡೆಯಿತು.

"ಯಾವನಿಗೋ ಕೊಟ್ಟೆ ನಿನ್ನ ಓಟ?" ಎಂದು ದರ್ಪದ ದನಿಯಲ್ಲಿ

ರಾವಸಾಹೇಬ ರಂಗರಾಯರು ಒಳ ಬಾಗಿಲಲ್ಲಿ ಕಾಲಿಡುತ್ತಲೇ ಕೆಣಕಿದರು. ಪ್ರಶ್ನೆಯಕಿಂತಲೂ ಅದರ ಹಿಂದಿದ್ದ ದನಿಯೇ ಹೆಚ್ಚು ಅರ್ಥಗರ್ಭಿತವಾಗಿ ದ್ದಿತು. ' ನನಗೆ ಗೊತ್ತು. ನೀನು ಆ ರಾಜದ್ರೋಹಿ ಲಂಡರಿಗೇ ಕೊಟ್ಟಿ ರುವಿ ' ಎಂಬ ಅಣಕಿನ ಮಾತು ಆ ಕೆಣಕಿದ ಪ್ರಶ್ನೆಯಲ್ಲಿ ಅಡಕವಾಗಿದ್ದಿತು. ರಾಜದತ್ತವಾಗಿ ಬಂದ ಉಪ್ಪು ರಾಯರ ರಕ್ತಕಣಗಳಲ್ಲಿ ಮನೆಮಾಡಿದ್ದಿತು. ರಂಗರಾಯರೆಂದರೆ ಸಾಕ್ಷಾತ್ ಕರ್ಣಾವತಾರವೇ ! ಅರಸ ಕೊಟ್ಟ ಉಪ್ಪು ಎಂಬ ಅಪಭ್ರಂಶದ ಕಗ್ಗತ್ತಲೆಯಲ್ಲಿ ಮುಗ್ಗರಿಸುತ್ತಿದ್ದಾಗ ಅರಸನಪ್ಪನಿಗೂ ಉಪ್ಪು ತಂದುದು ಪ್ರಜರು ಎಂಬ ಸತ್ಯದ ದಿವ್ಯಜ್ಯೋತಿ ಕಾಣುವದಾದರೂ ಹೇಗೆ ? ಮೂವತ್ತು ವರ್ಷದ ದಾಸ್ಯಜೀವನ ರಾಯರ ಮನಸ್ಸಿನ ಮೇಲೆ ಸಾಕಷ್ಟು ಪರಿಣಾಮವನ್ನುಂಟು ಮಾಡಿದ್ದಿತು. ಸಾಲದುದಕ್ಕೆ ರಾವಸಾಹೇಬ ಗಿರಿ ದಾಸ್ಯದ ಮುದ್ರೆಯನ್ನು ಕಾಸಿ ಒತ್ತಿದ್ದಿತು.

" ಯಾರಿಗೋ ಕೊಟ್ಟೆ ನಿನ್ನ ಓಟ ? " ಎಂದು ಇನ್ನೊಂದು ಬಾರಿ ಕೇಳಿ ಉಮೇಶನ ಮುಖವನ್ನು ದುರುದುರು ನೋಡಿದರು. ಉಮೇಶ ಕಿಸೆಯಲ್ಲಿ ಕೈ ಇಕ್ಕಿದ. ತನ್ನ ಮತ ತನ್ನ ಕಿಸೆಯಲ್ಲಿಯೇ ಉಳಿದಿದ್ದಿತು.

## ೭. ಚಿಕ್ಕ ಬಲೆಗೆ ದೊಡ್ಡ ಮೀನು.

ಕನಸಿನಲ್ಲಿ ಕಾಣುವ ಆದರ್ಶಕ್ಕೆ ಕೈಹಾಕುವ ಬಡಪಾಯಿ ಉಮೇಶ ಜಾಣಾಕ್ಷರಾದ ಮಲ್ಹಾರಿಭಟ್ಟರಿಗೆಲ್ಲಿಯ ಸಾಟಿ ? ತಮ್ಮನ್ನು ತಿರಸ್ಕರಿಸಿ ಹೋದನೆಂದು ಅವಮಾನಿತರಾಗಿ ರೋಷವನ್ನು ತಾಳುವ ಸ್ವಭಾವ ಅವರ ದಲ್ಲ. ಹೊಸ ಕಸಬರಿಗೆ ಹಸನಾಗಿ ಗುಡಿಸುತ್ತದೆ ಎಂದು ಮನದಲ್ಲಿ ಅಂದು ಕೊಂಡು ಮುಂದೆ ಸಾಗಿದ್ದರು. ಉಮೇಶನ ಸಾಚತನದಿಂದ ಮಲ್ಹಾರಿಭಟ್ಟ ರಿಗೆ ಸಾಮ್ರಾಜ್ಯ ಬಿದ್ದುಹೋಗಿರದಿದ್ದರೂ ಕಾಲ್ತೊಡಕಾದಂತಾಗಿ ಸಣ್ಣೊ ಬ್ಬೆಯ ಮೇಲೆ ತೊಂದರೆಯಾಗಹತ್ತಿತು. ಒಟ್ಟಾರೆ ವ್ಯವಹಾರ ಅವರಿಗೆ ಆಗಬೇಕಾದಷ್ಟು ಸುಲಲಿತವಾಗಿರಲಿಲ್ಲ. ಮುಂದೆ ಹೇಗೆ ಎಂದು ಮಲಗಿದ ಲ್ಲಿಯೇ ಒಂದು ರಾತ್ರಿ ತಲೆಯೋಡಿಸಿದರು. ಈ ಯೋಚನೆಗೆ ಒಂದು ಬಲ

ವಾದ ಕಾರಣವೂ ಇದ್ದಿತು. ಉಮೇಶನ ಕಾಗದಗಳಲ್ಲಿ ಒಂದು ಮಹತ್ವದ್ದಿದ್ದು ಹಾಗೆ ಮಾಡುವದನ್ನು ಹೀಗೆ ಮಾಡಿದರೆ ಭಟ್ಟರ ಬೊಕ್ಕಸವೇ ತುಂಬುವಂತಿದ್ದಿತು. ಜೇಟಿ ದೊಡ್ಡದು. ತುತ್ತು ಕೈಗೆ ಬಂದಿದೆ. ಆದರೆ ಕೈಬಾಯಿಗಳ ಮಧ್ಯೆ ಉಮೇಶನ ಅವಾಂತರ. ತಾನೂ ತಿನ್ನ—ಇತರರಿಗೂ ಕೊಡ ಹೆಚ್ಚಿನ ಕೈಚಳಕ ಉಮೇಶನಿಗೆ ಬಾರದಿದ್ದರೂ ನ್ಯಾಯಾನ್ಯಾಯವನ್ನು ತಿಳಿದು ಹಟಮಾರಿಯಾಗಿ ಸತ್ಯವನ್ನೇ ಸಾಧಿಸಲು ಮಾತ್ರ ಕಲಿತಿದ್ದನು. ಇವನ ಈ ಭಾನಗೇಡಿತನವೇ ಭಟ್ಟರಿಗೆ ಗಂಟಲಗಾಣವಾಗಿದ್ದಿತು. ಕೇವಲ ಅನುಭವದಿಂದಲೆ ಮಾನಸಶಾಸ್ತ್ರದ ಪಾಂಡಿತ್ಯವನ್ನು ಪಡೆದಿದ್ದ ಭಟ್ಟರು ಹೊಸದೊಂದು ಆಟವನ್ನು ಹೂಡಿದ್ದರು. ಹಾಲುಗಲ್ಲದ ಉಮೇಶನ ಮೇಲೆ ಮಲ್ಲಾರಿಭಟ್ಟರ ಮೋಹನಾಸ್ತ್ರವೇ!

ಮೈಯಲ್ಲಿ ಅಸ್ವಸ್ಥವೆಂದು ಬರೆದುಹಾಕಿ ಭಟ್ಟರು ಎರಡು ದಿನಗಳು ಊರು ಬಿಟ್ಟರು. ಇದೇನೂ ಅವರಿಗೆ ಹೊಸದಲ್ಲ. ಅನುಗಾಲವೂ ನಿಜವನ್ನೇ ಆಡಬೇಕೆಂಬ ಅಲೌಕಿಕವಾದ ಮೂರ್ಖತನದ ಹುಚ್ಚುಹಟ ಬಹುಕಾಲ ಬಾಳಿ ಬದುಕಿದ ಭಟ್ಟರ ಸೊತ್ತಲ್ಲ. ದಾಸ್ಯವೃತ್ತಿಯ ಮೂವತ್ತು ವರ್ಷಗಳಲ್ಲಿ ಸುಳ್ಳು ನಿತ್ಯದ ರೂಢಿಯಲ್ಲಿ ಬಂದು ಸಹಜವಾಗಿಯೇ ಸತ್ಯದ ವರ್ಗದಲ್ಲಿ ಸೇರಿದ್ದಿತು. ಚಿಕ್ಕ ಪುಟ್ಟ ವಿಷಯಗಳಲ್ಲಂತೂ ಸುಳ್ಳನ್ನಾಡುವದೇ ಸರಳ ಮಾರ್ಗ ಅವರಿಗೆ. ಆಸಾಮಿಯನ್ನು ಕಂಡು ಪ್ರತಿಫಲದ ಮಾತುಕತೆಗಳನ್ನು ಮುಗಿಸಿ, ಮುಂಗಡ ಹಣ ಪಡೆದು ಊರಿಗೆ ಮರಳಿದರು, ಅಭಯಹಸ್ತವನ್ನು ಕೊಟ್ಟು ಹಸರು ನೋಟೊಂದನ್ನು ಸೊಂಟಕ್ಕೆ ಸೇರಿಸಿ, ದೇವರಿದ್ದಾನೆ ಎಂದು ಕಾಣದ ದೇವರ ಮೇಲೆ ಭಾರ ಹಾಕಿ ಬಂದಿದ್ದರು. ದೇವರೂ ಇದ್ದ!

ಉಮೇಶ ಎಂದಿನಂತೆ ಕತ್ತಲಾದ ಮೇಲೆ ಮನೆಯ ಹಾದಿ ಹಿಡಿದ. ಸತ್ತ ಕಾಗದಗಳ ವಾತಾವರಣಕ್ಕೆ ಹಳಬನಾಗುತ್ತಿದ್ದ ಉಮೇಶನಿಗೆ ತನ್ನ ಆಫೀಸಿನ ಸಂಗತಿಗಳೇ ಮೇಲಿಂದ ಮೇಲೆ ತಲೆಯಲ್ಲಿ ಬರಹತ್ತಿದವು. ಬೇಡವೆಂದರೂ ಅಪ್ರಾಸಂಗಿಕವಾಗಿಯೂ ನೆನಪಾಗುತ್ತಿದ್ದವು. ಸೇವೆಯ ಹವೆ ತನಗೆ ತಿಳಿಯದೇ ಒಂಟಿಹತ್ತಿದ್ದಿತು. ಜಪವನ್ನು ಮರೆತರೂ ಜಸಿವಾರಕ್ಕೆ ಜೋಲುಬಿದ್ದಂತೆ, ಶ್ರದ್ಧೆ ಇಲ್ಲದೆ ಶ್ರಾದ್ಧ ಮಾಡಿದಂತೆ, ಬಿಡಲಾರದ ಕೆಲಸ

ವನ್ನು ಮಾಡಿದ ಉಮೇಶ. ಅರೆಮನಸ್ಸಿನಿಂದ ಒಗ್ಗದ ವೃತ್ತಿಗಳಲ್ಲಿ ಇಳಿವುದು ಆತ್ಮದ್ರೋಹವೆಂಬುದನ್ನು ಪೂರ್ಣ ಅರಿತಿದ್ದನು. ಅಂತಹನು ಸಮಾಜದ ವಂಚಕನೆಂದು ಮನಮುಟ್ಟಿ ನಂಬಿದ್ದ. ವೇತನಕ್ಕೆ ಮಾತ್ರ ಕೈಯೊಡ್ಡಿ, ಕೆಲಸಕ್ಕೆ ಮೈ ಬಾಗಿಸದೆ, ಓಜಸ್ಸನ್ನು ಹದಗೊಳಿಸಿ, ತಿಂದ ಉಪ್ಪಿಗೆ ದೇಹ ಸವೆಸದೆ ಇರುವುದು ದೇಶದ್ರೋಹಿಯ ಲಕ್ಷಣ. ಕೈಗೊಂಡ ವೃತ್ತಿಗೆ ತಾನು ಬಹು ದೊಡ್ಡವನೆಂದೆನಿಸಿದರೆ ಅಲ್ಲಿಂದ ಆ ಕ್ಷಣವೇ ಕಾಲ್ತೆಗೆವುದು ಸಂಪನ್ನನ ಮೊದಲ ಕರ್ತವ್ಯ. ಮೇವಿನಲ್ಲಿ ಮಲಗಿದ ನಾಯಿಯಂತೆ ತಿನ್ನಲರ್ಹನಾದ ಬೇರೊಬ್ಬನ ಬಾಯಿಗೆ ಹುಣ್ಣಾಗುವದು ಆದಾವ ನ್ಯಾಯ ಎಂದು ತನ್ನಲ್ಲಿಯೇ ಟೀಕಿಸುತ್ತ ನಡೆದಿದ್ದನು, ನಡು ರಸ್ತೆಯಲ್ಲಿ.

"ನೀವೇನಾ ಉಮೇಶರಾಯರು ?" ಎಂದೊಬ್ಬ ಎಳೆ ವಯಸ್ಸಿನ ಹುಡುಗ ಬೈಸಿಕಲ್ಲು ಹಿಡಿದು ಹತ್ತಿರ ಬಂದ. ಅದೆಷ್ಟು ದೊಡ್ಡ ತಲೆ ಆ ಚಿಕ್ಕ ವಯಸ್ಸಿಗೆ! ಪುಡಿಗೂದಲಿನ ಚೆಂದಾದ ಕ್ರಾಪು. ನಟ್ಟ ನಡುವೆ ಬೈತಲು, ನಿಡಿದಾದ ಮೂಗು. ಕೆಂದುಟಿಗಳಿಂದ ತೆರದ ಚಿಕ್ಕ ಬಾಯಿ. ಮಾತನಾಡುವಾಗ ಹೊರಕಂಡ ಆ ದಂತಪಙ್ತಿ. ಗಲ್ಲದ ಮೇಲೆ ಮೂಡಿದ ಚಿಕ್ಕೆ ಮನಮೋಹಕವಾಗಿದ್ದವು. ಪುಟ್ಟ ಕಾಲನ್ನು ಒಳ ತೂರಿ ಬೈಸಿಕಲ್ಲನ್ನು ತುಳಿಯುತ್ತ ಆ ಬಾಲಕ ಬರುವುದನ್ನು ಉಮೇಶ ದೂರದಿಂದಲೇ ನೋಡಿದ್ದ. ಸನಿಯ ಬಂದಾಗ ಅವನನ್ನು ನೋಡಿದ ಮೇಲೆ ಎನಿಸಿತು ಉಮೇಶನಿಗೆ 'ಇವನು ಎಂತಹ ಹೆಣ್ಣಾಗುತ್ತಿದ್ದ' ಎಂದು. ಈಗೇನು ಸೃಷ್ಟಿಯಲ್ಲಿ ರೂಪುಳ್ಳ ಹೆಣ್ಣಿಗೆ ಕೊರತೆಯೇ ಎಂದಂದುಕೊಂಡು ಹುಸಿನಗು ನಕ್ಕ. ಕೊರತೆಯೇ ತನ್ನ ಪಾಲಿಗೆ. ಸೌಂದರ್ಯಕ್ಕಂತೂ ನಾಗಮ್ಮನ ಹಕ್ಕಿರಲಿಲ್ಲ. ಅಪ್ಪ ಕೊಡಿಸಿದ ನೌಕರಿಯಂತೆ ಆವಳೂ ಅಪ್ಪ ಮಾಡಿಸಿದ ಹೆಂಡತಿ. ಉಮೇಶ ಮಾತನಾಡದೇ ಮುಖ ನೋಡುತ್ತ ನಿಂತಿರುವದನ್ನು ಕಂಡು ಆ ಹುಡುಗ ಅನುಮಾನಿಸುತ್ತ ಪುನಃ ಕೇಳಿದ :

"ತಾವೇ ಅಲ್ಲವೇನ್ರಿ ಉಮೇಶರಾಯರೆಂದರೆ ?" ಎಂದು ಕಿಸೆಯಲ್ಲಿ ಕೈ ಇಕ್ಕಿದ.

"ನಾನೇ ಉಮೇಶ. ನೀನು ಯಾರಪಾ ?" ಎಂದು ಧೈರ್ಯ ಕೊಡುವ ದನಿಯಲ್ಲಿ ನುಡಿದು ಹತ್ತಿರ ಬಂದ.

" ನಿಮ್ಮ ಪತ್ರ " ಎಂದು ಬಾಲಕ ಕಿಸೆಯಲ್ಲಿಂದ ಕೈ ತೆಗೆದ. ಪತ್ರವನ್ನು ಕೈಯಲ್ಲಿ ತೆಗೆದುಕೊಂಡು ಉಮೇಶ ಓದಿದ. ' ಕಾಯಿಲೆ ಹೆಚ್ಚಾಗಿದೆ. ಕೂಡಲೆ ಬಾ ' ಎಂದಿಷ್ಟೆ ಇದ್ದಿತು ಅದರಲ್ಲಿ.

" ಅವರಿಗೇನಾಗಿದಂತಪ್ಪಾ ? "

" ಜ್ವರ " ಕಣ್ಣು ತಪ್ಪಿಸಿ ಬೇರೆ ಎಡೆ ನೋಡಿದ.

" ಈಗ ಹೇಗಿದೆ ? "

" ಇನ್ನೂ ಹಾಗೆಯೇ ಇದೆ. "

" ಸರಿ, ನಾನು ಹೋಗುತ್ತೇನೆ. ನೀನು ನಡೆ. "

" ಅವರು ತಮ್ಮ ಮನೆಯಲ್ಲಿಲ್ಲ. "

" ಹಾಗಾದರೆ ? "

" ನಮ್ಮ ಮನೆಯಲ್ಲಿ. "

" ನಿಮ್ಮ ಮನೆ ? "

" ಹೂವಿನ ಬೀದಿ. "

" ಹೂವಿನ ಬೀದಿ ! " ಆಶ್ಚರ್ಯದ ಉದ್ಗಾರ ಹೊರಬಿದ್ದಿತು.

" ದೇವಾಲಯದಿಂದ ಮೂರನೇ ಮನೆ. "

" ನೀನೂ............ಯಾರು ? "

" ರಾಜ. "

" ಅಹುದೂ.........ಅಲ್ಲ.........ನಿಮ್ಮ ಮನೆಯಲ್ಲಿ.........ಅವರೂ......... " ಅನುಮಾನದಿಂದ ಅರ್ಧಕ್ಕೇ ಬಿಟ್ಟನು.

" ಅವರು ನನ್ನ ತಂದೆ. "

" ............... ! "

ತುಸು ಹೊತ್ತು ಇಬ್ಬರೂ ಮೂಕರಂತೆ ಹಾದಿ ನಡೆದರು. ಮಾತು ಮುಂದುವರಿಸಲು ಉಮೇಶನಿಗೆ ತಿಳಿಯಲಿಲ್ಲ. ಮನಸ್ಸಿನ ಹೊಯ್ದಾಟ ಮಾತ್ರ ಮುಂಬರುವ ಪ್ರಳಯವನ್ನು ಸೂಚಿಸುತ್ತಿದ್ದಿತು. ಏನೋ ಕೇಳಲು ಹೊರಟ ಉಮೇಶ ಕಡೆಗೇನನ್ನೋ ತಡವರಿಸಿದ. ಉತ್ತರ ಉಮೇಶನ ಕಣ್ಣಿಗೆ ಮಂಜು ತಂದಿತು.

" ಏನಂದಿ ? " ಹಿಡಿಯಲ್ಲಿ ಜೀವ ಹಿಡಿದು ಇನ್ನೊಂದು ಬಾರಿ ಕೇಳಿದ.

" ಸೌಭಾಗ್ಯಮ್ಮ ನನ್ನ ತಾಯಿ. "

ಮಲ್ಲಾರಿಭಟ್ಟರ ಹೆಂಡತಿ ಇದ್ದ ನೆನಪು ಸಹ ಬಹು ಜನರಿಗಿರಲಿಲ್ಲ. ಅನೇಕ ವರ್ಷಗಳ ಆಚೆಯ ಹಳೆಯ ಕತೆ ಶ್ಯಾಮಲಮ್ಮ ಬಾಳಿ ಸತ್ತುದು. ಒಂದೇ ಹೆಣ್ಣುಮಗುವನ್ನು ಹೆತ್ತು ಮಾರನೆಯ ದಿನವೇ ಹೆರಿಗೆಯ ಆಸ್ಪತ್ರೆಯಲ್ಲಿ ಕಾಲವಾಗಿದ್ದಳು. ಆ ಮಗು ಸಹ ಹಲವೇ ದಿನಗಳಲ್ಲಿ ಸತ್ತಿತೆಂತಲೂ ಯಾರೋ ಐಸಾಯಿಗಳಿಗೆ ಮಲ್ಲಾರಿಭಟ್ಟರೇ ಕೊಟ್ಟುಬಿಟ್ಟರೆಂತಲೂ ನಾನಾ ರೀತಿಯಲ್ಲಿ ಜನರು ಆಡಿಕೊಳ್ಳುವ ವಾಡಿಕೆ ಹಲವೇ ಕಾಲ ಇದ್ದು ಹೋಗಿದ್ದಿತು. ಉಮೇಶನಿಗೆ ಇಷ್ಟು ಮಾತ್ರ ನಿಶ್ಚಯವಾಗಿ ತಿಳಿದಿದ್ದಿತು—ಮಲ್ಲಾರಿಭಟ್ಟರಿಗೆ ಹೆಂಡತಿ ಮಕ್ಕಳಾರೂ ಇಲ್ಲವೆಂತಲೂ, ಸ್ವಂತ ಮನೆಯಲ್ಲಿ ಏಕಾಂಗಿಯಾಗಿ ಅವರಿದ್ದಾರೆಂತಲೂ. ಮಲ್ಲಾರಿಭಟ್ಟರನ್ನು ತಂದೆಯೆಂದು ಕರೆವ ಈ ಮುದ್ದಾದ ರಾಜ, ಇವನ ತಾಯಿಯಾದ ಸೌಭಾಗ್ಯಮ್ಮ ಎಲ್ಲವೂ ಒಂದು ಒಗಟೇ ಆಯಿತು ಉಮೇಶನಿಗೆ. ವೃದ್ಧಾಪ್ಯದ ಒಳಹೊಸ್ತಿಲಲ್ಲಿ ಕಾಲಿಕ್ಕಿದ ಮಲ್ಲಾರಿಭಟ್ಟರು ಬೆಳಸಿದ್ದ ಅನುಲೋಮ ಸಂಬಂಧವನ್ನು ಕಂಡು ಉಮೇಶ ಬೆರಗಾದ. ಆದರೂ ಒಂದಕ್ಕೆ ಮಾತ್ರ ಮಲ್ಲಾರಿಭಟ್ಟರಿಗೆ ಮನದಲ್ಲಿಯೇ ಮೆಚ್ಚಿದ. ತನ್ನ ತಂದೆ ಮಾಡಿದ ಮಹಾಪರಾಧವನ್ನಂತೂ ಭಟ್ಟರು ಮಾಡಿಲ್ಲವಲ್ಲ ಎಂದು ಸಂತಸಗೊಂಡ. ವಿಚಾರ ಮುಂದೋಡುವ ಮುನ್ನೆಯೇ ಸೌಭಾಗ್ಯಮ್ಮನ ಮನೆಯ ಒಳಬಾಗಿಲಲ್ಲಿ ಕಾಲಿಕ್ಕಿದ್ದ.

ಮನೆ ಚಿಕ್ಕದಾದರೂ ಚೊಕ್ಕಟವಾಗಿದ್ದಿತು. ಬ್ರಾಹ್ಮಣರ ಮನೆಯಂತೂ ಅಲ್ಲವೆಂದು ನಿಶ್ಚಯಿಸಿದ ಉಮೇಶ. ಗೇಣಗಲವಿದ್ದ ಹೊರ ಕಟ್ಟೆಗೂ ಸುಣ್ಣ ಬಣ್ಣ. ಸ್ವಚ್ಛವಾದ ಸಾಪು ಬಂಡೆಗಳು. ಬಂಡೆ ಬಂಡೆಗೂ ಸುತ್ತಲೂ ಸುಣ್ಣ. ಮಧ್ಯದಲ್ಲಿ ದೊಡ್ಡೊಂದು ಸುಣ್ಣದ ರಂಗವಲ್ಲಿ. ಹೊಸ್ತಿಲು ಕಂಬಗಳಿಗೆ ಕೆಂಪು. ಬಾಗಿಲಿಗೆ ಬಣ್ಣ ಬಣ್ಣದ ಗಾಜಿನ ಕೊಳವೆಗಳ ತೋರಣ. ಮಧ್ಯದಲ್ಲಿ ನೇತಾಡುತ್ತಿದ್ದ ದೊಡ್ಡೊಂದು ದೀಪ, ಗೋಡೆಗೆ ತಗಲಿಸಿದ ರವಿವರ್ಮನ ಕಲಾಕೃತಿಯ ಮೇಲೆ ಬೇಕಾದಷ್ಟು ಬೆಳಕನ್ನು ಚೆಲ್ಲಿದೆ. ಪದಚ್ಯುತಿ ಹೊಂದಿದ ವಿಶ್ವಾಮಿತ್ರನ ಶಿಶು ಶಕುಂತಲೆಯನ್ನು ನೋಡಲಂಜಿ ಮುಗಿಲಿಗೆ ಕೈ ಎತ್ತಿದ್ದಾನೆ. ಮೇನಕೆ ಮುಂದೆ ನಿಂತಿದ್ದಾಳೆ. ರವಿವರ್ಮನ ಎಲ್ಲ ಚಿತ್ರಗಳಲ್ಲಿಯೂ ಒಂದೇ ಮುಖವೇ ಎನಿಸಿತು ಉಮೇಶ

ನಿಗೆ. ಅದೇ ಮೂಗು, ಅದೇ ನೋಟ, ಅವೇ ವೈಖರಿ. ಒಂದೇ ಭಾವದ— ಅಂದರೆ ಭಾವವಿಲ್ಲದ — ಒಂದೇ ವೈಲಕ್ಷಣ್ಯ. ಗಡ್ಡ ಮಿಾಸೆ ಹೊತ್ತಿದ್ದುದ ರಿಂದ ವಿಶ್ವಾಮಿತ್ರ, ಸ್ತ್ರೀ ಉಡುಪಿನಲ್ಲಿ ಎದುರು ನಿಂತುದರಿಂದ ಮೇನಕೆ, ಬದಿಯಲ್ಲಿ ಆನೆ ಇದ್ದರೆ ಗಜಲಕ್ಷ್ಮಿ, ಕೈಯಲ್ಲಿ ವೀಣೆಯಿದ್ದರೆ ಸರಸ್ವತಿ, ಹಂಸವಿದ್ದರೆ ದಮಯಂತಿ. ಪ್ರಾಚ್ಯ ಚಿತ್ರಪ್ರದರ್ಶನದಲ್ಲಿ ಹೊಕ್ಕ ಅಮೇರಿಕೆಯ ಪ್ರವಾಸಿಯಂತೆ ಚಿತ್ರಗಳೊಂದೊಂದನ್ನೇ ಪರಿಶೀಲಿಸುತ್ತ ಮುಂದೆ ಸಾಗಿದ. ಜಲಕ್ರೀಡೆ. ರಾಮನ ಬಗ್ಗೆ ಇದ್ದ ಮೆಚ್ಚುಗೆ ಉಮೇಶನಿಗೆ ಕೃಷ್ಣನ ಬಗ್ಗೆ ಇರಲಿಲ್ಲ. ದೇವರೆಂದರೆ ರಾಮನೇ ಎಂದು ಅದೆಷ್ಟೋ ಬಾರಿ ವಾದಿಸಿದ್ದ. ಮಗುವಾದಾಗ ಮಗುವಿನಂತೆ ಅತ್ತು, ಕನ್ನಡಿಯಲ್ಲಿ ಚಂದ್ರ ನನ್ನು ಹಿಡಿದು ನಕ್ಕು, ಮನುಷ್ಯನಾಗಿ ಬಾಳಿ ಕಷ್ಟಗಳನ್ನು ತಾಳಿ, ಅರಸ ನಾಗಿ ಆಳಿ, ಆದರ್ಶಪುರುಷನಾಗಿ ಮಾನವನಿಗೆ ಮೇಲ್ಪಙ್ತಿ ತೋರಿಸಿದ ದೇವನು ಶ್ರೀರಾಮ. ಕೃಷ್ಣನಂತೆ ಇಂದ್ರಜಾಲ ಮಹೇಂದ್ರಜಾಲವನ್ನು ಮಾಡಿ, ಜಾದು ಮೋಡಿಗಳನ್ನು ಹೂಡಿ, ಒಂದರಿಂದ ದಶಲಕ್ಷ ಮಾಡಿ, ಮಣ್ಣನ್ನು ಚಿನ್ನ ಮಾಡಿ, ಚಿನ್ನದಿಂದ ಹೊಗೆಯೂದಿ, ಅತಿರೇಕವನ್ನು ಮಿಾರಿ ಅಪೌರುಷೇಯ ಕೃತ್ಯಗಳನ್ನು ಕೈಚಮಕಿನಿಂದ ತೋರಿ, ಜಗತ್ತನ್ನು ಬೆರಗು ಮಾಡಿದವನು ರಾಮನಲ್ಲ. ಆದರೆ ಉದ್ಯೋಗಪರ್ವದ ಕೃಷ್ಣನಿಗೆ ಮಾತ್ರ ತಲೆಬಾಗಿದ. ಆ ವ್ಯವಹಾರ ಕುಶಲತೆ, ಆ ರಾಜತಂತ್ರ! ಮುಂದಿನ ಚಿತ್ರದಲ್ಲಿ ರಾಸಕ್ರೀಡೆ. ಬಣ್ಣ ಬಳಿದುಕೊಂಡು ಥಳಥಳಿಸುತ್ತಿದ್ದ ರವಿ ವರ್ಮನ ದೇವರುಗಳ ಸಾಲಿನಲ್ಲಿ ಜಾರ್ಜ್ ಬಾದಶಹರೊಟ್ಟಿಗೆ ಕೈ ಕುಲುಕು ತ್ತಿದ್ದ ನಗ್ನ ಫಕೀರ ಎಂ. ಕೆ. ಗಾಂಧಿ. ಆ ಪಟಕ್ಕೊಂದು ನೂಲಿನ ಮಾಲೆಯ ಸಿಂಗಾರ. ಸಾಯಿಬಾಬಾ. ಆಮೇಲೆ ಬಹು ಹಳೆಯದಾದ ಭಾವಚಿತ್ರವೊಂದು ಕಣ್ಣಿಗೆ ಬಿದ್ದಿತು. ಉಮೇಶನಿಗೆ ನಗು ಉಕ್ಕಿ ಬಂದಿತು. ಕರೀ 'ಬವ್ವ' ಕತ್ತಿನಲ್ಲಿ, ಜರತಾರಿ ಅಂಚಿನ ಜರಿಯ ರುಮಾಲು, ಗಾಜಿಲ್ಲದ ಕನ್ನಡಕ, ಕೈಯಲ್ಲಿ ವಸ್ತ್ರವನ್ನು ಹಿಡಿದು ದೊಡ್ಡಾಟದ ವೇಷದಂತೆ ಕುರ್ಚಿಯ ಮೇಲೆ ಸೆಟೆದು ಕುಳಿತಿದ್ದಾರೆ ಮಲ್ಲಾರಿಭಟ್ಟರು. ಕಿಸೆಯಲ್ಲಿಯ ಗಡಿಯಾರಕ್ಕೆ ತಗಲಿಸಿದ ಬೆಳ್ಳಿಯ ಸರಪಣಿ. 'ವಿಠ್ಠೊ' ಎಂದು ಒಮ್ಮೆಲೆ ಚೀರಿ ರೆಕ್ಕೆ ಬಡೆದ ಸಪ್ಪಳವಾಯಿತು. ಬೆಚ್ಚಿಬಿದ್ದು ಉಮೇಶ ತಿರುಗಿ ನೋಡಿದ. ಪಂಜರದಲ್ಲಿ ಶುಕಮುನಿಗಳು!

ಇಷ್ಟು ತೀವ್ರ ವೇಷವನ್ನು ಮಾರ್ಪಡಿಸಿ ಬಂದ ರಾಜನನ್ನು ನೋಡಿ ದಿಗ್ಭ್ರಮೆಯಾಯಿತು ಉಮೇಶನಿಗೆ. ಅಹುದು, ರಾಜ! ಅದೇ ಕಾಂತಿ ಯುಕ್ತವಾದ ತುಂಬುಗಣ್ಣು ಅದೇ ತುಂಟ ನೋಟ. ನಿಡಿದಾದ ಮೂಗು, ಕೆಂದುಟಿ. ಪದ್ಮಿನಿ ಜಾತಿಗೊಪ್ಪುವ ಮುಖಲಕ್ಷಣ. ನಕ್ಕಾಗ ಗಲ್ಲದ ಮೇಲೆ ಚಿಕ್ಕೆ ಮೂಡುವದೆಂದು ಉಮೇಶ ಕಾವ್ಯದೃಷ್ಟಿಯಿಂದಲೇ ಕಂಡನು. ತಲೆ ಯಲ್ಲಿ ಅದೇ ಬೈತಲು, ಪುಡಿಗೂದಲಿನ ಬಹು ಉದ್ದನ ಜಡೆ. ತುದಿಗೊಂದು ರಿಬನ್ನಿನ ಗೊಂಚಲು. ಅದೇ ಮೈಬಣ್ಣ. ಅದನ್ನು ಎತ್ತಿ ಹಿಡಿಯುವ ಬಣ್ಣದ ಜಾರ್ಜಟ್ ಸೀರೆ. ಗಳಿಗೆಗೊಮ್ಮೆ ಜಾರದಿರಲಾರದ ಸೆರಗು. ಬೆರಳಿನ ಹಿಂದಿ ನಿಂದ ಕಣ್ಣು ತಿಕ್ಕಿದ. ವಸ್ತುತಃ ಅವನೊಬ್ಬ ಗುಣಾಢ್ಯ. ತನ್ನ ಗುರಿಯನ್ನು ಸಂಪೂರ್ಣ ಸಾಧಿಸಲಾರದೆ ಸೋಲನ್ನೊಪ್ಪಿಕೊಂಡ ವಿವಾಹಪದ್ಧತಿ, ಮಾನ ವನ ಸಹಜವೃತ್ತಿಗೆ ಅನುಗುಣವಾಗದ ಮಡಿವಂತಿಕೆಯ ಏಕಪತ್ನೀತ್ವ ಮುಂತಾದ ವಿಫಲವಾದ ಮಾನವನ ಅನುಭವಗಳ ಬಗ್ಗೆ ತೀವ್ರಗಾಮಿಯಂತೆ ಬಹು ತೀಕ್ಷ್ಣ ವೆಂದೆನಿಸಬಹುದಾದ ಅಭಿಪ್ರಾಯಗಳಿದ್ದರೂ ನಡತೆಯಲ್ಲಿ ಮಾತ್ರ ಉಮೇಶ ಎಂದೂ ವಾಮಮಾರ್ಗವನ್ನು ತುಳಿದವನಲ್ಲ. ಜೀವನವೆಷ್ಟೋ ನೀರಸವಾಗಿ ದ್ದರೂ ಸೌಂದರ್ಯೋಪಾಸನೆಯ ರಸಿಕತೆಗೆ ಅಡಚಣೆ ಇರಲಿಲ್ಲ. ಶಿಷ್ಟಸಂಪ್ರ ದಾಯವನ್ನು ಉಲ್ಲಂಘಿಸಿ ಎವೆ ಇಕ್ಕದೆ ತಾನು ನಿಂತು ನೋಡಿದುದು ರಾಜನ ನ್ನಲ್ಲ, ರಾಜನ ಅಕ್ಕನನ್ನು ಎಂಬ ಅರಿವು ಬಂದ ಕೂಡಲೆ ಅವಳ ಮುಖದಲ್ಲಿ ನಟ್ಟಿದ್ದ ನೋಟವನ್ನು ಕಿತ್ತಲು ಪ್ರಯತ್ನ ಮಾಡಿದ.

'ಕುಸುಮಾ' ಎಂದಾರೋ ಒಳಗಿನಿಂದ ಕೂಗಿದರು. ತುಸು ಹಿರಿ ವಯಸ್ಸಿನ ಹೆಣ್ಣಿನ ದನಿ. ಸಮುದ್ರದ ತೆರೆಯಂತೆದ್ದು ಬೀಳುತ್ತಿದ್ದ ಸೀರೆಯ ಸೆರಗನ್ನು ಮುಂಗಾಲಿನಿಂದ ಚಿಮ್ಮುತ್ತ ಕುಸುಮ ಒಳನಡೆದಳು. ಉಮೇಶನ ಉಸಿರು ಹಾರಿತು. ತಲೆ ಎತ್ತಿ ಮೇಲೆ ನೋಡಿದ. ಋಣಮುಕ್ತನಾಗದೆ ಮೇಲಕ್ಕೆ ಕೈ ಎತ್ತಿನಿಂತ ವಿಶ್ವಾಮಿತ್ರ. ರೆಕ್ಕೆ ಬಡಿದು 'ಚೂಚೆ' ಎಂದೊಮ್ಮೆ ಗಿಳಿ ಚೀರಿತು. ಜೋಕೆ ಎಂಬ ದನಿ ಅದರಲ್ಲಿ ಕೇಳಿತು ಉಮೇಶನಿಗೆ. ಕಾಲೋಚಿತವಾಗಿ ಕೊಟ್ಟ ಎಚ್ಚರಿಕೆಗಾಗಿ ಶುಕಮುನಿಗಳಿಗೆ ಮನದಲ್ಲಿಯೇ ವಂದಿಸಿದ.

ಸಲುಗೆಯ ಕಿರುನಗೆಯಿಂದ ಕೈ ಹಿಡಿದೆಳೆದ. ರಾಜ ಬಾಲಕನ ವೇಷ

ದಲ್ಲಿದ್ದ ಕುಸುಮಗಳಂತೆ ಕಂಡನು. ರಾಜ ಕುಸುಮರು ಸೌಭಾಗ್ಯದ ಎರಡು ರತ್ನಗಳು.

"ಬನ್ನಿ ವಳಗೆ, ಅಪ್ಪ ಕರೆಯುತ್ತಿದ್ದಾರೆ."

ನಿದ್ರೆಯಲ್ಲಿ ನಡೆಯುವವನಂತೆ ಉಮೇಶ ಆ ಬಾಲಮಾಂತ್ರಿಕನನ್ನು ಹಿಂಬಾಲಿಸಿದ. ಕೋಣೆಯ ಬಾಗಿಲಲ್ಲಿ ಕಾಲಿಕ್ಕಿದ. ಶುಕಮುನಿಗಳು ಜೋಕೆ ಎಂದು ಅರಚಿದರು. ಮಲ್ಲಾರಿಭಟ್ಟರ ಶಯ್ಯಾಗೃಹ ಅವರ ಅಭಿರುಚಿಗೆ ತಕ್ಕಂತೆಯೇ ಅಲಂಕೃತವಾಗಿದ್ದಿತು. ದೊಡ್ಡೊಂದು ಪಲ್ಲಂಗ, ಗಾದಿ ಲೇಪು, ಪರದೆ, ತೂಗುವ ಕುರ್ಚಿ, ಮೂಲೆಯಲ್ಲೊಂದು ಮೇಜು, ಗೋಡೆ ಕಾಣದಷ್ಟು ಪಟಗಳು. ಜಾರರ ತಲೆ ಕೊರೆಯುವ ನರಕದ ಪಟವೂ ನೇತಾಡುತ್ತಿದ್ದಿತು ಪಟಗಳ ಸಾಲಿನಲ್ಲಿ. ಮಲಗಿದಲ್ಲಿಯೇ ಏಳಲು ಹವಣಿಸಿ ಉಮೇಶನನ್ನು ಸ್ವಾಗತಿಸಿದರು ಭಟ್ಟರು.

"ನೀವ್ಯಾಕ ಏಳ್ತೀರಿ, ಮಲಗಿರಿ" ಎಂದು ಆದರದಿಂದ ನುಡಿದು, ಏಳುವ ಅಂಜಿಕೆಯನ್ನು ತೋರಬಯಸಿದ ಭಟ್ಟರನ್ನು ಕೈಹಿಡಿದು ಹಾಗೆಯೇ ಮಲಗಿಸಿದ. ಕೂಡಿರೆಂದು ಕೈಸನ್ನೆ ಮಾಡಿ ಹಿತ್ತಾಳಿ ಗೊಣಸಿನ ತೂಗುಮಂಚದಲ್ಲಿ ತಾಂಬೂಲದ ಪೆಟ್ಟಿಗೆ ಮುಂದಿಕ್ಕಿ ಕುಳಿತಿದ್ದ ಸೌಭಾಗ್ಯಮ್ಮ ತೂಗು ಕುರ್ಚಿಯನ್ನು ಉಮೇಶನ ಬಳಿ ದೂಡಿದಳು. ಉಮೇಶನೊಂದು ಬಾರಿ ಸೌಭಾಗ್ಯಮ್ಮನನ್ನು ನೋಡಿದ. ಜೀರ್ಣವಾದರೂ ಬಣ್ಣ ಮಾಸದ ಬಟ್ಟೆಯ ಪ್ರಕೃತಿ ಸೌಭಾಗ್ಯಮ್ಮನದು. ಯೌವನ ಹಿಂದಾಗಿದ್ದರೂ ಜಾಣತನದಿಂದ ವೃದ್ಧಾಪ್ಯವನ್ನು ಮಾತ್ರ ದೂರ ಇರಿಸಿದ್ದಳು. ಸುಖವಾಗಿ ಉಂಡುಟ್ಟು ಬಾಳಿನಲ್ಲಿ ಭೋಗಪಟ್ಟು ಕೊರತೆಯನ್ನು ಕಾಣದೆ ಬದುಕಿದವಳು. ಮುಖದಲ್ಲೊಂದು ಬಗೆಯ ತೃಪ್ತಿ ಮೂಡಿದ್ದಿತು. ಇಂತಹ ಮುಖಮುದ್ರೆ ತನ್ನ ತಂದೆಯ ಹೆಂಡತಿಯಾದ ಕಾವೇರಿಗೆ ಇಲ್ಲವಲ್ಲ ಎಂದು ಕಳಕಳಿಬಡುವಂತಾಯಿತು ಉಮೇಶನಿಗೆ. ಉಂಡು ಉಡಲು ಅವಳಿಗಾವ ನಿರ್ಬಂಧವೂ ಇರಲಿಲ್ಲ. ಅವಳೇ ಮನೆಯ ಒಡತಿ. ಜಾತಿಯಿಂದ ಗೌರವವಿದೆ. ಸಮಾಜದಲ್ಲಿ ಸ್ಥಾನಮಾನಗಳಿವೆ. ಆದರೆ ಮೈತುಂಬ ಒಡವೆಗಳನ್ನು ಹೇರಿ ಹೊರಗೆ ಆಡಲು ಬಿಡದೆ ಹಿಡಿದು ಕಟ್ಟಲ್ಪಟ್ಟ ಮಗುವಿನಂತೆ ಆಗಿದ್ದಳು ಕಾವೇರಿ. ಹೆಚ್ಚಿನ ವೇಗದಲ್ಲಿ ಆಯುಸ್ಸನ್ನೋಡಿಸಿದ ಹರೆ ಮುಗಿದ ವೇಶ್ಯೆಗೆ ಇರುವ ಮನ

ಶ್ಯಾಂತಿ, ತೃಪ್ತಿ, ಉಲ್ಲಸಿತ ಮುಖ ತುಂಬಿದ ಯೌವನದಲ್ಲಿರುವ ಗೌರವದ ಗರತಿಗೆ ಬೇಡವೇ ! ಸೌಭಾಗ್ಯಮ್ಮನಷ್ಟು ನಿರೋಗಿಯಾದರೂ ಇರಬೇಡವೆ ಕಾವೇರಿ ? ಇವಳ ಈ ಲುಪ್ತ ರಸಜೀವನಕ್ಕೆ ಕಾರಣೀಭೂತನಾದ ತನ್ನ ತಂದೆ ಸಮಾಜದ ದೃಷ್ಟಿಯಲ್ಲಿ ಇನ್ನೂ ನೀತಿಪರ ಮನುಷ್ಯನೆ ! ಆದರೆ ಅದೇ ಸಮಾಜ ಮಲ್ಲಾರಿಭಟ್ಟನಿಗೆ ಮಾತ್ರ ಜಾರನೆಂದು ಬರಿ ಎಳೆಯಲು ಹಿಂದುಮುಂದು ನೋಡದು. ವ್ಯಭಿಚಾರದ ಕಲ್ಪನೆಯೇ ತಿರುವು ಮುರುವು ಇದ್ದ ಸಮಾಜ ವನ್ನು ಕಂಡು ನಗು ಬಂದಿತು ಉಮೇಶನಿಗೆ. ಆದರೆ ಬೇರೊಂದು ಕಾರಣ ದಿಂದ ಭಟ್ಟರ ಬಗ್ಗೆ ಉಮೇಶನ ಆದರ ಮುಕ್ಕಾಯಿತು. ಅವರ ಮುಖದಿಂದ ಸೆರೆಯ ವಾಸನೆ ಬಂದಾಗ ಅವನಿಗೆ ರೋಮಾಂಚನವಾಗಿ ಮೋರೆಯನ್ನು ಕಿವುಚಿದನು. ಅಯ್ಯರ ವೈಯಕ್ತಿಕ ಜೀವನವನ್ನು ಟೀಕಿಸುವ ದುಶ್ಚಟ ಉಮೇಶನಿಗಿರಲಿಲ್ಲ. ವೇಶ್ಯೆಯ ಮನೆಯ ಎದುರಿನಲ್ಲಿ ಮಠ ಕಟ್ಟಿಗೊಂಡಿದ್ದ ಸನ್ಯಾಸಿಯಂತೆ ಪರರ ಬಾಳಿನಲ್ಲಿಯ ದೋಷಗಳನ್ನು ಎಣಿಸಿ ತನಗೊಂದು ಗುಡ್ಡದ ಹೊರೆಯನ್ನು ಮಾಡಿಕೊಳ್ಳುವ ದಡ್ಡನವನಲ್ಲ. ಆದರೆ ಅನೈಸರ್ಗಿಕ ವಾದುದೆಲ್ಲವೂ ಮಹಾಪಾಪವೆಂದಿಷ್ಟೆ ಅವನ ಅಭಿಪ್ರಾಯ. ಹೊಗೆಸೊಪ್ಪಿನ ಸೇವನೆಯನ್ನು ಟೀಕಿಸಿ ನಗೆಗೀಡು ಮಾಡಿ ಕವನವೊಂದನ್ನು ಬರೆದು ಚಿಕ್ಕವನಿ ದ್ದಾಗಲೇ ಶಾಲೆಯ ಕೈಬರಹದ ಪತ್ರಿಕೆಯಲ್ಲಿ ಪ್ರಕಟಿಸಿದ್ದ.

ಭಟ್ಟರ ಕಣ್ಣುಗಳು ಕೆಂಪೇರಿದ್ದವು. ಮಲಗಿದಲ್ಲಿಯೇ ಕೈಚಾಚಿ ಉಮೇ ಶನ ಕೈ ಹಿಡಿದು ಬಡಬಡಿಸುತ್ತಿದರು. ಸಮಾಧಾನಪಡಿಸುವ ಎರಡು ಮಾತು ಗಳು ಉಮೇಶನ ಬಾಯಿಂದ ತಾನಾಗಿ ಹೊರಬಿದ್ದವು.

“ ಉಮೇಶಾ, ನನ್ನ ಆ ಮಗಳಿದ್ದಿದ್ದರೆ ನೀನು ನನ್ನ ಅಳಿಯ ಆಗುತ್ತಿ ದ್ದೆಪ್ಪಾ ” ಎಂದೊಮ್ಮೆ ಪೇಚಾಡಿದರು. ಸೆರೆಯ ಪುಣ್ಯದಿಂದ ಸತ್ಯ ಹೊರಬೀಳು ವುದು, ಕೆಡುಕಿನಿಂದ ಒಳಿತು ಹುಟ್ಟಿದಂತೆ ಎನಿಸಿತು ಉಮೇಶನಿಗೆ. ಹಳೆಯ ನೆನಪು ಹೃದಯ ಚುಚ್ಚಿತೆಂಬಂತಾಗಿ ಭಟ್ಟರ ಕಣ್ಣಿಂದೆರಡು ಹನಿಗಳು ಹೊರ ಹರಿದು ಮುದಿಗಲ್ಲದ ಮೇಲೆ ನಿಂತು ಹೊಳೆದವು. ಸೌಭಾಗ್ಯಮ್ಮ ಸೊಂಟದಲ್ಲಿದ್ದ ಕರವಸ್ತ್ರವನ್ನು ತೆಗೆದು, ಮುಖದ ಹಿಟ್ಟು ಕೆಡದಂತೆ ತನ್ನ ಕಣ್ಣೊರಸಿಕೊಂಡು, ಕರವಸ್ತ್ರವನ್ನು ಮೊದಲಿದ್ದಲ್ಲಿಯೇ ಸಿಕ್ಕಿಸಿದಳು. ಮಾತನ್ನು ಮರೆಸುವ ಹವಣಿಕೆ ಯಿಂದ ಉಮೇಶ ವಿಷಯವನ್ನು ಬೇರೆ ಮಾಡಿದ.

" ಔಷಧಿ ತೊಗಂಡಿರಾ ? "

" ತೊಗಂಡೀನಪಾ ಉಮೇಶಾ, ಆದ್ರೂ ಇನ್ನೂ ಬೇಕು "

ಕಣ್ಣಸನ್ನೆಗೆ ಚಿರಪರಿಚಿತಳಾದ ಸೂಕ್ಷ್ಮಗ್ರಾಹಿ ಸೌಭಾಗ್ಯಮ್ಮ ಮೆಲ್ಲಗೆ ಹೊರನುಸುಳಿದಳು. ಎರಡು ಗ್ಲಾಸುಗಳಲ್ಲಿ ಸೆರೆ ತುಂಬಿತು. ಗ್ಲಾಸುಗಳನ್ನು ಕೈಲಿ ಹಿಡಿದು ಗೋಡೆಗೆ ಆತು ಒಂಟಿಗಾಲಿನಿಂದ ಕುಸುಮ ನಿಂತಳು. ಉಮೇಶ ತಲೆ ಎತ್ತದೆ ಕಣ್ಣೆತ್ತಿ ನೋಡಿದ. ದೇವತೆಗಳಿಗೆ ಅಮೃತವನ್ನು ಸುರಿದ ಸಾಕ್ಷಾತ್ ಮೋಹಿನಿ ! ಅವಳ ಸುಂದರ ಮುಖವನ್ನೇ ಎವೆ ಇಕ್ಕದೆ ನೋಡಿದ. ನೋಡಿದಂತೆಲ್ಲ ಹೆಚ್ಚೆಚ್ಚು ಅರಳಿತು ಕುಸುಮಳ ಮುಖ ಉಮೇಶನ ಕಣ್ಣಲ್ಲಿ. ' ಬಾ ಭೃಂಗವೆ ಬಾ ' ಎಂದು ಅನುರಾಗದಲ್ಲಿ ಹಾಡಿತು. ಇದಕ್ಕೆ ತಾಳ ಕುಣಿಯಿತು ಉಮೇಶನ ಹೃದಯ.

" ಒಂದನ್ನಿಲ್ಲಿಟ್ಟು ಇನ್ನೊಂದು ಉಮೇಶನಿಗೆ ಕೊಡು. ನಾಚಿಗೆ ಏನೇ ಕುಸುಮಾ " ಎಂದು ಭಟ್ಟರು ಸುಳ್ಳು ಮಮತೆಯಲ್ಲಿ ಕಳ್ಳ ಕೋಪವನ್ನು ಬೆರೆಸಿ ನುಡಿದರು. ಗಾಜಿನಲ್ಲಿದ್ದ ಸೆರೆಯನ್ನು ಕಂಡ ಕೂಡಲೆ ಉಮೇಶನ ಮೈ ಜುಮ್ಮೆಂದಿತು.

" ಬ್ಯಾಡ್ರೀ, ನನಗ ಬ್ಯಾಡ " ಎಂದು ಮನೋನಿರ್ಧಾರವನ್ನು ಸೂಚಿಸುವ ದನಿಯಲ್ಲಿ ಹೇಳಿ ಕುಳಿತಲ್ಲಿಯೇ ಚಡಪಡಿಸಹತ್ತಿದ.

" ಇಲ್ಲಿ ತೊಗಳ್ಳಪಾ ಉಮೇಶ, ಮೈಗೆ ಒಳ್ಳೇದಿದು " ಎನ್ನುತ್ತ ತಮ್ಮ ಗ್ಲಾಸನ್ನು ಕೈಲಿ ಹಿಡಿದು ಕುಸುಮಳೆಡೆ ಅರ್ಥಗರ್ಭಿತವಾಗಿ ನೋಡಿದರು ಮಲ್ಲಾರಿಭಟ್ಟರು.

" ಛೇ, ಛೇ ! ಬ್ಯಾಡ, ನನಗೆ ಬ್ಯಾಡ " ಎಂದು ಗಟ್ಟಿಗಟ್ಟಿಯಾಗಿ ಹೇಳುತ್ತ ಬೇಡ ಎನ್ನಬೇಕಾದುದಕ್ಕಾಗಿ ತಪ್ಪಿತನಂತೆ ಮಾಡಿದ ಮುಖವನ್ನು ಕುಸುಮಳೆಡೆ ತಿರುವಿದ. ಅದನ್ನು ಗುರುತಿಸಿದ ಕುಸುಮಳ ಕಣ್ಣುಗಳು ನಮ್ರತೆಯುನ್ನಿತ್ತಂತೆ ಉಮೇಶನಿಗೆ ಕಾಣಲಿಲ್ಲ. ಗ್ಲಾಸನ್ನು ಹಿಡಿದು ಮುಂದೆ ಚಾಚಿದ ಕೈಯನ್ನೊಮ್ಮೆ ನೋಡಿದ. ಆ ಕೈಯಿಂದ ವಿಷವೇ ಬಂದರೂ ಒಲ್ಲೆ ಎನ್ನಲು ಸಾಧ್ಯವೇ ? ' ಚೂಚಿ ' ಎಂದು ಚೀರಿತು ಪಂಜರದಲ್ಲಿಯ ಗಿಳಿ. ನಿಡಿದಾದ ಬೆರಳುಗಳಲ್ಲಿ ಹಿಡಿದ ಸೆರೆ ತುಂಬಿದ ಆ ಗ್ಲಾಸು ಕಪ್ಪು

ನಾಗರ ಹೆಡೆಯಂತೆ ಭಾಸವಾಗಿ ಉಮೇಶ ಒಮ್ಮೆಲೆ ಭೀರುವಾದ. ಕೈಯನು ಮೇಲಿಂದ ಕೆಳಗೂ ಬುಡದಿಂದ ಮೇಲೂ ಎರಡೆರಡು ಬಾರಿ ನೋಡಿದ. ಸುಂದರ ವಾದ ಸರ್ಪ.

" ನನಗೆ ಬ್ಯಾಡ್ರಿ, ಭಟ್ರೆ. ಕ್ಷಮಿಸ್ರಿ " ಎಂದು ಸಾಹಸದಿಂದಲೆ ಮಲ್ಲಾರಿ ಭಟ್ಟರಿಗೆ ಹೇಳಿ ಕುಸುಮಳ ಮುಖ ನೋಡಿದ. ಭಟ್ಟರು ಮಲಗಿದಲ್ಲಿಯೆ ತುಟಿ ಕಚ್ಚಿದರು. ಕೂಡಲೆ ಕುಸುಮ ಇನ್ನೂ ಸನಿಯ ಬಂದಳು. ಅವಳ ಕಣ್ಣೊಂದಿಗೆ ಕವನ ಹೊಡಿ ಉಮೇಶನ ಬಡ ಮನಸ್ಸು ಹೊಯ್ದಾಡಹತ್ತಿತು. ಉಮೇಶ ಕುಳಿತ ಕುರ್ಚಿಯ ಮೇಲೆ ಅವಳು ಇನ್ನೊಂದು ಕೈಯನ್ನೂರಿದ್ದಳು. ಹೊಯ್ದಾಡುವ ಮನದೊಂದಿಗೆ ಉಮೇಶನ ಮೈಯೂ ನಡುಗಿತು. ಕುಸುಮಳ ಕೈಗೆ ಉಮೇಶನ ಕೈ ಅಕಸ್ಮಾತ್ತಾಗಿ ತಗಲಿತು. ಅವನ ಶರೀರದಲ್ಲಿ ವಿದ್ಯುತ್ ಸಂಚಾರವಾಯಿತು.

ಹುಬ್ಬುಗಂಟಿಕ್ಕಿದ ಮಲ್ಲಾರಿಭಟ್ಟರು ' ಹೂಂ ' ಎಂದು ಕುಸುಮ ಳನ್ನು ದುರುದುರು ನೋಡಿದರು. ಕೀಲುಗೊಂಬೆಯಂತೆ ಕುಸುಮ ಉಮೇಶನ ಮುಂದೆ ಬಂದಳು. ಅವಳ ಕೈಲಿದ್ದ ಗ್ಲಾಸು ಉಮೇಶನ ಬಾಯಿಗೆ ತಾನಾಗಿ ಬಂದಿತು. ' ಚೂಚೆ ' ಎಂದು ಶುಕಮುನಿಗಳು ಚೀರಿ ದಾಗ ಉಮೇಶನ ಕಿವಿಗಳು ಕಿವುಡಾದವು. ಸೆರೆಯ ದುರ್ವಾಸನೆ ಮೂಗಿನಲ್ಲಿ ತುಂಬಿತು. ಬಾಯಿಗೇ ಬಂದಿತು. ಕಣ್ಣು ಮುಚ್ಚಿ ಉಮೇಶ ಕೈ ಚಾಚಿದ. ಕೂಡಲೆ ಗ್ಲಾಸು ಕೈ ತಗಲಿ ನೆಲಕ್ಕೆ ಬಿದ್ದಿತು. ಕುಸುಮಳ ಹೃದಯದಂತೆ ಸಹಸ್ರ ತುಂಡಾಯಿತು. ಬಟ್ಟೆ-ಬರೆಗಳ ಮೇಲೆ ಚೆಲ್ಲಿದ ಸೆರೆಯ ವಾಸನೆ ಯಿಂದ ಉಮೇಶನಿಗೆ ತಲೆ ಚಿಟ್ಟೆನಿಸಿತು. ನಿಮಿಷಾರ್ಧದಲ್ಲಿಯೇ ಉಮೇಶ ಮನೆಯ ಹಾದಿ ಹಿಡಿದಿದ್ದ.

" ಮತ್ತೆ ಅವರಿವರ ಮುಂದೆ ಅನಬ್ಯಾಡಪಾ, ಉಮೇಶ " ಎಂದು ಬಡಬಡಿಸುತ್ತ ಮಲ್ಲಾರಿಭಟ್ಟರು ಮಲಗಿ ಸೆರೆಯ ನಿದ್ರೆಯ ಆಳದಲ್ಲಿ ಇಳಿದು, ಹುಚ್ಚು ಹುಚ್ಚು ಕನಸು ಕಂಡರು. ಲಂಚ ಕೊಟ್ಟ ಆಸಾಮಿ ಕೆಲಸವಾಗ ದಿದ್ದುದರಿಂದ ಹಣವನ್ನು ಪರತು ಕೊಡೆಂದು ಅಂಗಿ ಹಿಡಿದು ಜಗ್ಗಿದಾಗ ಮಲ್ಲಾರಿಭಟ್ಟರು ಎಚ್ಚೆತ್ತು ಕಣ್ತೆರೆದರು.

# ೮. ದುಂಡು ಜಗತ್ತಿಗೆ ರುಂಡವಿಲ್ಲ.

ರಾವಸಾಹೇಬ ರಂಗರಾಯರಿಗೆ ಬರುಬರುತ್ತ ಕಾವೇರಿಯ ನಡತೆ ಸರಿಬರುತ್ತಿಲ್ಲ. ದಿನಗಳು ಕಳೆದಂತೆಲ್ಲ ಅವಳ ವರ್ತನೆಯೂ ಮಾರ್ಪಟ್ಟಿತು. ರಾಯರಿಗಾಗಿ ಅವಳಲ್ಲಿ ಮೊದಲಿದ್ದ ಗೌರವವಂತೂ ಮಾಯವಾಗಿ ಕೇವಲ ಹಲವೇ ಕಾಲ ಹೊರಗಿನ ತೋರಿಕೆಗಾಗಿ ಇದ್ದ ನಯ ಭಯಗಳೂ ಕೈಬಿಟ್ಟವು. ಅವಳೀಗ ಆ ಹಳೆಯ ಕಾವೇರಿಯಲ್ಲ. ರಾಯರನ್ನೆಷ್ಟೂ ಸೇರಳು. ಏನೂ ಎನಿಸದು ಸಹ ಅವರಿಗಾಗಿ. ತಾತ್ಸಾರದ ಅಥವಾ ಅನಾದರದ ಅದಾವ ಮಾತುಗಳನ್ನು ಬಾಯಿಂದ ಆಡಿರಲಿಲ್ಲವಾದರೂ ಅವಳ ಮೌನ ಮತ್ತು ದುರ್ಲಕ್ಷ್ಯ ಹೆಚ್ಚು ಚುಚ್ಚುವಂತಿದ್ದವು. ರಾಯರೊಟ್ಟಿಗೆ ಅಸಹಕಾರವನ್ನು ಹೂಡಿದಳು. ತನ್ನನ್ನು ಕೆಣಕದೆ ಇದ್ದಷ್ಟು ದಿನಗಳು ಮಾತ್ರ ತಾನೂ ಖಡ್ಗವನ್ನು ಹಿರಿಯದೆ ಸುಮ್ಮನಿದ್ದಳು. ರಾವಸಾಹೇಬರ ಸಿಡಿಸಿಡಿಗಳು, ಅಂದಿನ ಅಬ್ಬರ ಚೀರಾಟಗಳು ಮನೆಯಲ್ಲಿ ಜರುಗುವಂತಿರಲಿಲ್ಲ. ಗಂಡ-ಹೆಂಡಿರು ಮಾತನಾಡದೆ ಅದೆಷ್ಟೋ ದಿನಗಳು ಉರುಳಿದವು. ಮಾತನಾಡಲು ಇದ್ದುದಾದರೂ ಏನು ? ಊಟಕ್ಕೆ ಕುಳಿತಾಗಿನ ಎರಡು ಸಾಕು ಬೇಕುಗಳು ತಾನೆ ! ಊಟಕ್ಕೆ ನೀಡುವ ಕೆಲಸವನ್ನೂ ಸೊಸೆಗೆ ಬಿಟ್ಟುಕೊಟ್ಟು, ಹೊರಕಟ್ಟೆಗೆ ಬಂದು ಕೂಡುತ್ತಿದ್ದಳು. ರಾವಸಾಹೇಬರು ಒಮ್ಮೊಮ್ಮೆ ರಮಿಸುವ ಧೋರಣೆಯನ್ನು ತೋರಿ ನೋಡಿದರು. ಆದರೆ ಇತ್ತ ಕಡೆಯಿಂದ ಅದೆಷ್ಟೂ ಪ್ರೋತ್ಸಾಹವೇ ಇಲ್ಲವಾಗಿ ಸಪ್ಪೆಯಾದರು. ಒಂದು ಬಾರಿ ಮಾತ್ರ ರಾಯರು ಅವಳಿಗೆರಡು ಮಾತುಗಳನ್ನು ಸಿಟ್ಟಿನ ಭರದಲ್ಲಿ ಆಡಬೇಕಾಯಿತು. ಪುರುಷನ ವಿವಾಹಸಿದ್ಧ ಹಕ್ಕನ್ನು ಸಾಧಿಸಲೇ ಬೇಕೆನಿಸಿತು ಅವರಿಗೆ. ತಮ್ಮಿಂದಲೆ ಅವಳು, ತಮಗಾಗಿಯೆ ಅವಳು ಎಂಬ ಅರಿವು ಪೂರ್ಣವಾಗಿ ಮನೆಮಾಡಿದ್ದಿತು ಅವರ ಮನದಲ್ಲಿ. ಮಹಾರಾಣಿಯೂ ಮನೆಗಂಡನ ದಾಸಿಯೇ ಎಂದವರ ದೃಢವಾದ ವಿಶ್ವಾಸ. ತನ್ನ ರಾಜಭಕ್ತಿಯಂತೆ ತಮ್ಮ ಸಾಧ್ವಿಯ ಪತಿಭಕ್ತಿಯೂ ಇರಬೇಕೆಂದು ಅವರ ಆಸೆ. ವಿದ್ಯಾರ್ಥಿಗಳ ಚರ್ಚಾಸಂಘದ ಸಭೆಯೊಂದರಲ್ಲಿ ಮಿಸೆ ಮೂಡದ ಹುಡುಗನೊಬ್ಬ ಸ್ತ್ರೀಸ್ವಾತಂತ್ರ್ಯದ ಪರವಾಗಿ ಸ್ಫೂರ್ತಿದಾಯಕ ಭಾಷಣ

ಮಾಡುತ್ತ "ಸ್ತ್ರೀಗೆ ಸ್ವಾತಂತ್ರ್ಯ ಸಿಗುವದೆಂದು ?" ಎಂದು ನುಡಿದು ಹೆಬ್ಬೆರಳು ಮೇಲೆ ಮಾಡಿ ಎಲ್ಲರ ಮುಖ ನೋಡಿದಾಗ, ಅಧ್ಯಕ್ಷಸ್ಥಾನದಿಂದ ಸಿಡಿದೆದ್ದು 'ಗಂಡ ಸತ್ತ ಮೇಲೆ' ಎಂದು ಮೀಸೆ ಕಡಿದು ಬಡಿಗೆ ಹಿಡಿದು ಹೊರಟುಹೋದ ಮಹಾಘಟವಿದು. ಇಂತಹ ರಂಗರಾಯರಿಗೆ ಕಾವೇರಿಯು ಕಿಸಿಪಿಸಿ, ದೂರದ ಬಂಧುಗಳಿರಬಹುದಾದ ಪರಪುರುಷರೊಟ್ಟಿಗೆ ಮಾತು, ಉಮೇಶನೊಟ್ಟಿಗಾದರೂ ವೃತ್ತಪತ್ರಗಳಲ್ಲಿದ್ದ ವಿಷಯಗಳನ್ನು ಕುರಿತು ಉದ್ದುದ್ದನ ಚರ್ಚೆಗಳು ಹೇಗೆ ಸರಿಹೋಗಬೇಕು ?

ಉಮೇಶನ ಹಳೆಯ ಗೆಳೆಯನಾದ ರಘುರಾಮ ಹೊರಬಾಗಿಲಿಗೆ ಬಂದಾಗ ಕಾವೇರಿ ವರಾಂಗಣದಲ್ಲಿ ನಿಂತಿದ್ದಳು. ಗವ್ವೆಂದು ಬ್ರಿಟ್ವಾಳು ಸರಪಣಿ ಜಗ್ಗಿದಾಗ ಸಿಟ್ಟುಗಣ್ಣಿನ ಒಂದೇ ನೋಟದಿಂದ ಅದನ್ನು ಸುಮ್ಮನೆ ಮಾಡಿದಳು. ಊಟಕ್ಕೆ ಕುಳಿತು ವಿಚಾರಸರಣಿಯೊಂದಿಗೆ ಎಲ್ಲಿಗೋ ಹೋಗಿದ್ದ ರಂಗರಾಯರು ಬ್ರಿಟ್ವಾಳ ಕೂಗಿನಿಂದ ಎಚ್ಚರಾಗಿ ಕಿವಿ ನಿಗುರಿಸಿದರು. ಬಾಯಲ್ಲಿದ್ದ ತುತ್ತನ್ನು ಅಗಿಯದೆ ಹೊರಗಡೆಗೆ ಕಿವಿಗೊಟ್ಟರು. ಗಾಳಿ ಅನುಕೂಲವಿಲ್ಲದುದರಿಂದ ಮಾತುಗಳು ಹರುಕು ಮುರುಕು ಕಿವಿಗೆ ಬಿದ್ದವು. ಗಂಡು ದನಿಯ ಗುರುತು ಹತ್ತಿದ ಕೂಡಲೆ ತಟ್ಟೆಯಲ್ಲಿ ಅವಸರದಿಂದ ಕೈ ತೊಳೆದು ಬಾಗಿಲಿಗೆ ಬಂದು ಹುಬ್ಬೇರಿಸಿ "ಯಾರದು ?" ಎಂದರು. ರಘುರಾಮನಾಗಲೆ ಕೂಗಳತೆ ದಾಟಿ ಹೊರಟಿದ್ದ. ರಸ್ತೆಯ ದೀಪದ ಬುಡದಲ್ಲಿ ಅವನ ಆಕಾರ ಮಾತ್ರ ಕಂಡಿತು. ಆ ಉದ್ದನ ಜುಬ್ಬ ಬಿಳೀ ಟೊಪ್ಪಿಗೆಗಳಿಂದಲೇ ತಿಳಿಯಿತು ರಾಯರಿಗೆ, ಅವನು ರಘುರಾಮನೆಂದು. ಅವನ ಬಗ್ಗೆ ರಾಯರಿಗಿದ್ದ ಅಭಿಪ್ರಾಯ ಅದಾವ ಗುಟ್ಟಿನ ಮಾತೂ ಇರಲಿಲ್ಲ. ಅವನ ಆತ್ಮಕತೆಯೇ ಅವನ ಮುಖಕ್ಕೆ ಮಸಿ ಬಳೆದಿದ್ದಿತು, ರಾಯರ ಮಾತಿನಲ್ಲಿ. ಓರ್ವ ಕ್ರಿಶ್ಚಿಯನ್ ಕನ್ಯೆಯನ್ನು ಮದುವೆಯಾಗಲು ಅವನು ಕಾಲೇಜಿನಲ್ಲಿದ್ದಾಗ ನಡೆಸಿದ ಸಂಚು, ಬಾವಿ ಹಾರಿಕೊಳ್ಳುತ್ತೇನೆಂದು ಅವನ ತಾಯಿ ಹಾಕಿದ ಬೆದರಿಕೆ, ಆಮರಣಾಂತ ಅವಿವಾಹಿತನಾಗಿಯೇ ಉಳಿಯುತ್ತೇನೆಂಬ ತೊಟ್ಟ ಹಟ ಮುಂತಾದ ಅನೇಕ ಸತ್ಯ ಸಟೆಯ ಕತೆಗಳು ಪಿಂಚಿನಿಖೋರರ ಸಂಜೆಯ ಸಭೆಯಲ್ಲಿ ಬಂದುಹೋಗಿದ್ದವು. ರಘುರಾಮನ ತಂದೆಯೇ ಈ ವಿಷಯಗಳನ್ನು ಅವರಿವರ

ಮುಂದೆ ಆಡಿದ್ದರು. ಸಾಲದುದಕ್ಕೆ ನಿರುದ್ಯೋಗಿಯಾಗಿದ್ದ ರಘುರಾಮ ಜೈ ಎಂದು ಕೂಗಿ ಜೈಲು ಕಂಡಿದ್ದ. ಇಂತಹವನ ಸಹವಾಸದಲ್ಲಿದ್ದ ತಮ್ಮ ಮಗ ಏನಾದಾನೆಂದು ವಿಸ್ಮಯಪಟ್ಟು ಉಮೇಶನಿಗೆ ಕಟ್ಟಾಜ್ಞೆ ಮಾಡಿದ್ದರು, ರಘು ರಾಮನನ್ನು ದೂರಿಡಬೇಕೆಂದು. ಅಂತಹ ರಘುರಾಮನೊಟ್ಟಿಗೆ ಕಾವೇರಿ ಗೇನು ಮಾತು ? ರಂಗರಾಯರ ಅಭಿಮಾನವನ್ನು ಕೆರಳಿಸಲು ಬೇರಿನ್ನೇನು ಬೇಕು? ತಲೆ ಕಾದು ತುಟಿ ಅದುರಿತು. ನಾಲಗೆ ಒಣಗಿತು. ಗೋಡೆಗೆ ಆತು ಜಗುಲಿಯ ಮೇಲೆ ಕುಳಿತು ಕಾವೇರಿಯ ಮೇಲೆ ಕೆಂಡ ಕಾರುವಂತೆ ನೋಡಿದರು.

"ಇಲ್ಯಾಕ ಕೂತದ್ದು ? " ಅಧಿಕಾರವಾಣಿಯಿಂದ ನುಡಿದರು. ಶಬ್ದ ಗಳಲ್ಲಿಲ್ಲದ ಅರ್ಥ ದನಿಯಲ್ಲಿತ್ತು. ಮಾತಿನಲ್ಲಿಲ್ಲದ ಅರ್ಥ ಮುಖದಲ್ಲಿ ಮೂಡಿತ್ತು. ರಾಯರು ಕೇಳಿದುದು ಬಹು ಸರಳ ಪ್ರಶ್ನೆ. ಕಾವೇರಿ ಯನ್ನು ಕೆರಳಲು ಏನಿದೆ ಆದರಲ್ಲಿ? ಆದರೆ — ಆದರೇನು ? ವೈಮನಸ್ಸು ವ್ಯಧೋರಲು ಒಳತೂರಿದಾಗ ಹಗ್ಗವೂ ಹೆಡೆಯೆತ್ತಿ ಕಡಿಯಲು ಬಂದಂತೆ ಭಾಸವಾಗುವದು ಅನುಭವಸಿದ್ಧವಾದ ಮಾತು. ಅವರಿರ್ವರ ಹೃದಯ ಗಳಲ್ಲಿ ಅಂಕುರಿಸಿ ಬಹುದಿನಗಳು ಗಮಕ್ಕೆ ಬಾರದೆ ಬೆಳೆದಿದ್ದ ವಿಷವೃಕ್ಷದ ನೆಳಲಲ್ಲಿಯೇ ಸಾಗಿದ್ದಿತು ಅವರ ಬಾಳು. ತಂತಮ್ಮ ಬಣ್ಣದ ಗಾಜಿನೊಳ ಗಿಂದ ಒಬ್ಬರನ್ನೊಬ್ಬರು ನೋಡುತ್ತಿದ್ದರು. ದಿನದಿನಕ್ಕೂ ಶಕ್ತಿ ಕುಗ್ಗುತ್ತಿದ್ದ ರಂಗರಾಯರಿಗೆ ಆತ್ಮವಿಶ್ವಾಸದ ಅಡಚಣೆ ಆಗಿದ್ದಿತು. ಉಕ್ಕುವ ಪ್ರಾಯದ ಕಾವೇರಿ ಇಳಿವಯಸ್ಸಿನ ರಾವಸಾಹೇಬರಿಗೆ ತಲೆಭಾರವಲ್ಲದೆ ಮತ್ತೇನು ? ಹಿಂದೆ ಬಿದ್ದ ಹಿರಿಹುದ್ದರಿ ಎಂದೋ ಸತ್ತಿದ್ದ ಬಲವನ್ನು ಸಹಾಯಕ್ಕೆ ಕರೆದು ಕೃತಕ ಆವೇಶದಲ್ಲಿ ಓಡುವಂತೆ ಓಡಿದ್ದರು ಹಿಂದೆ ಹಲವು ಬಾರಿ. ಆದರೆ ಮುಗ್ಗಲ ಓಟ ಹಿರಿಹುದ್ದರಿಯ ದುರ್ಬ ಲತೆಯನ್ನಷ್ಟೆ ಎತ್ತಿ ತೋರಿದ್ದಿತು. ರಾಯರ ಪ್ರಶ್ನೆ ಕಾವೇರಿಗೆ ಬರೆ ಕೊಟ್ಟಂತೆ ಆಯಿತು. ಇದೇ ಪ್ರಶ್ನೆ ನಾಗಮ್ಮನ ಬಾಯಿಂದ ಬಂದಿದ್ದರೆ ? ಉಮೇಶನೇ ಕೇಳಿದ್ದರೆ ? 'ಸುಮ್ಮನೆ ಕುಳಿತಿದ್ದೇನೆ' ಎಂದು ನಗುತ್ತ ಹೇಳಿ ಮಾತು ಮುಗಿಸಿಬಿಡುತ್ತಿರಲಿಲ್ಲವೆ ? ಆದರೆ ಈ ಪ್ರಶ್ನೆ ಬಂದುದು ತನ್ನ ಮುದಿ ಗಂಡನಿಂದ. ಪ್ರಶ್ನೆಯ ಹಿಂದಿದ್ದ ಭಾವಕ್ಕೆ ಕಾವೇರಿ ಕ್ಷ ಕಿರಣ

ಹಾಕಿದಳು. ಅಲ್ಲಿ ಅವಳಿಗೆ ಕಂಡುದು ಇಲ್ಲದ ಅನುಮಾನ, ಸಲ್ಲದ ಅಸೂಯೆ. ಕಾವೇರಿಯ ಆತ್ಮಗೌರವ ಸರ್ಪದಂತೆ ಬುಸ್ಸೆಂದಿತು.

"ಮತ್ತೆಲ್ಲಿ ಕೂಡಬೇಕು ?"

ಮಾತಿನ ಚಕಮಕಿ ಆಯಿತು ನಿಮಿಷಾರ್ಧದಲ್ಲಿಯೇ. ವಾತಾವರಣ ಕಾವೇರಿತು. ದುಡುಕಿನ ಮಾತುಗಳು ಕಾವೇರಿಯ ಬಾಯಿಂದ ಬಂದಾಗ ಅವಳ ಕಡೆ ನೋಡುವ ಧೈರ್ಯ ರಾಯರಿಗಾಗಲಿಲ್ಲ. ಒಳಹೋಗಿ ತಲೆಗೆ ಕೈಕೊಟ್ಟು ಮಲಗಬೇಕೆಸಿಸಿತು ಅವರಿಗೆ. ಆದರೆ ಈಗ ಮಾತು ಮುಗಿಸುವದು ಸೋಲನ್ನು ಒಪ್ಪಿ ಬರೆದುಕೊಟ್ಟಂತೆಯೇ. ಅವರ ದುರಭಿಮಾನ ಕೆರಳಿತು.

"ಇದೀಗ ಇಲ್ಲಿ ಬಂದವನ್ಯಾರು ?" ಅವಳ ಅಧಿಕಾರಯುಕ್ತ ಗಂಡ ತಾವೆಂಬ ಅರಿವನ್ನು ಕಾವೇರಿಗೆ ಉಂಟುಮಾಡಲು ದನಿಯಲ್ಲಿ ಗಡಚನ್ನು ತೋರಿದರು.

"ರಘುರಾಮ."

"ಅವನ ಸರಿ ಏನೇ ಮಾತು ನಿನಗೆ? ಅವನ ಕತಿ...."

"ನನಗ್ಯಾಕ ಬೇಕು ಅವನ ಕತಿ, ನನ್ನ ಕತೀನೆ ನನಗೆ ಗುಡ್ಡಾಗಿದೆ" ನಡುವೇ ಬಾಯಿ ಹಾಕಿದಳು.

"ಎದ್ದು ವಳಗ್ಯಾಕೆ ಬರಲಿಲ್ಲ ನೀನು, ಅವನು ಬಂದ ಕೂಡಲೆ ?"

"ಅವ್ವಯ್ಯಾ, ತಿಂತಿದ್ನೇನು ಅವನು ನನ್ನ ?" ದನಿಯಲ್ಲಿ ಅಣಕು. ಪರ ಪುರುಷರು ಮನೆಗೆ ಬಂದಾಗ ಬಾಗಿಲ ಹಿಂದೆ ನಿಂತ ಕೂಡಲೆ ಪ್ರಸನ್ನವಾಗುವ ಪತಿವ್ರತಾ ಧರ್ಮಕ್ಕೆ ಕಾವೇರಿ ಹುಡುಕಾಡಿರಲಿಲ್ಲ.

ರಾವಸಾಹೇಬ ರಂಗರಾಯರಿಗೆ ಅವಮಾನವನ್ನು ನುಂಗಿಕೊಳ್ಳುವದು ಆಗದ ಮಾತು. ಅದೂ ಓರ್ವ ಸ್ತ್ರೀಯಿಂದ ! ತಮ್ಮ ಹೆಂಡತಿಯಿಂದ ! ರೂಪಾಯಿಗಳನ್ನು ಸುರುವಿ ತಂದ ಕೈಕೆಳಗಿನ ಕುಲಕರ್ಣಿಯ ಮಗಳಿಂದ ! ಅರವತ್ತು ವರ್ಷಗಳು ಅರಿಯದ ಅವಮಾನಕ್ಕೆ ಇಂದು ಗುರಿಯಾಗಬೇಕಾಯಿತೆ ? ಸ್ತ್ರೀಯಳಿಗೆ ಸಾಕ್ಷಾತ್ 'ಪತಿ ದೇವೋ ಭವ' ಆಗಿದ್ದ ಗಂಡನಿಗೆ ಗೌರವ ಬೇಡವೆ? ಮನೆಯ ಹೊರಗೆ ಅವರಿಗೆ ಇರುವ ಗೌರವಕ್ಕೆ ಮನೆಯಲ್ಲಿ ಗೌರವ ಬೇಡವೆ ? ರಾಯರ ಹಣೆ ಬೆವರಿತು. ಉಗ್ರ

ರೂಪಿಗಳಾದರು. ಕಣ್ಣಲ್ಲಿ ಕೋಪ ಉಕ್ಕಿ ಬಂದಿತು. ಬಣ್ಣ ಮಾಸಿದ ಮೀಸೆಯನ್ನು ದಂತವೈದ್ಯನ ಹಲ್ಲಿನಿಂದ ಕಡಿದರು. ಆವೇಶದಿಂದ ಮೈದೂಗಿ ಮುಂದೆ ಹೆಜ್ಜೆ ಇಟ್ಟರು. ಕಾವೇರಿಯ ಮುಖ ದುರುದುರು ನೋಡಿದರು. ಅಲ್ಲಿ ಅವರಿಗೆ ಬೇರೇನೂ ಕಾಣುವಂತಿರಲಿಲ್ಲ. ಸಡ್ಡು ಹೊಡೆದು ಯುದ್ಧಕ್ಕೆ ನಿಂತಂತೆ ಕಂಡಿತು. ದೇಹಶಕ್ತಿ ಕುಗ್ಗಿದರೂ ಮನದ ಒಲವು ಮಡಿದಿದ್ದರೂ ಗಂಡನೆಂಬ ಧೈರ್ಯದ ಬಲ ಮಾತ್ರ ಆಗ ರಂಗರಾಯರಿಗೆ ಬೆನ್ನು ಚಪ್ಪರಿಸಿತು. ಓರ್ವ ಅಬಲೆಯ ಕೈಯಿಂದ ತಮ್ಮ ಆತ್ಮಗೌರವವನ್ನು ಕಸಿದುಕೊಳ್ಳಬೇಕಾಯಿತು. ಬಾಹುಬಲವನ್ನು ಮೀರಿದ್ದಿತು ಮನೋಬಲ.

"ಆ, ಮಾತಿಗೆ ಮಾತು ಆಡ್ತೀಯಾ?" ಎನ್ನುತ್ತ ಮೇಲೆ ಕೈ ಎತ್ತಿದರು. ಎತ್ತಿದ ಕೈ ಕಾವೇರಿಯ ಗಲ್ಲಕ್ಕೆ ಇಳಿಯಿತು. ಆತ್ಮರಕ್ಷಣೆಯ ಸಹಜಪ್ರವೃತ್ತಿಯಿಂದ ಕಾವೇರಿಯ ಕೈ ಅಡ್ಡ ಬಂದಿತು. ಒಂದೇ ಕೈಯಲ್ಲಿ ರಾಯರೆರಡೂ ಕೈಗಳನ್ನು ಹಿಡಿದಳು. ಬಿಡಿಸಿಕೊಳ್ಳಲು ಹೆಣಗಾಡಿದರು ಆಗ ರಾಯರಿಗಾದುದು ತಮ್ಮ ದುರ್ಬಲತೆಯ ಅರಿವು! ಕುಸ್ತಿ ಹಿಡಿಯುವದು ರಾವಸಾಹೇಬರ ಕ್ಷೇತ್ರವಲ್ಲ. ಚೂಟಿಗಳನ್ನರಿಯದ ರಾಯರು ಜೋಲಿ ತಪ್ಪಿ ನೆಲಕ್ಕೆ ಬಿದ್ದರು. ಕಟ್ಟೆಯ ಕಲ್ಲು ಬಡಿದು ಹಣೆಯಿಂದ ರಕ್ತ ಚಿಮ್ಮಿತು. ಚಟ್ಟನೆ ಚೀರಿ ಕಾವೇರಿ ರಂಗರಾಯರನ್ನು ಎಬ್ಬಿಸಲು ಹೆಣಗಾಡಿದಳು. ಅಡಿಗೆಮನೆಯಿಂದ ಓಡಿಬಂದ ನಾಗಮ್ಮ "ಇದೇನೇ ಕಾವೇರಿ, ಅನ್ಯಾಯ" ಎಂದು ಕಕ್ಕಾಬಿಕ್ಕಿ ನೋಡುತ್ತ ನಿಂತಳು. ಪಕ್ಕದ ಮನೆಯವರು ಗುಂಪು ಸೇರಿ ರಾಯರನ್ನು ಹಾಸಿಗೆಯಲ್ಲಿ ಮಲಗಿಸಿ ಮನೆಗಳಿಗೆ ಹೊರಟರು. ಏನೂ ತೋಚದೆ ಕಾವೇರಿ ಮಾತ್ರ ಬಿಕ್ಕಿ ಬಿಕ್ಕಿ ಅತ್ತು ಮಲಗಿದಳು. ಊಟಕ್ಕೆ ಉಮೇಶನ ಹಾದಿ ಕಾದು ಬೇಸತ್ತು ನಾಗಮ್ಮ ಅಡಿಗೆ ಮನೆಯಲ್ಲಿ ಬಂಡೆಯ ಮೇಲೆಯೆ ಅಡ್ಡಾದಳು. ಬೆಳಗಿನಲ್ಲಿ ಊರಲ್ಲೆಲ್ಲವೂ ಸುದ್ದಿ ಹರಡಿತು. ರಘುರಾಮ ಕಾವೇರಿ ಇಬ್ಬರೂ ರಂಗರಾಯರ ಕೈಗೆ ಸಿಕ್ಕರೆಂತಲೂ ರಘುರಾಮ ಗೋಡೆ ಜಿಗಿದು ಪರಾರಿಯಾದ ಮೇಲೆ ಕಾವೇರಿಯೇ ರಾಯರನ್ನು ಗಾಯಗೊಳಿಸಿದಳೆಂತಲೂ ಕಣ್ಣಿಂದ ನೋಡಿದ ದೊಡ್ಡ ಮನುಷ್ಯರೇ ಗುಜುಗುಟ್ಟಿದರು. ರಾಯರು ಮೂರ್ಛೆಯಿಂದಲೋ ನಿದ್ರೆಯಿಂದಲೋ ಬಹು ನಸುಕಿನಲ್ಲಿಯೇ ಎಚ್ಚೆತ್ತರು. ಅಷ್ಟು ಜಾಗ್ರತೆ ಏಳಲು ಕಾಲುಬದಿ

ಮಲಗಿದ್ದ ಬ್ರಿಟ್ಟ್ಯಾಳೂ ಕಾರಣವಾಯಿತು. ನಾಯಿಯ ಕುಯ್ಯ್ಕಾರ ನಿದ್ರೆ ಭಂಗ ಮಾಡಿತು. ನಿನ್ನಿನ ದೃಶ್ಯಗಳು ಒಂದೊಂದೇ ನೆನಪಿಗೆ ಬಂದು ಮಾಯಾದೀಪವಲ್ಲಿ ಬಂದಂತೆ ಕಣ್ಣ ಮುಂದೋಡಿದವು. ಕಣ್ಣು ಮುಚ್ಚಿ ಕೊಂಡರು ಕಿವಿ ಮುಚ್ಚುವದೆಂತು ? ಬ್ರಿಟ್ಟ್ಯಾಳ ಚೀರಾಟ ಜೋರಾಯಿತು. ಎದ್ದು ಕುಳಿತರು. ನಿದ್ರೆಯ ವಜೆಯೂ ಕಣ್ಣಿನಲ್ಲಿರಲಿಲ್ಲ. ಮಂಚದಿಂದ ಇಳಿದು ಬಂದು ಬ್ರಿಟ್ಟ್ಯಾಳ ಮೇಲೆ ಕೈಯಾಡಿಸಿದರು. ಅದೇಕೋ ವಾಡಿಕೆಯಂತೆ ಬಾಲವನ್ನಾಡಿಸಿ ಕೈ ನೆಕ್ಕಲಿಲ್ಲ. ಗುರ‍್ರೆಂದು ರಾಯರನ್ನು ನೋಡಿ ಪುನಃ ಕುಯ್ಗುಟ್ಟಿತು. ಸಾಮರ್ಥ್ಯವಿದ್ದರೆ ಸರಪಣಿ ಹರಿದು ಹೊರ ಗೋಡುವೆನೆಂಬ ನಿರ್ಧಾರ ಅದರ ಕಣ್ಣಲ್ಲಿ ಕಂಡಿತು. ಒಂದೂ ಅರ್ಥವಾಗ ಲಿಲ್ಲ ರಾಯರಿಗೆ. ಮೇಜಿನ ಮುಂದೆ ಬಂದು ನಿಂತರು. ಬ್ರಿಟ್ಟ್ಯಾಳ ತಾಯಿಯ ಒಡತಿಯಾದ ದೊರೆಸಾನಿ ಉದಕಮಂಡಲದಿಂದ ಕಳುಹಿದ ಪುಸ್ತಕವನ್ನು ಕಡೆಗೆ ತೆಗೆದರು. " ನಿನ್ನ ನಾಯಿ ಮತ್ತು ಅದರ ಲೈಂಗಿಕ ಚೇಷ್ಟೆ " ಎಂಬ ಪ್ರಕರಣವನ್ನು ಎರಡೆರಡು ಬಾರಿ ಓದಿ ನೋಡಿದರು. ಅವೇ ಲಕ್ಷಣಗಳು. ರಾಯರಿಗೆ ಬ್ರಿಟ್ಟ್ಯಾಳ ಸದ್ಯದ ಸ್ಥಿತಿಯ ಅರಿವಾಯಿತು. ಮುಖದಲ್ಲಿ ಮೂಡ ಲಾರದ ನಗುವೊಂದು ಹೃದಯದಲ್ಲಿ ಹೊಕ್ಕಿತು. ಬ್ರಿಟ್ಟ್ಯಾಳಿಗೆ ಆಗಬೇಕಾದುದು ವಿಶಿಷ್ಟ ಆಹಾರಗಳಲ್ಲ, ಸಿಂಗಾರಗಳಲ್ಲ. ಇನ್ನು ತಡೆದರೆ ಒಡೆಯನನ್ನೂ ಕಡಿಯುವಳು. ಮುಂಚಿತವಾಗಿ ಆರ್ಯರು ನಿಶ್ಚಯಿಸಿದ್ದ ಜೋಡಿಗಾಗಿ ರಾಯರು ಕೂಡಲೆ ಪತ್ರವ್ಯವಹಾರವನ್ನು ನಡೆಸಿದರು. ಇದು ತಿಳಿದಿದ್ದರೆ ಕಾವೇರಿಗೆ ನಗು ಬರುತ್ತಿದ್ದಿತೇನೋ !

## ೯. ಈಸಬೇಕು ಇದ್ದು ಜಯಿಸಬೇಕು.

ಮಲ್ಲಾರಿಭಟ್ಟರ ವಿಕಟ ನಗುವೊಂದರಲ್ಲಿರುವ ಬಲ ಹತ್ತು ಮುನಿ ಗಳ ಶಾಪದಲ್ಲಿಯೂ ಇರಲಿಕ್ಕಿಲ್ಲ. ಅರಿಷಡ್ವರ್ಗಗಳನ್ನು ಗೆದ್ದ ಮಹಾ ಸಾತ್ವಿಕ ವೇದಾಂತಿಯಂತೆ ವಿರಕ್ತನ ನಗು ನಗುವಾಗಲೂ ಮನಸ್ಸಿನಲ್ಲಿಯೇ ಮಹಾ ಕ್ರೋಧಕ್ಕೆ ನೀರೆರೆಯುತ್ತಿದ್ದರು. ದುಡುಕಿನಲ್ಲೆರಡು ಮಾತುಗಳ ನ್ನಾಡಿ ಕೆಡಕು ಬುದ್ಧಿಯನ್ನು ಬಟ್ಟಬಯಲಿಗೆಳೆದುಕೊಳ್ಳುವ ದಡ್ಡತನ

ಆವರದಲ್ಲ. ನಾಣ್ನುಡಿಯಾದ ನಾಗರಹಾವಿನ ರೋಷ ಮನೆಮಾಡಿಬಿಟ್ಟಿತು ಮಲ್ಲಾರಿಭಟ್ಟರ ಮನಸ್ಸಿನಲ್ಲಿ ಉಮೇಶನ ಬಗ್ಗೆ. ಕಾರ್ಯಸಾಧನೆಗಾಗಿ ಕತ್ತೆಯ ಕಾಲನ್ನೂ ಹಿಡಿದು ನೋಡಿದ್ದರು. ಕೀಳು ಮೇಲೆಂಬ ಹುಚ್ಚು ಭಾವನೆಗಳಿಗೆ ವಶರಾಗದೆ ಒಂದೇ ಮಂತ್ರದಿಂದ ಎರಡು ಕಾಯಿಗಳನ್ನು ಉದುರಿಸಲು ಎಣಿಸಿದರು. ಉಮೇಶನಿಂದ ಆಫೀಸಿನಲ್ಲಿ ಆಗಬೇಕಾದ ಕೆಲಸ ಗಳು ಬಹಳ ಇದ್ದವು ಭಟ್ಟರಿಗೆ. ಹೇಗೂ ಕೈಲಿದ್ದಿತು, ಕುಸುಮಳ ವಶೀ ಕರಣ ಮಂತ್ರ. ಆವಳಿಗೆ ಒಂದು ತಾತ್ಪೂರ್ತಿಕ ವಿವಾಹವೂ ಆದಂತಾ ಯಿತು ಎಂದು ಬಗೆದರು. ಉಮೇಶನ ಸಂಸಾರದ ನೀರಸ ಜೀವನದ ಪರಿಚಯ ಭಟ್ಟರಿಗೆ ಪೂರ್ಣ ಇದ್ದಿತು. ನಾಗಮ್ಮ ಉಮೇಶ ಮೆಚ್ಚಿ ತಂದ ಹೆಣ್ಣಲ್ಲವೆಂಬುದು ತಿಳಿದ ಮಾತು. ಹಳೆಯ ತರಹದ ಮನೆಯ ಹೆಂಡತಿಯ ಬಗ್ಗೆ ಅವನ ಪ್ರೇಮವೂ ಅಷ್ಟಕ್ಕಷ್ಟೆ ಎಂಬುದು ಎಲ್ಲರಿಗೂ ಗೊತ್ತಿದ್ದಿತು. ಇದರ ಉಪಯೋಗವನ್ನು ಕುಸುಮಾ ಪಡೆದರೆ ಉಮೇಶ ಪೂರ್ತಿ ತಮ್ಮ ಕೈಗೊಂಬೆಯಾಗುವನೆಂದು ಭಟ್ಟರು ಹಾಕಿದ ಎಣಿಕೆ ತಾಳ ತಪ್ಪಿದ್ದಕ್ಕೆ ರೋಷ ತಾಳಿದರು. ಅವರು ಸೆರೆ ಕುಡಿದು ಕುಳಿತಾಗಲೆಲ್ಲ ಅವರ ಕಣ್ಣು ಮುಂದೆ ಸದಾ ನಿಲ್ಲುತ್ತಿದ್ದುದು :ಅಣಕಿಸ ನಗುವ ಉಮೇಶನ ಚಿತ್ರ. ತಮ್ಮ ಮನೋಸ್ಥಿತಿಯನ್ನು ಮರೆಮಾಜಿ ಉಮೇಶನೊಟ್ಟಿಗೆ ಎಂದಿನಂತೆ ವಿನೋದದ ಮಾತುಗಳನ್ನೇನೋ ಆಡುತ್ತಲೇ ಬಂದರು. ಆದರೆ ಕುಶಲರಾದ ಭಟ್ಟರು ಸುತ್ತಲೂ ಬಲೆ ಹೆಣೆಯುತ್ತಿದ್ದುದು ಹಾಲುಗಲ್ಲದ ಉಮೇಶನಿಗೆ ತಿಳಿಯುವ ದಾದರೂ ಹೇಗೆ? ಕತ್ತಲಾದ ಮೇಲೆ ಮ್ಯಾನೇಜರರ ಮನೆಯವರೆಗೂ ಹೋಗಿ ಮಲ್ಲಾರಿಭಟ್ಟರು ಮನಮುಟ್ಟಿ ಮಾತನಾಡಿ ಬಂದರು. ಉಮೇಶನ ಮೇಲಿನ ದೂರು ಮ್ಯಾನೇಜರರಿಗೂ ನಿಜವೆನಿಸಿತು.

"ನೀವ್ಯಾಕೆ ಸುಳ್ಳಾಡ್ತೀರಿ. ಬಿಡ್ರಿ, ಪಾಪ! ಆ ಹುಡುಗನ ಚಾಳೀನೇ ಹಾಗದೆ ಮೊದಲಿಂದ. ನಾ ಬಲ್ಲೆ ಅವನ್ನ. ಅವನಪ್ಪನ ಗುಣ ಅವಗೆಲ್ಲಿ ಬಂದೀತು" ಎಂದು ಮ್ಯಾನೇಜರರೇ ಆಡಿದರು. ಮ್ಯಾನೇಜರರ ಹೆಂಡತಿ ಯನ್ನೂ ಮಾತನಾಡಿಸಿಕೊಂಡು ಭಟ್ಟರು ಮನೆಗೆ ಬಂದರು.

ಕಾಗೆ ಕೂಡುವ ಹೊತ್ತಿಗೆ ಟೊಂಗೆಯೂ ಮುರಿಯಿತು. ಹಲವಾರು ಕಾರಣಗಳಿಂದ ಉಮೇಶ ತನ್ನ ಕೆಲಸದಲ್ಲಿ ಹಿಂದೆ ಬಿದ್ದ. ಸಾಕಷ್ಟು

ಶ್ರದ್ಧೆ ವಹಿಸಲಾಗಲಿಲ್ಲ. ಮನಶ್ಶಾಂತಿಗೆ ಅಡಚಣೆಯಾಗಿ ತಲೆ ಮುನ್ನೋಡ ದಾಯಿತು. ದಾಸಕೂಟದಲ್ಲಿ ಬಂಡವಾಳವಾದ ಕೀಳರಿಮೆ ಇಲ್ಲದೆಯೇ ಉಮೇಶ ಇಲ್ಲಿಯ ವರೆಗೂ ಬಾಳಿದುದು ಬರೀ ದುಡಿತದಿಂದ. ಅದರಲ್ಲಿಯೂ ದುರ್ಬಲತೆ ಬಂದರೆ ಮುಂದೇನು ಗತಿ ? ಅವನಿಗಿನ್ನೆಲ್ಲಿಯ ಮನ್ನಣೆ ? ಮನಶ್ಶಾಂತಿಯನ್ನು ನುಂಗಿ ನೀರು ಕುಡಿಯಲು ಸಹಸ್ರಾರು ಕಾರಣಗಳಿರ ಬಹುದು. ಆದರೆ ಬುದ್ಧಿಯ ಮಟ್ಟದಲ್ಲಿ ಕೆಳಗಿನವರಾದರೂ ಅಧಿಕಾರ ವರ್ಗದರಲ್ಲಿ ಮೇಲಿನವರಾದವರಿಗೆ ಆ ಸಹಸ್ರ ಕಾರಣಗಳ ಗೊಡವೆಯಾದರೂ ಏಕೆ ಬೇಕು ? ಅವನಿಗೆ ವೇತನವನ್ನು ಕೊಡುವದು ಅವನು ಮಾಡುವ ಕೆಲಸಕ್ಕಾಗಿ ಮತ್ತು ಮುಖ್ಯವಾಗಿ ಬೇರಿನ್ನಾವ ಕೆಲಸಗಳನ್ನೂ ಮಾಡದಿರ ಲಿಕ್ಕಾಗಿ. ಉಮೇಶನಿಗೆ ಆಫೀಸಿನಲ್ಲಿ ಬಾಳು ಸಾಕಷ್ಟು ಗೋಳಿಗೀಡಾ ಯಿತು. ಮೇಲಿಂದ ಮೇಲೆ ಮಂತ್ರಪುಷ್ಪಗಳು ಮಳೆಗರೆದವು. ಕಾಗದಗಳ ಮೇಲೆ ಒದೆಗಳು ಸುರುವಾಗಿ ಚಿಕ್ಕಪುಟ್ಟ ತಪ್ಪುಗಳಿಗೂ ಕಪ್ಪು ಗುರುತುಗಳು ಬರಹತ್ತಿದವು. ಸಾಚ ಉಮೇಶನಿಗೆ ಸಮಯಾನುಸಾರ ಮಲ್ಲಾರಿಭಟ್ಟರು ಮಾತ್ರ ಎದೆಯಲ್ಲಿ ಚುಚ್ಚುವಂತೆ ಒಂದೆರಡು ಮಾತುಗಳನ್ನಾಡಿ ಕುಳಿತು ಬಿಡುತ್ತಿದ್ದರು.

ಇನ್ನು ಮನೆಯ ಬಾಳು. ಇಬ್ಬರು ಜನ್ಮದ್ವೇಷಿಗಳು ವಿಧಿಯ ಆಜ್ಞೆಯನ್ನು ಮೀರಲಾರದೆ ಒಂದೆಡೆಯಲ್ಲಿಯೇ ಇದ್ದಂತೆ ಕಾವೇರಿ ಮತ್ತು ರಂಗರಾಯರು ಒಂದೇ ಮನೆಯಲ್ಲಿ ಕಾಲ ತೆಗೆಯುತ್ತಿದ್ದರು. ಮಾತು ಕತೆಗಳು ಪೂರ್ತಿ ನಿಂತು, ಆದಾವ ಸಂಬಂಧವೂ ಅವರೀರ್ವರ ಮಧ್ಯೆ ಉಳಿದಿರಲಿಲ್ಲ. ಕಾವೇರಿಯಂತೂ ಕತ್ತಿ ಕಿತ್ತು ನಿಂತ ಕಾಳಿಯಂತಿದ್ದಳು. ರಾಯರು ಯಾವ ಪ್ರಸಂಗಕ್ಕೂ ಹೋಗದೆ ಗರ್ಭಿಣಿ ಬ್ರಿಟ್ಟಾಳ ಪೋಷಣೆ ಯಲ್ಲಿಯೇ ದಿನ ಕಳೆಯುತ್ತಿದ್ದರು. ಕಾಣಲು ಬಂದ ಒಬ್ಬಿಬ್ಬ ಹಳೆಯ ಗೆಳೆಯರಿಗೂ ಕಣ್ಣುತಪ್ಪಿಸಿ ಮನೆಯಲ್ಲಿಯೇ ಮೂಲೆ ಹಿಡಿದಿದ್ದರು. ಇತ್ತ ನಾಗಮ್ಮ ಅಡಿಗೆಯ ಆಳಾಗಿ ಮನೆಯ ಕೆಲಸದಲ್ಲಿಯೇ ಮುಪ್ಪಾಗಿದ್ದಳು. ಒಂದು ದಿನ ಬೆಳಗಿನ ಕಾಫಿ ತಡವಾಯಿತು. ಆಗ ಎಲ್ಲರೂ ನಾಗಮ್ಮನ ವಿಚಾರಣೆಗೆ ಬಂದರು. ಬೆಳಗಿನ ಜಾವದಲ್ಲಿ ಹಾಸಿಗೆಯಿಂದೇಳುವದು ಅವ ಳಿಂದಾಗುತ್ತಿರಲಿಲ್ಲ. ಮೈ ದೂಡಿದಂತಾಗಿ ಕುಳಿತಲ್ಲಿಯೇ ಉಬ್ಬಳಿಸಿ ತಲೆಗೆ

ಕೈ ಕೊಟ್ಟು ಗೋಡೆಗೆ ಆತು ಕುಳಿತುಕೊಳ್ಳುತ್ತಿದ್ದಳು. ದಿನವೇರಿದಂತೆಲ್ಲ ದೇಹಸ್ಥಿತಿ ಕೊಂಚ ಮೇಲೆನಿಸಿ ಮನೆಗೆಲಸವನ್ನು ಹೇಗೋ ಮಾಡಿಕೊಳ್ಳು ತ್ತಿದ್ದಳು. ಬೆಳಗಿನ ಕಾಯಿಲೆ ನಿತ್ಯದ ಕತೆಯಾಯಿತು. ಉಮೇಶ ಡಾಕ್ಟರರ ಬಳಿ ಹೋಗಿ ಬಾಟ್ಲಿಯೊಂದನ್ನು ಮುಂದಿಕ್ಕಿ ರೋಗಿಯ ಲಕ್ಷಣ ಗಳನ್ನೆಲ್ಲ ವಿವರಿಸಿದನು. ತಲೆ ಬೆಳ್ಳಗಾದ ಮೈಸೂರ ಡಾಕ್ಟರರು ಹಿರಿಯ ರಾದರೂ ಕಿರಿಯ ಹೃದಯವನ್ನು ಕಾಯ್ದುಕೊಂಡವರಂತೆ ನಗೆಯಾಡಿ, ಬಾಟ್ಲಿ ಯನ್ನು ಉಮೇಶನ ಕಿಸೆಗೆ ಹಾಕಿ “ ಔಷಧಿ ಅವರಿಗೆ ಬೇಡ ಕಣೋ ಉಮೇಶ, ನಿನಗೆ ಬೇಕು ” ಎಂದು ಮನೆಗೆ ಕಳುಹಿದರು.

ನಿತ್ಯಜೀವನದ ಖರ್ಚಿಗೇ ಹಣವನ್ನು ಈಡುಮಾಡದಾಗಿದ್ದ ಉಮೇಶ ನಿಗೆ ನಾಗಮ್ಮನ ಹೆರಿಗೆಯೊಂದು ಗಂಡಾಂತರವೆನಿಸಹತ್ತಿತು. ಹಣದ ಅಡಚಣೆ. ಮನೆಯಲ್ಲಿ ಎಲ್ಲರ ಅಸಹಕಾರ. ಆಫೀಸಿನಲ್ಲಿ ಕಿರುಕುಳ. ಕಾವೇರಿ ರಘುರಾಮರ ವಿಷಯ ಊರ ಬಾಯಲ್ಲಿ ಬಿದ್ದು ಗಾಳಿಸುದ್ದಿ ಯಾಗಿ ಉಮೇಶನ ಕಿವಿಗೂ ಹತ್ತಿತು. ಸಾವು ಬಾಳಿಗೆ ಉತ್ತರವಲ್ಲ ಎಂಬುದು ಉಮೇಶನ ನಂಬಿಕೆಯಾದ್ದರಿಂದ ಆತ್ಮಹತ್ಯದಂತಹ ಹೇಯ ವಾದ ಆಲೋಚನೆ ಅವನ ತಲೆಯಲ್ಲಿ ಬರಲಿಲ್ಲ. ಮುಂದೇನು ಎಂಬ ದೊಡ್ಡ ಪ್ರಶ್ನೆ ಚಿನ್ಹೆಯೇ ಕಣ್ಣು ಮುಂದೆ ನಿಂತಿತು. ಉತ್ತರ ಮಾತ್ರ ಎತ್ತ ನೋಡಿದರೂ ಶೂನ್ಯ. ಈ ಹೇಸಿ ಬಾಳಿನಿಂದ ಹೇಗಾದರೂ ಪಾರಾ ಗಲೇಬೇಕು ಎಂದು ಮನದಲ್ಲಿಯೇ ನಿರ್ಧರಿಸಿದ. ಆದರೆ ಅದಾಗುವದೆಂತು ? ಇದ್ದ ಕೊಂಚವನ್ನು ತಿಂದು ಕುಳಿತಾಯಿತು. ಬಂದ ಕೊಂಚವನ್ನು ಕುಳಿತು ತಿಂದಾಯಿತು. ನಾಗಮ್ಮನ ಸ್ತ್ರೀಧನವಾಗಿ ಬಂದಿದ್ದ ಚಿನ್ನ ಮಂಜಿನಂತೆ ಕರಗಿ ಮಾಯವಾಯಿತು. ಮೂರಾಣೆ ಬಡ್ಡಿಯ ಮಾರವಾಡಿಗಳೊಟ್ಟಿಗೆ ಬಳಗವನ್ನು ಬೆಳೆಸಿದ್ದಾಯಿತು. ಆದರೆ ಇದನ್ನು ತೀರಿಸುವ ಮಾರ್ಗವೇನೋ ಎಲ್ಲಿಯೂ ಕಾಣಲಿಲ್ಲ. ಇನ್ನೊಬ್ಬ ಹೆಂಡತಿಯನ್ನು ಮಾರಲು ಇದೇನು ಕಬ್ಬಿಗನ ಕಾಲವೇ ? ಕೈಹಿಡಿದ ಹೆಂಡತಿಗೆ ಕೈಕೊಟ್ಟು ಪಾರಾಗಲು ನಳ ಮಹಾರಾಜನ ಕಾಲವೇ ? ನಳನ ಕತೆಗೆ ನಾಯಕನಾದ ಶನಿಮಹಾರಾಜನೇ ಉಮೇಶನ ಈ ದುಃಖಮಯ ಜೀವನಕ್ಕೂ ಕಾರಣನಾಗಿರಬಹುದು. ಆದರೆ ತುಂಬಿದ ಅಡವಿಯಲ್ಲಿ ಹೆಂಡತಿಗೆ ಕಣ್ಣು ತಪ್ಪಿಸಿ ಓಡಿಹೋದ ನಳಮಹಾ

ರಾಜಸಿಗೆ ಮೆಚ್ಚಿ ಕೈತಟ್ಟಿದ ನಾಲ್ಕಾಣೆ ಪ್ರೇಕ್ಷಕವೃಂದ ಬರೀ ಮನೆಯಲ್ಲಿ ಮಡದಿಯನ್ನು ಬಿಟ್ಟು ಕಾಲ್ತೆಗೆವ ಉಮೇಶನನ್ನು ಮನ್ನಿಸಲು ಸಾಧ್ಯವೇ? ಹೆಂಡತಿಯನ್ನು ಸಾಕಲಾರದೆ ಕುಮರಿ ವನಕರು ಕತ್ತೆಗಳನ್ನು ಪಳಗಿಸಿ ಸಾಕು ವಂತೆ—ಮನೆಬಿಟ್ಟು ಓಡಿಹೋದ ಹೇಡಿ ಎಂದು ತೆಗಳವೆ? ತನ್ನ ತಂದೆಗೂ ತನ್ನ ತಂದೆಯ ಹೆಂಡತಿಯಾದ ಕಾವೇರಿಗೂ ಮತ್ತು ತನಗೂ ತನ್ನ ಹೆಂಡತಿಗೂ ಇದ್ದ ಅಥವಾ ಇಲ್ಲದಿದ್ದ ಸಂಬಂಧವನ್ನು ವಿಮರ್ಶಾತ್ಮಕ ದೃಷ್ಟಿ ಯಿಂದ ಪರಿಶೀಲಿಸಿದಾಗ ವಿವಾಹಪದ್ಧತಿಯೇ ಟೊಳ್ಳೆನಿಸಿತು ಉಮೇಶನಿಗೆ. ವಿಚಾರ ಸರಣಿ ನಾಗಾಲೋಟಬಿಟ್ಟಿತು. ಸಮಾಜದ ಪ್ರಗತಿಯಲ್ಲಿ ಸಹಸ್ರಾರು ಪದ್ಧತಿಗಳ ಸೃಷ್ಟಿಯಾಗಿರಬೇಕು. ಸಾಮಾಜಿಕ ಜೀವನದ ಹಿತ, ಸುಖ ಶಾಂತಿಗಳನ್ನು ಸಾಧಿಸಲು ವಿವಾಹಪದ್ಧತಿ ಆಚರಣೆಯಲ್ಲಿ ಬಂದಿರಬೇಕು. ಇಂದು ಆ ವಿವಾಹ ಮಾನವ ಬುದ್ಧಿಮಟ್ಟದಲ್ಲಿ ವಿಧಿಸಿದ ಒಂದು ಪದ್ಧತಿ ಮಾತ್ರ ಎಂಬ ಅರಿವನ್ನು ದಾಟಿ, ತಿಕೀಟಿಲ್ಲದೆ ದೇವಲೋಕವನ್ನು ಹೊಕ್ಕು ಪಾವಿತ್ರ್ಯತೆಯ ಮುದ್ರೆಯನ್ನೊತ್ತಿಸಿಗೊಂಡು ಮರಳಿ ಬಂದಿದೆ. ಅದೊಂದು ತಪ್ಪೆಂದು ಉಮೇಶನ ವಾದವಲ್ಲ. ಮಾನವಜೀವಿಗೆ ಉಪಯುಕ್ತವಾದವು ಗಳೆಲ್ಲವೂ ಈ ಮಡಿವಂತಿಕೆಯ ಮಟ್ಟಕ್ಕೇರುವದು ನಿತ್ಯಜೀವನದ ಅನುಭವ. ಗೋವು, ಗಂಗೆ, ಸೂರ್ಯ, ಅನ್ನ, ದೃಷ್ಟಾಂತಗಳು ಇವುಗಳೊಟ್ಟಿಗೆ ಹಾವು ಸಾವುಗಳೂ ಸೇರಿರುವದು ಬೇರೆ ಕಾರಣಗಳಿಂದ. ದೇವದತ್ತವೆಂಬ ವಿಶ್ವಾಸ ವನ್ನೆ ಬೇರಿಗಿಳಿಸಿಕೊಂಡ ವಿವಾಹಪದ್ಧತಿ ವಿಚಾರಶಕ್ತಿಯ ಒರೆಗಲ್ಲಿಗೆ ತಲೆ ಬಾಗಲೊಪ್ಪದೆ ಎದೆ ಸೆಟೆಸಿ ಇಂದು ನಿಂತಿದೆ. ಈ ಪದ್ಧತಿಯ ಅವತಾರದ ಕಾರಣಗಳು ಏನೇ ಇದ್ದರೂ ತನ್ನ ಗುರಿಯನ್ನು ಸಂಪೂರ್ಣ ಸಾಧಿಸಲಾರದೆ ಅದು ಒಪ್ಪಿಗೊಳ್ಳುವ ಸೋಲನ್ನಷ್ಟೇ ನೋಡಿದನು, ಉಮೇಶ. ಬೇರಿನ್ನಾವ ಪದ್ಧತಿ ಒಳಿತು ಎಂಬ ಪ್ರಶ್ನೆ. ಇಷ್ಟನ್ನು ಮಾತ್ರ ಉಮೇಶ ಒಪ್ಪಿಗೊಳ್ಳಲೇ ಬೇಕಾಯಿತು, ಸ್ವೇಚ್ಛಾಪ್ರವೃತ್ತಿಯ ಗಂಡಾಂತರಗಳನ್ನು ತಪ್ಪಿಸಿಗೊಳ್ಳಲು ಆದುದು ವಿವಾಹಪದ್ಧತಿಯ ಅವತಾರ. ಅಂತೂ ಪರಾರಿಯಾಗಿಯಾದರೂ ಪಾರಾಗಲೇಬೇಕು ಎಂಬುದು ಉಮೇಶನ ತಲೆಯಲ್ಲಿ ಕಟೆಯುತ್ತಿತ್ತು. ಆದರೆ ಹೋಗುವದೆಲ್ಲಿಗೆ? ಮಿಂಚಿನಂತೆ ಹೊಳೆಯಿತೊಂದು ಹೊಸ ಯೋಚನೆ. ದೇಶಭಕ್ತರ ಚಳವಳಿಯಲ್ಲಿ ದುಮುಕಿ ಜೇಲು ಸೇರುವದು

ಉತ್ತಮವಾದ ಕಳ್ಳ ಹಾದಿ. ಸರ್ವರೋಗ ನಿವಾರಣೆ. ಋಣಮುಕ್ತನಾಗ ಲಾರದೆ ದುಡ್ಡಿದ್ದ ದೊಡ್ಡಪ್ಪನ ಆಜ್ಞೆ ಮೇರೆಗೆ ಸಿವ್ಹಿಲ್ ಜೇಲನ್ನು ಕಾಣುವ ಮುನ್ನೆಯೇ ರಾಷ್ಟ್ರಭಕ್ತಿಯ ರಂಗಿನಲ್ಲಿ ಕೃಷ್ಣನ ಜನ್ಮಸ್ಥಾನಕ್ಕೆ ಅತಿಥಿ ಯಾಗಬಹುದು. ಆದರೆ ನಳನ ಬೆನ್ನು ಏರಿದ್ದ ಶನಿ ಅಲ್ಲಿಯೂ ಜಯ ಶೀಲನಾದ. ಉಮೇಶನ ದುರ್ದೈವ! ಕಾಂಗ್ರೆಸ್ಸು ಎಲ್ಲ ಬಗೆಯ ಕ್ರಾಂತಿ ಕಾರಕ ಚಳವಳಿಗಳನ್ನೂ ಬಿಟ್ಟು ಬರೀ ಖಾದಿ, ಹರಿಜನರ ಉದ್ಧಾರ, ಗ್ರಾಮೋದ್ಧಾರ ಮುಂತಾದ ಃರಸಪ್ಪೆಯ ಘಟನಾತ್ಮಕ ಕಾರ್ಯಕ್ರಮ ಗಳಲ್ಲಿ ಕೈ ಮಡಗಿದ್ದಿತು. ಕ್ರಿಸ್‌ಮಸ್ ದಿನಗಳು ಬ್ರಿಟಿಶರ ಹಬ್ಬದ ದಿನ ಗಳಾದ್ದರಿಂದ ಆಗ ಅವರಿಗೆ ತೊಂದರೆ ಕೊಡುವದು ಬೇಡ ಎಂದಂದು ಕೈ ಮುಚ್ಚಿ ಕುಳಿತ ಮಹಾತ್ಮರ ಮತವನ್ನು ಕಂಡು ದಿಗಿಲುಬಿದ್ದ ಬ್ರಿಟಿಶರು ಜಪಾನಿನೊಂದಿಗೆ ಯುದ್ಧದಲ್ಲಿ ತೊಡಗಿದ್ದಾರೆ. ಶತ್ರುವಿನ ಕಷ್ಟ ಸಂಕಟಗಳ ಅನುಕೂಲ ಪಡೆಯುವದು ಆಢ್ಯ ವೈರಿಯ ಧರ್ಮವಲ್ಲವೆಂದು ಮಿತ್ರರನ್ನೇ ಕಷ್ಟ ನಷ್ಟಗಳಲ್ಲಿ ದೂಡುವ ಜನರಿಗೂ ಯುದ್ಧನೀತಿಯನ್ನು ಸಾರಿದ ಮಹಾವಿಭೂತಿಗೆ ಮನದಲ್ಲಿಯೇ ವಂದಿಸಿದ. ವರಪ್ರಸಾದವನ್ನು ಪಡೆದ ಹಿರಣ್ಯಕಶಿಪುವನ್ನು ಕೊಲ್ಲಲು ಸಂಧ್ಯಾಸಮಯಕ್ಕಾಗಿ ಕಾದು ಕುಳಿತಿದ್ದ ನಾರಸಿಂಹ, ರಥದ ಚಕ್ರವನ್ನು ಎತ್ತುತ್ತಿದ್ದ ಕರ್ಣನ ಮೇಲೆ ಬಾಣ ಪ್ರಯೋಗ ಮಾಡಿಸಿದ ಶ್ರೀಕೃಷ್ಣ, ವಜ್ರಕಾಯವುಳ್ಳ ದುರ್ಯೋಧನನನ್ನು ಕೊಲ್ಲಿಸಲು ಊರುಭಂಗ ಮಾಡೆಂದು ಭೀಮನಿಗೆ ಗುಟ್ಟುಕೊಟ್ಟ ಪರಮಾತ್ಮ, ಜಲಂಧರನ ಜೀವ ತೆಗೆಯಲೋಸುಗ ಅವನ ಸಾಧ್ವಿಯ ಪಾತಿವ್ರತ್ಯವನ್ನೇ ಸೂರೆಗೊಳ್ಳಲು ಹೇಸದ ಸರ್ವೇಶ ಎಲ್ಲರೂ ಈ ನೀತಿಯನ್ನು ದಾಟಿದ್ದರು. ಇಂತಹ ನೀತಿಯನ್ನು ಇನ್ನೂ ಕಾಯ್ದುಕೊಂಡ ಮಹಾತ್ಮರ ನೆರಳಿನಲ್ಲಿ ತಂಗಲು ಬಂದಿದ್ದ ತನ್ನ ಕ್ಷುದ್ರತೆಗಾಗಿ ತಾನೇ ನಾಚಿ ತಲೆಬಾಗಿದ. ಬೇರಿ ನ್ನಾವ ಹಾದಿ ಕಟ್ಟಿಕೊಂಡವರನ್ನು ಬಿಟ್ಟೋಡುವದು ಎಂಬ ಯೋಚನೆಯ ಲ್ಲಿಯೇ ಊರ ಮುಂದಿನ ನಗರ ತೋಟದ ಬಳಿ ನಿಂತಿದ್ದ. ಕರೀ ಹಲ ಗೆಯ ಮೇಲೆ ಕಂಡ ಬಿಳೀ ದೊಡ್ಡ ಅಕ್ಷರಗಳು ಉಮೇಶನಿಗೆ ಜೀವ ದಾನ ಕೊಟ್ಟವು. ಎರಡೆರಡು ಬಾರಿ ಓದಿ ನೋಡಿದ. “ಆಹಾರ, ಉಡಿಗೆ, ಪ್ರವಾಸ, ಔಷಧೋಪಚಾರಗಳು ಉಚಿತ. ಸೇನೆಯನ್ನು ಸೇರಿ ದೇಶವನ್ನು

ಕಾಪಾಡಿರಿ " ಎಂಬ ಚರ್ಚಿಲರ ಘೋಷಣೆ ! ಕಾಪಾಡುವದು ಯಾರ ದೇಶ ವನ್ನು ? ತನ್ನನ್ನು ತಾನೇ ಕಾಪಾಡಿಕೊಳ್ಳುವದು ಹೆಚ್ಚು ಅಗತ್ಯವಿದ್ದಿತು ಉಮೇಶನಿಗೆ. ಕತ್ತಿಗೆ ಉತ್ತಮ ಕಬ್ಬಿಣ ಬೇಡ, ಯುದ್ಧಕ್ಕೆ ಉತ್ತಮ ಮನುಷ್ಯ ಬೇಡ ಎಂಬ ಮಾತು ನೆನಪಿಗೆ ಬಂದಿತು. ಆದರೂ ಉಮೇಶ ಎದುರು ಈಜುವ ಯೋಗ್ಯತೆ ಇಲ್ಲದೆ ಮುಂದಿನ ಮಾರ್ಗವನ್ನು ನಿಶ್ಚಯಿಸಿದ.

## ೧೦. ಕುಸುಮ ಅರಳಿದರೆ—

ಇದ್ದೊಬ್ಬ ಮಗನನ್ನು ಯುದ್ಧಕ್ಕೆ ಕಳಿಸುವಾಗ ಆಗಬೇಕಾದಷ್ಟು ಮನೋಯಾತನೆ ಮಾತ್ರ ರಾವಸಾಹೇಬ ರಂಗರಾಯರಿಗೆ ಆಗಲೇ ಇಲ್ಲ. ಉಮೇಶನ ರಾಜಭಕ್ತಿಗೆ ಮೆಚ್ಚಿ ಅವನ ಬೆನ್ನು ಚಪ್ಪರಿಸಿದರು. ಪ್ರತಿ ತಿಂಗಳೂ ಮನೆಗೆ ಹಣ ಕಳಿಸುವ ಏರ್ಪಾಟನ್ನು ಸರಕಾರದಿಂದಲೆ ಮಾಡಿಸಿಬಿಡೆಂದು ಸಲಹೆಯನ್ನೂ ಕೊಟ್ಟರು. ಉಮೇಶ ಒಳಬಂದಾಗ ಕಾವೇರಿ ಕೈಲಿದ್ದ ಪುಸ್ತಕ ವನ್ನು ಬಿಸುಟಿ ಮೈಮುರಿಯುತ್ತಿದ್ದಳು.

" ನಾನಂತೂ ಮಿಲಿಟರಿ ಸೇರಿಬಿಟ್ಟೆ. "

" ಜೀವ ಅಷ್ಟು ಬ್ಯಾಡಾತೇನೋ ಉಮೇಶಾ ನಿನಗೂ ? "

" ಬ್ಯಾಡಾತಲ್ಲ, ಅಷ್ಟು ಬೇಕಾತು ಅನ್ನು. "

" ನಿಜ ಅಲ್ಲ ಹೌದಲ್ಲಪಾ ಉಮೇಶ, ಮತ್ತೆ ? " ದನಿಯಲ್ಲಿ ಕಾತರ ಸೇರಿದ್ದಿತು.

" ನಿಜ ಯಾಕಲ್ಲ? ಇಲ್ಲಿ ನೋಡು ರೈಲ್ವೆ ಪಾಸು " ಎಂದು ಉದ್ದನ ಕಾಗದವೊಂದನ್ನು ಕಿಸೆಯಲ್ಲಿಂದ ತೆಗೆದ.

" ನಾಗೂ ಒಪ್ಪಿದಳೇನೋ ಇದಕ್ಕೆ ? "

" ಆಕಿನ್ನ ಇನ್ನೂ ಕೇಳಿಲ್ಲ. "

" ಕೇಳೋದೂ ಅವಸರಿಲ್ಲ, ಅಲ್ಲೆ ? " ಪ್ರಶ್ನೆಯ ಹಿಂದಿನ ಚುಚ್ಚುವ ಅರ್ಥವನ್ನು ಮಾಡಿಕೊಳ್ಳುವದು ಉಮೇಶನಿಗೆ ಬೇಡೆನಿಸಿತು. ಸ್ತ್ರೀಯ ಸ್ಥಾನ ಮಾನ ಸರಿಸಮಾನತೆ ಹಕ್ಕುಗಳ ಬಗ್ಗೆ ತಾನು ಕಾಲೇಜಿನಲ್ಲಿದ್ದಾಗ ಮಾಡಿದ ಭಾಷಣಗಳು ನೆನಪಿಗೆ ಬಂದು ತಲೆಬಾಗಿದ.

"ಆಕಿನ್ನೇನು, ಈಗ ಒಪ್ಪಿಸ್ತೀನಿ ಒಂದು ನಿಮಿಷದಾಗೆ" ಎಂದು ನುಡಿಯುವಾಗ, ಮಾಡಿದ ತಪ್ಪನ್ನು ತಿದ್ದಿಕೊಳ್ಳಲು ಹಾತೊರೆಯುವವನ ಮುಖವಾದಂತಾಯಿತು ಉಮೇಶನದು.

"ನಮ್ಮನ್ನೂ ತೊಗೊಳ್ತಾರೇನೋ ಉಮೇಶ, ಯುದ್ಧಕ್ಕೆ?" ಅರ್ಥಂಬರ್ಧವಾಗಿ ಕಿವಿಗೆ ಬಿದ್ದ ಕಾವೇರಿಯ ಮಾತಿಗೆ ಉತ್ತರ ಕೊಡದೆ ಉಮೇಶ ಅಡಿಗೆ ಮನೆಯಲ್ಲಿ ಒಳನಡೆದ.

ಮನೆಯಲ್ಲಿಯೇ ಈ ಮಹಾಯುದ್ಧ ನಡೆದಿರುವಾಗ ಹೊರಗಿನ ಯುದ್ಧ ನನಗೇಕೆ ಎಂದು ತನ್ನಲ್ಲಿಯೇ ತಾನಂದುಕೊಳ್ಳುತ್ತ ಕಾವೇರಿ ಪುಸ್ತಕವನ್ನು ಕೈಲಿ ಹಿಡಿದು ತೂಗುಮಣೆಯ ಮೇಲೆ ಕುಳಿತಳು. ಆದರೆ ಓದಲು ಮಾತ್ರ ಆಗಲಿಲ್ಲ. ತಲೆಯಲ್ಲಿನ ಎದುರು ಬದುರು ವಿಚಾರಗಳ ಡಿಕ್ಕಿ ಸುರುವಾಯಿತು. ಕೈಲಿದ್ದ ಪುಸ್ತಕ ಕೆಳಗೆ ಜಾರಿತು.

ನಾಗಮ್ಮ ದೊಡ್ಡ ದನಿಯಿಂದ ಅತ್ತುದು ಅಡಿಗೆಮನೆಯಿಂದ ಕೇಳಿ ಬಂದಿತು. ರಂಗರಾಯರು ಇದ್ದಲ್ಲಿಂದ ಓಡಿಬಂದರು. ಕಾವೇರಿ ತನ್ನ ತೊಡೆಯ ಮೇಲೆ ನಾಗಮ್ಮನ ತಲೆಯನ್ನು ಮಡಗಿಕೊಂಡು ಸಮಾಧಾನ ಮಾಡುತ್ತಿದ್ದಳು. ಎರಡೂ ಕೈಗಳಲ್ಲಿ ಮುಖವನ್ನು ಮುಚ್ಚಿಕೊಂಡು ನಾಗಮ್ಮ ಅಳುತ್ತಿದ್ದಳು. ಪೆಚ್ಚಾಗಿ ಕಂಬಕ್ಕೆ ಆತು ನಿಂತ ಉಮೇಶ ಪಿಳಿಪಿಳಿ ಕಣ್ಣು ಬಿಡುತ್ತಿದ್ದನು. ರಾತ್ರಿಯೆಲ್ಲವೂ ನಿದ್ರೆಯಲ್ಲಿಯೇ ಬೆಚ್ಚಿಬಿದ್ದು ಮಗುವಿನಂತೆ ಎದ್ದೆದ್ದು ಕೂಡುತ್ತಿದ್ದ ನಾಗಮ್ಮನನ್ನು ಸಂತಯಿಸುವದು ಕಾವೇರಿಯ ಕೆಲಸವಾಯಿತು.

ರಂಗರಾಯರೊಟ್ಟಿಗೆ ಗಾಡಿಯಲ್ಲಿ ಕೂಡಲು ಕಾವೇರಿ ಒಪ್ಪಲಿಲ್ಲ. ಕಾರಣ ತಂದೆ-ಮಕ್ಕಳಿಬ್ಬರೂ ಒಂದು ಗಾಡಿಯಲ್ಲಿ ಕುಳಿತು ರೈಲ್ವೆ ನಿಲ್ದಾಣಕ್ಕೆ ಹೊರಟಿದ್ದರು. ಹಿಂದಿನ ಗಾಡಿಯಲ್ಲಿ ನಾಗಮ್ಮ ಮತ್ತು ಕಾವೇರಿ ಕುಳಿತಿದ್ದರು. ನಾಗಮ್ಮನ ಕಣ್ಣುಗಳು ಬಾತು ಗುಗ್ಗರಿಯಂತಾಗಿದ್ದವು. ಇದ್ದಕ್ಕಿದ್ದಂತೆ ನಡುರಸ್ತೆಯಲ್ಲಿ ಗಾಡಿಗಳು ನಿಂತುಬಿಟ್ಟವು. ಜನರ ಗುಂಪು ಕಿಕ್ಕಿರಿದಿದ್ದಿತು. ನೆರೆದ ಜನರನ್ನು ಚದುರಿಸಲು ಪೋಲೀಸರು ಬಾಯಿಂದ ಹೇಳುವ ಮಾತನ್ನೆ ಕೈಯಿಂದ ಹೇಳುತ್ತಿದ್ದರು. ಸೌಮ್ಯ ಲಾಠಿ ಪ್ರಹಾರಗಳು ಸುರುವಾದವು. ಜನಸಂದಣಿ ಮಾತ್ರ ಇರುವೆಗೂ ಜೇಕಾ



ಗುವಷ್ಟು ಇಂಬುಗೊಡಲಿಲ್ಲ. ಏನು ಗಲಭೆ ಎಂಬುದು ಉಮೇಶನಿಗೆ ಅರ್ಥ ವಾಗಲಿಲ್ಲ. ಗಾಡಿಯಲ್ಲಿಯೇ ಎದ್ದು ನಿಂತು ನೋಡಿದ. ಆವೇಶದಿಂದ ನಿಂತಲ್ಲಿಂದಲೇ ಜಿಗಿದು ಜನರ ಗುಂಪಿನಲ್ಲಿ ನುಗ್ಗಿದ. ಬೇಡ ಬೇಡ ಎನ್ನುತ್ತ ರಂಗರಾಯರು ಕುಳಿತಲ್ಲಿಯೇ ಗೊಣಗುಟ್ಟುತ್ತಿದ್ದರು. ಖಾಕಿ ಸಮವಸ್ತ್ರ ಧಾರಿಯಾದ ಉಮೇಶ ಖಾದಿ ಬಿಳೀ ಉಡುಪಿನ ರಘುರಾಮನ ಮುಂದೆ ನಿಮಿಷಾರ್ಧದಲ್ಲಿಯೆ ನಿಂತಿದ್ದ. ಸನಿಯದಲ್ಲಿದ್ದ ಪೋಲೀಸರು ಹಿಂದೆ ಸರಿದರು. ರಘುರಾಮ ಉಮೇಶನನ್ನು ಕಂಡ ಕೂಡಲೆ ಘೋಷಣೆಯನ್ನು ಮಾಡಿದ. " ಹಿಂದೂ ದೇಶ ತನ್ನೊಪ್ಪಿಗೆ ಇಲ್ಲದೆ ಈ ಪಾಪಮಯ ಯುದ್ಧ ದಲ್ಲಿ ಎಳೆಯಲ್ಪಟ್ಟಿದೆ. ಯಾವ ಹಿಂದೀಯನೂ ಜನಧನಗಳಿಂದ ಇದಕ್ಕೆ ಸಹಾಯ ಮಾಡಬೇಡಿರಿ. ಬೋಲೋ ಗಾಂಧೀ ಮಹಾತ್ಮಾಕೂ — ಅಲ್ಲ ಮಹಾತ್ಮಾಕೀ ಜೈ " ಎಂದು ಜನರು ಕೂಗಿದುದು ಮುಗಿಲು ಮುಟ್ಟಿತು. ಹಿಂದೆ ನಿಂತಿದ್ದ ಪೋಲೀಸ ಅಧಿಕಾರಿಗಳು ಮುಂದೆ ಬಂದರು. ಜೈಜೈಕಾರ ಗಳು ಇನ್ನೂ ಹೆಚ್ಚಾದವು. ರಘುರಾಮನ ಮುಖ ಕಾಣದಷ್ಟು ಹೂಮಾಲೆ ಗಳು ಕತ್ತಿನಲ್ಲಿ ಬಿದ್ದವು. ಮುಖ ಕೆಂಪೇರಿದ ಉಮೇಶ ಕದಲದೆ ನಿಂತಿದ್ದ. ಒಳನುಗ್ಗಿ ಬಂದ ಎಳೆ ಹುಡುಗನೊಬ್ಬ ಕೈನೂಲಿನ ಮಾಲೆಯೊಂದನ್ನು ಉಮೇ ಶನ ಕೈಗೆ ಕೊಟ್ಟು ಕಿರುನಗೆಯಿಂದ ಕೂಡಲೆ ನುಸುಳಿದ. ಉಮೇಶನಿಗೆ ಎಚ್ಚರವಾಯಿತು. ಕೈಲಿದ್ದ ನೂಲಿನ ಮಾಲೆಯನ್ನು ರಘುರಾಮನ ಕೊರಳಲ್ಲಿ ಹಾಕಿದ. ಆವೇಶದಲ್ಲಿ ರಘುರಾಮ ಅವನನ್ನು ಬಿಗಿದಪ್ಪಿದ. ಅದೇ ನೂಲಿನ ಮಾಲೆಯನ್ನು ತೆಗೆದು ಉಮೇಶನ ಕತ್ತಿನಲ್ಲಿ ಹಾಕಿದ.

" ಎಂದೂ ಒಣಗದ ಮಾಲೆ ಇದು. ಭಾರತ ದೇಶವನ್ನು ಕಾಪಾಡು " ಎಂದು ಹೇಳಿ ರಘುರಾಮ ಮುಂದಿನ ಹೆಜ್ಜೆ ಇಟ್ಟ. ಉಮೇಶ ತಲೆಬಾಗಿದ. ಕೈಹಿಡಿದ ಪೋಲೀಸರ ಹಿಂದೆ ಹಸನ್ಮುಖಿಯಾದ ರಘುರಾಮ ಹೊರಟ.

ಉಮೇಶನ ಕೈಲು ಕೂ ಎಂದಿತು. ಮೆಟ್ಟಿಲ ಹಲಗೆಯ ಮೇಲೆ ನಿಂತ ಉಮೇಶ ಒಳ ಏರಿದ. ಗಾಡಿಯೂ ಕದಲಿತು. ಬಾಗಿಲ ಹಿಡಿಕೆಗೆ ಜೋತುಬಿದ್ದ ರಾಜ ಪತ್ರವೊಂದನ್ನು ಉಮೇಶನ ಮುಂದೆ ಚಾಚಿದ. ಬಾಗಿ ಪತ್ರ ತೆಗೆದುಕೊಂಡ ಮೇಲೆ ರಾಜನನ್ನು ಕೇಳಿದ " ಯಾರು ಕೊಟ್ಟರು ' ಎಂದು. ಆ ಗಲಭೆಯಲ್ಲಿ ರಾಜ ಅಂದುದು ಉಮೇಶನಿಗೆ ಕೇಳಲಿಲ್ಲ. ಅವನ

ತುಟಿಯಾಡಿದ ರೀತಿಯಿಂದ 'ಕುಸುಮ' ಎಂದಂತಾಯಿತು. ಕುಸುಮಳ ಕಾಗದವನ್ನು ಕೈಯಲ್ಲಿ ಹಿಡಿದು ಉಮೇಶ ಹೊರಗೊಮ್ಮೆ ಬಾಗಿ ನೋಡಿದ. ನಿಶ್ಚೇಷ್ಟಳಾಗಿ ಬಿದ್ದಿದ್ದ ನಾಗಮ್ಮನನ್ನು ರಂಗರಾಯರು ಕಾವೇರಿ ಎತ್ತುತ್ತಿದ್ದರು. ಉಮೇಶ ಕಣ್ಣು ಮುಚ್ಚಿದ. ಕಟ್ಟೆಗೆ ಕುಳಿತ ಕುಸುಮ ಕಣ್ಣಮುಂದೆ ಬಂದಳು. ಪುನಃ ಕಣ್ಣು ತೆಗೆದಾಗ ಯಾರೂ ಇರಲಿಲ್ಲ. ಹಸಿರು ಹೊಲಗಳು ಗಿಡಮರಗಳು ತಂತಿಕಂಬಗಳು ಓಟಬಿಟ್ಟಿದ್ದವು. ಹಗರಿಯ ಉಸುಗು ಹಿಂದಾಯಿತು. ಗುಂತಕಲ್ಲಿಗೆ ಬಂದ ಮೇಲೆ ಅವನ ಲಕ್ಷಣವೇ ಬೇರೆಯಾಯಿತು.

## ೧೧. ಮೇಘಸಂದೇಶ

ಉಮೇಶ ಊರು ಬಿಟ್ಟುದುದು ಪಂಚಮಶನಿ ತೊಲಗಿದಂತೆ ಮಲ್ಲಾರಿ ಭಟ್ಟರಿಗೆನಿಸಿದರೂ ಕುಸುಮಳ ಹೃದಯದಲ್ಲಿ ಮಾತ್ರ ಮುಳ್ಳು ಮುರಿದಂತಾಯಿತು. ಉಮೇಶನನ್ನು ಕಂಡದ್ದು ಅವಳಿಗೆ ಅದೇ ಮೊದಲನೆಯ ಬಾರಿ ಆದರೂ ಅದೇಕೋ ಅವನು ಅಪರಿಚಿತನಂತೆ ಕಂಡಿರಲಿಲ್ಲ. ತನ್ನ ಮನದ ಕಣ್ಣಮುಂದೆ ಅಂದೆಂದೋ ಮೂರ್ತೀಭವಿಸಿ ಚಿರಪರಿಚಿತನಾಗಿದ್ದ ಆ ಸುಂದರ ವ್ಯಕ್ತಿಯೊಂದಿಗೆ ಇಂದು ಮುಂದೆ ನಿಂತ ಅಪರಿಚಿತ ಉಮೇಶನನ್ನು ಹೋಲಿಸಿ ನೋಡಿದಳು. ಅಹುದು, ಅವನೇ ಈ ಉಮೇಶ! ಹಿರಿಹಿರಿ ಹಿಗ್ಗಿ ಮುಗಿಲಿನ ವರೆಗೂ ಮನಸ್ಸು ಜಿಗಿದಾಡಿತು. ಅವನ ಕಣ್ಣಲ್ಲಿ ತೇಲಿದ್ದ ಹೃದಯುವನ್ನು ತನ್ನ ಹೃದಯುದ ಕಣ್ಣಿಂದ ಗುರುತಿಸಿದಳು. ತಾನು ಅವನಿಗಾಗಿಯೇ ಮುಡಿಪು ಎಂಬ ನಿರ್ಧಾರವನ್ನು ಅವನನ್ನು ಕಂಡ ಕೂಡಲೆ ಮಾಡಿಕೊಂಡಿದ್ದಳು. ಅಂದೇ ಗುದ್ದಾಡಿದ್ದ ರಾಜನೊಟ್ಟಿಗೆ ರಾಜಿಯಾದಳು. ಸೌಭಾಗ್ಯಮ್ಮನ ಸೇವಕಳಾದಳು. ಮಲ್ಲಾರಿಭಟ್ಟರ ಮನೆಯಾಳಾದಳು. ಆದರಿಂದಲೇ ಸರ್ವನಾಶವೂ ಆಯಿತು. ಅವರ ಆಜ್ಞೆಯ ಮೇರೆಗೆ ಸೆರೆ ಹುರಿದು ಉಮೇಶನಿಗೆ ಕೊಟ್ಟಳು. ಅವರ ಕಣ್ಣು ಬೆದರಿಕೆಗೆ ಅಂಜಿ ನಡುಗಿದಳು. ಉಮೇಶನ ಪವಿತ್ರ ಪ್ರೇಮಕ್ಕೆ ಎರವಾದಳು. ರಾತ್ರಿಯೆಲ್ಲವೂ ಹಾಸಿಗೆಯಲ್ಲಿ ಅತ್ತು ಅತ್ತು ಬೆಳಗಿನಲ್ಲಿ ರಾಜನಿಗೆ ದುಃಖವನ್ನು ತೋಡಿಕೊಂಡಳು.

“ ಮತ್ತೊಂದು ಬಾರಿ ಕರದರೆ ? ” ರಾಜ ಆಶಾಕಿರಣವನ್ನು ಬೀರಿದ.

“ಸಾಧ್ಯಾನೇ ಇಲ್ಲ. ಈ ಮನ್ಯಾಗೆ ಇನ್ಯಾಕ ಕಾಲಿಟ್ಟಾರು ಅವರು ?”

“ ನಾನೊಪ್ಪಿಸಲೇನಕ್ಕ ? ”

“ ಆಗದ ಮಾತು ರಾಜ, ಅವ್ರು ಬರೋದಿಲ್ಲ, ಅಪ್ಪನೂ ಬರಗೊಡೋದಿಲ್ಲ.” ಸೌಭಾಗ್ಯಮ್ಮನ ಕಾಲ ಸಪ್ಪಳವಾದ ಕೂಡಲೆ ಇಬ್ಬರೂ ಕಣ್ಣಸನ್ನೆಯಿಂದ ಮಾತನಾಡಿಕೊಂಡು ಸುಮ್ಮನಾದರು. ಸಮಯವನ್ನು ಸಾಧಿಸಿ ರಾಜ ಮತ್ತೆ ಮಾತು ಮುಂದುವರಿಸಿದ.

“ ಸೆರೆ ಕುಡಿಯೆಂದು ನೀನ್ಯಾಕಕ್ಕಾ ಅವರಿಗೆ ಒತ್ತಾಯ ಮಾಡಿದ್ದು ? ”

ಕುಸುಮಳ ಎದೆಗೆ ಬಾಣ ಬಡಿದಂತಾಯಿತು. ತುಸು ಖಿನ್ನಳಾಗಿ ಉತ್ತರವಿತ್ತಳು.

“ ಅಪ್ಪನ ಕಣ್ಣಲ್ಲಿ ಇತ್ತಲ್ಲೋ ? ”

“ ಏನು ? ”

“ ನನ್ನ ತಿಂಬೋ ರಾಕ್ಷಸ. ”

ಮುಂದೇನು ಆಡಲು ತಿಳಿಯದೆ ರಾಜ ಸುಮ್ಮನಾದ.

ಆ ಮಾತು ಈ ಮಾತುಗಳನ್ನಾಡಿ ಕುಸುಮ ಪುನಃ ಅಲ್ಲಿಗೆ ಬಂದು ನಿಂತಳು.

“ ಅವರಿಗೆ ಬಹಳ ಬೇಸರ ಬಂದಿರಬೇಕಲ್ಲವೇನೋ ನನ್ನ ಬಗ್ಗೆ ? ”

ಅಹುದೆಂದು ರಾಜನಿಗೆ ಪೂರ್ತಿ ಮನದಟ್ಟಾಗಿದ್ದಿತು. ಆದರೆ ಇದ್ದುದನ್ನು ಇದ್ದಂತೆಯೇ ಆಡಿ ಆವಳ ಮನಸ್ಸಿಗೆ ಬರೆ ಕೊಡಲು ಅವನೆಷ್ಟೂ ಸಿದ್ಧನಿರಲಿಲ್ಲ. ಕುಸುಮಳ ಕಣ್ಣಲ್ಲಿ ಆಗಲೆ ಅಳು ಹೆಪ್ಪುಗಟ್ಟಿದ್ದಿತು. ಅದನ್ನರಿತ ರಾಜ ಮೂಗೆಳೆದು ಮಾತನಾಡಿದ.

“ ನಿಜ ಸಂಗತಿ ಅವರಿಗೇ ತಿಳಿದರೆ ? ”

“ ತಿಳಿದರಲ್ಲವೇ ? ”

“ ತಿಳಿಸಬೇಕು. ”

ರಾಜ ಅರ್ಥಗರ್ಭಿತವಾಗಿ ಆಡಿದ ಮಾತುಗಳು ಕುಸುಮಳ ಮುಖಕ್ಕೆಷ್ಟು ರಕ್ತ ತಂದವು.

“ ನೀನು ಬಾಗಿಲಾಗೇ ಇರು. ಅಮ್ಮ ಬಂದರೆ.... ”

ತುಟಿಯಾಡಿದ ರೀತಿಯಿಂದ ' ಕುಸುಮ ' ಎಂದಂತಾಯಿತು. ಕುಸುಮಳ ಕಾಗದವನ್ನು ಕೈಯಲ್ಲಿ ಹಿಡಿದು ಉಮೇಶ ಹೊರಗೊಮ್ಮೆ ಬಾಗಿ ನೋಡಿದ. ನಿಶ್ಚೇಷ್ಟಳಾಗಿ ಬಿದ್ದಿದ್ದ ನಾಗಮ್ಮನನ್ನು ರಂಗರಾಯರು ಕಾವೇರಿ ಎತ್ತುತ್ತಿದ್ದರು. ಉಮೇಶ ಕಣ್ಣು ಮುಚ್ಚಿದ. ಕಟ್ಟೆಗೆ ಕುಳಿತ ಕುಸುಮ ಕಣ್ಣಮುಂದೆ ಬಂದಳು. ಪುನಃ ಕಣ್ಣು ತೆಗೆದಾಗ ಯಾರೂ ಇರಲಿಲ್ಲ. ಹಸಿರು ಹೊಲಗಳು ಗಿಡಮರಗಳು ತಂತಿಕಂಬಗಳು ಓಟಬಿಟ್ಟಿದ್ದವು. ಹಗರಿಯ ಉಸುಗು ಹಿಂದಾಯಿತು. ಗುಂತಕಲ್ಲಿಗೆ ಬಂದ ಮೇಲೆ ಅವನ ಲಕ್ಷಣವೇ ಬೇರೆಯಾಯಿತು.

## ೧೧. ಮೇಘಸಂದೇಶ

ಉಮೇಶ ಊರು ಬಿಟ್ಟುದುದು ಪಂಚಮಶನಿ ತೊಲಗಿದಂತೆ ಮಲ್ಲಾರಿ ಭಟ್ಟರಿಗೆನಿಸಿದರೂ ಕುಸುಮಳ ಹೃದಯದಲ್ಲಿ ಮಾತ್ರ ಮುಳ್ಳು ಮುರಿದಂತಾಯಿತು. ಉಮೇಶನನ್ನು ಕಂಡದ್ದು ಅವಳಿಗೆ ಅದೇ ಮೊದಲನೆಯ ಬಾರಿ ಆದರೂ ಅದೇಕೋ ಅವನು ಅಪರಿಚಿತನಂತೆ ಕಂಡಿರಲಿಲ್ಲ. ತನ್ನ ಮನದ ಕಣ್ಣಮುಂದೆ ಅಂದೆಂದೋ ಮೂರ್ತೀಭವಿಸಿ ಚಿರಪರಿಚಿತನಾಗಿದ್ದ ಆ ಸುಂದರ ವ್ಯಕ್ತಿಯೊಂದಿಗೆ ಇಂದು ಮುಂದೆ ನಿಂತ ಅಪರಿಚಿತ ಉಮೇಶನನ್ನು ಹೋಲಿಸಿ ನೋಡಿದಳು. ಅಹುದು, ಅವನೇ ಈ ಉಮೇಶ ! ಹಿರಿಹಿರಿ ಹಿಗ್ಗಿ ಮುಗಿಲಿನ ವರೆಗೂ ಮನಸ್ಸು ಜಿಗಿದಾಡಿತು. ಅವನ ಕಣ್ಣಲ್ಲಿ ತೇಲಿದ್ದ ಹೃದಯವನ್ನು ತನ್ನ ಹೃದಯದ ಕಣ್ಣಿಂದ ಗುರುತಿಸಿದಳು. ತಾನು ಅವನಿಗಾಗಿಯೇ ಮುಡಿಪು ಎಂಬ ನಿರ್ಧಾರವನ್ನು ಅವನನ್ನು ಕಂಡ ಕೂಡಲೆ ಮಾಡಿಕೊಂಡಿದ್ದಳು. ಅಂದೇ ಗುದ್ದಾಡಿದ್ದ ರಾಜನೊಟ್ಟಿಗೆ ರಾಜಿಯಾದಳು. ಸೌಭಾಗ್ಯಮ್ಮನ ಸೇವಕಳಾದಳು. ಮಲ್ಲಾರಿಭಟ್ಟರ ಮನೆಯಾಳಾದಳು. ಅದರಿಂದಲೇ ಸರ್ವನಾಶವೂ ಆಯಿತು. ಅವರ ಆಜ್ಞೆಯ ಮೇರೆಗೆ ಸೆರೆ ಸುರಿದು ಉಮೇಶನಿಗೆ ಕೊಟ್ಟಳು. ಅವರ ಕಣ್ಣು ಬೆದರಿಕೆಗೆ ಅಂಜಿ ಮುಚ್ಚುಕಿದಳು. ಉಮೇಶನ ಪವಿತ್ರ ಪ್ರೇಮಕ್ಕೆ ಎರವಾದಳು. ರಾತ್ರಿಯೆಲ್ಲವೂ ಹಾಸಿಗೆಯಲ್ಲಿ ಅತ್ತು ಅತ್ತು ಬೆಳಗಿನಲ್ಲಿ ರಾಜನಿಗೆ ದುಃಖವನ್ನು ತೋಡಿಕೊಂಡಳು.

" ಮತ್ತೊಂದು ಬಾರಿ ಕರದರೆ? " ರಾಜ ಆಶಾಕಿರಣವನ್ನು ಬೀರಿದ.

"ಸಾಧ್ಯಾನೇ ಇಲ್ಲ. ಈ ಮನ್ಯಾಗೆ ಇನ್ಯಾಕ ಕಾಲಿಟ್ಟಾರು ಅವರು?"

" ನಾನೊಪ್ಪಿಸಲೇನಕ್ಕ? "

" ಆಗದ ಮಾತು ರಾಜ, ಅವ್ರು ಬರೋದಿಲ್ಲ, ಅಪ್ಪನೂ ಬರಗೊಡೋದಿಲ್ಲ." ಸೌಭಾಗ್ಯಮ್ಮನ ಕಾಲ ಸಪ್ಪಳವಾದ ಕೂಡಲೆ ಇಬ್ಬರೂ ಕಣ್ಣಸನ್ನೆಯಿಂದ ಮಾತನಾಡಿಕೊಂಡು ಸುಮ್ಮನಾದರು. ಸಮಯವನ್ನು ಸಾಧಿಸಿ ರಾಜ ಮತ್ತೆ ಮಾತು ಮುಂದುವರಿಸಿದ.

" ಸೆರೆ ಕುಡಿಯೆಂದು ನೀನ್ಯಾಕಕ್ಕಾ ಅವರಿಗೆ ಒತ್ತಾಯ ಮಾಡಿದ್ದು? "

ಕುಸುಮಳ ಎದೆಗೆ ಬಾಣ ಬಡಿದಂತಾಯಿತು. ತುಸು ಖಿನ್ನಳಾಗಿ ಉತ್ತರವಿತ್ತಳು.

" ಅಪ್ಪನ ಕಣ್ಣಲ್ಲಿ ಇತ್ತಲ್ಲೋ? "

" ಏನು? "

" ನನ್ನ ತಿಂಬೋ ರಾಕ್ಷಸ. "

ಮುಂದೇನು ಆಡಲು ತಿಳಿಯದೆ ರಾಜ ಸುಮ್ಮನಾದ.

ಆ ಮಾತು ಈ ಮಾತುಗಳನ್ನಾಡಿ ಕುಸುಮ ಪುನಃ ಅಲ್ಲಿಗೆ ಬಂದು ನಿಂತಳು.

" ಅವರಿಗೆ ಬಹಳ ಬೇಸರ ಬಂದಿರಬೇಕಲ್ಲವೇನೋ ನನ್ನ ಬಗ್ಗೆ? "

ಆಹುದೆಂದು ರಾಜನಿಗೆ ಪೂರ್ತಿ ಮನದಟ್ಟಾಗಿದ್ದಿತು. ಆದರೆ ಇದ್ದುದನ್ನು ಇದ್ದಂತೆಯೇ ಆಡಿ ಆವಳ ಮನಸ್ಸಿಗೆ ಬರೆ ಕೊಡಲು ಅವನೆಷ್ಟೂ ಸಿದ್ಧನಿರಲಿಲ್ಲ. ಕುಸುಮಳ ಕಣ್ಣಲ್ಲಿ ಆಗಲೆ ಅಳು ಹೆಪ್ಪುಗಟ್ಟಿದ್ದಿತು. ಅದನ್ನರಿತ ರಾಜ ಮೂಗೆಳೆದು ಮಾತನಾಡಿದ.

" ನಿಜ ಸಂಗತಿ ಅವರಿಗೇ ತಿಳಿದರೆ? "

" ತಿಳಿದರಲ್ಲವೇ? "

" ತಿಳಿಸಬೇಕು. "

ರಾಜ ಅರ್ಥಗರ್ಭಿತವಾಗಿ ಆಡಿದ ಮಾತುಗಳು ಕುಸುಮಳ ಮುಖಕ್ಕೆಷ್ಟು ರಕ್ತ ತಂದವು.

" ನೀನು ಬಾಗಿಲಾಗೇ ಇರು. ಅಮ್ಮ ಬಂದರೆ.... "

ಅರ್ಧದಲ್ಲಿಯೇ ರಾಜ ತಲೆಯಾಡಿಸಿದ. ದ್ವಾರಪಾಲಕನಂತೆ ರಾಜನನ್ನು ನಿಲ್ಲಿಸಿ ಕುಸುಮ ಕೋಣೆಯೊಳಕ್ಕೆ ಹೊರಟು ಕಾಗದವನ್ನು ಬರೆಯುತ್ತ ಕುಳಿತಳು. ತಿದ್ದಿ ತೀಡಿ ಅವಳು ಎಡಮೂಲೆಯಲ್ಲಿ ಶ್ರೀಕಾರ ಬರೆಯುವದರಲ್ಲಿ ಮೂರು ಬಾರಿ ರಾಜ ಕಳ್ಳಗೆಮ್ಮು ಕೆಮ್ಮಿದ. ಕಣ್ಣು ಮೇಲೆತ್ತದೆ ಕಾಗದವನ್ನು ಪುಸ್ತಕದಲ್ಲಿರಿಸಿ ಓದುವವಳಂತೆ ನಟಿಸಿದಳು.

" ಇದೇನು ಓದೇ ನಿಂದು ನಂತಾಯಿ. ನಿನ್ನ ಬುಕ್ಕಿಗೊಂದಿಷ್ಟು ಬೆಂಕಿ ಹಚ್ಚು. ಮೂರೂಸಂಜೆ ಹೊತ್ತು, ಒಂದಿಷ್ಟು ಬಾಕಿಲ್ದಾಗ ಹೋಗಿ ನಿಲ್ಲು " ಎಂದು ಸಿಡುಕಿನಿಂದ ನುಡಿದು ಸೌಭಾಗ್ಯಮ್ಮ ಕೈಲಿದ್ದ ಪುಸ್ತಕವನ್ನು ಕಸಿದೆಸೆದಳು. ಪತ್ರವನ್ನು ಬರೆಯಲು ಸಹ ಸವುಡು ದೊರೆಯದೆ ದಿನಗಳು ಉರುಳಿದಂತೆಲ್ಲ ಕುಸುಮಳ ಹೃದಯದ ಗಾಯ ಹೆಚ್ಚು ಹೆಚ್ಚು ನೋವು ಮಾಡಹತ್ತಿತು.

ಒಂದು ಸಾಯಂಕಾಲ ಭಟ್ಟರು ಮನೆಗೆ ಬಂದು ಮಂಚದ ಮೇಲೆ ಅಡ್ಡಾದರು. ತೂಗುಕುರ್ಚಿಯ ಮೇಲೆ ಕಾಲುಬಿಟ್ಟು ಕುಳಿತ ಸೌಭಾಗ್ಯಮ್ಮ ಅಡಕೆ ಎಲೆ ಕುಟ್ಟಿ ಭಟ್ಟರ ಕೈಗೆ ಕೊಟ್ಟಳು. ತಾಂಬೂಲವನ್ನು ಅತ್ತಿಂದಿತ್ತ ಇತ್ತಿಂದತ್ತ ಹೊರಳಿಸುತ್ತ ಬಾಯಿಚಪ್ಪರಿಸಿ ಹಾಸಿಗೆಯುದ್ದಕ್ಕೂ ಕಾಲು ಚಾಚಿದರು. ತಲೆಬಾಗಿ ಕಾಲು ಹಿಸುಗುತ್ತ ರಾಜ ಕುಳಿತಿದ್ದ. ಅಂವೇಕೋ ಭಟ್ಟರ ಮುಖದಲ್ಲಿ ಒಂದು ಗೆಲುವು. ಹೃದಯ ಹಗುರಾಗಿ ಹಾರಾಡುವಂತಿದ್ದಿತವರಿಗೆ.

" ಒಂದು ಪೀಡಾನಂತೂ ಬಿಡುಗಡೆ ಆತು ಇವತ್ತು " ಎಂದು ನುಡಿದು ದೊಡ್ಡದಾಗಿ ಉಸಿರು ಬಿಟ್ಟು ಸೌಭಾಗ್ಯಮ್ಮನ ಮುಖ ನೋಡಿದರು.

" ಯಾವುದದೂ ಅಂಥಾ ಪೀಡಾ ? " ಎಂದು ಭಾಗ್ಯಮ್ಮ ಹುಬ್ಬಿನೊಡನೆ ಮೂಗೇರಿಸಿ ಕರಡಾಬತ್ತು ಜಮುಡಿದ ತಾಂಬೂಲವನ್ನು ಮುಂದೆ ಚಾಚಿದಳು.

" ನಮ್ಮ ಪ್ರತಿವಾದೀ, ಇದ್ದಾನಲ್ಲ ? "

ರಾಜ ಒಮ್ಮೆಲೆ ಕಾಲೊತ್ತುವದನ್ನು ಬಿಟ್ಟು ಮುಖ ನೋಡಿದ.

" ಮಾತೇನು ಕೇಳ್ತೀಯೋ ಕತ್ತೀಮಗನೆ, ಮುಂದ್ನೋಡಿ ಕಾಲೊತ್ತ ಬಾರದೇ " ಎಂದು ಭಟ್ಟರು ಚಿಕ್ಕದಾದ ಒದೆಯೊಂದನ್ನು ಬೆನ್ನ ಮೇಲೆ

ಅನುಗ್ರಹಿಸಿದಾಗ ಸೌಭಾಗ್ಯಮ್ಮನಿಗೆ ನಗು ಬಂದಿತು. ಕೂಡಲೆ ತಂದೆಯ ಸೇವೆಯಲ್ಲಿ ನಿರತನಾದ. ಆದರೆ ಮೈಯೆಲ್ಲವೂ ಕಿವಿಯಾಗಿ ಕುಳಿತ.

" ಯಾರಂದ್ರಿ ನಿಮ್ಮ ಪ್ರತಿವಾದಿ ? "

" ಇನ್ಯಾರು, ಆ ಅಪಹಾತ—ಉಮೇಶ. "

" ಅವನೇ, ಆ....ರಂಗರಾಯರ ಮಗ. "

" ಹೂ ಅವನೇ. ಆ ರಂಗರಾಯರ ಮಗ ಮಂಗರಾಯ. ಅವತ್ತು ಬಂದಿದ್ನಲ್ಲ ಆ ಸಾಚಾ—ಆಚಾರಶೀಲ. "

" ಎಲ್ಲಿಗೆ ಹೋದ ಈಗ ? "

" ಎಲ್ಲಿಗೋ, ವರಬಸಪ್ಪನ ಗುಡಿ ಹಾದಿಗೆ. ಅದಲ್ಲೇ ತಿರಗದ ಹಾದಿ. ಮಿಲಿಟ್ರೀಗೆ ಹೋಗ್ತಾನಂತೆ ಮಿಲಿಟ್ರೀಗೆ. "

" ಹೋದ್ನೇನು ಹಾಗಾದರೆ, ಪಾಪ. "

" ನಾಳೆ ಸಂಜೀ ಗಾಡೀಗೆ ಹೋಗ್ತಾನಂತೆ ಹಾಳಾಗಿ. ಆಫೀಸಿಗೆ ಬಂದು ಹೇಳಿ ಹೋದ ಎಲ್ಲಾರಿಗೂನೂ. ಅಲ್ಲಿ ಮಾಡ್ಲಿ ಈ ಆಚಾರ ತಿಳೀ ತದೆ. ಇಲ್ಲಿ ಒಲ್ಲೆ ಅಂಥಾಂಗ ಅಲ್ಲ, ಅಲ್ಲೆ ಗೊಟ್ಟ ಇಟ್ಟು ಸೆರೆ ಸುರುವತಾರೆ. ಕುದುರಿ ಖಂಡ ತಿನ್ನಸ್ತಾರೆ ಕುದುರಿ ಖಂಡಾನ ! "

" ರಂಗರಾಯರ ಹೆಂಡತೀ ಕತೀ ಕೇಳಿದಿರೋ ಇಲ್ಲೋ ? "

" ಕೇಳಿದೆ ಮಾರಾಯಳೆ. ಆಕೇನೋ ಜೋಯಿಸರ ರಘುರಾಮನ್ನ ಮದುವಿ ಆಗ್ತಾಳಂತಲ್ಲಾ. "

" ಆದಕೇ ಮಗ ಮಿಲಿಟರೀಗೆ ಹೋಗ್ತಿದ್ದಾನು. ಊರಾಗಂತೂ ತಲೀ ಎತ್ತಿ ಅಡ್ಡಾಡೋ ಹಾಗಿಲ್ಲ. "

" ಮ್ಯಾಲೆ ಸಾಲಗಾರರ ಕಾಟ. ಗಿಳೀಗೆ ಹೇಳಿಧಾಗ ಹೇಳಿದೆ, ಕೈಯಾಗ ಕಡ್ಡಿ ಕೊಟ್ಟು. ಎಲಾ ತೊಗೊಳ್ಳೋ, ಬಂದ ಲಕ್ಷ್ಮೀನ್ನ ಒದೀಬ್ಯಾಡ ಅಂತ. ಥೊಡ್ಡ ಥೊಡ್ಡ ಸಾಹೇಬರ ಬಟ್ಲೆರುಗಳು ಕೋಳೀ ತತ್ತೀ ತಿಂದ ಪಾರುಪತ್ಯ ಇಲ್ಲ ತನ್ನ ಸಂಬಳ. ಅರೆಹೊಟ್ಟೆ ಕೂಳು ಕೊಡೋ ಈ ಬಿಳೀ ಮೂತಿ ಅವರ ಸರಕಾರಕ್ಕೆ ನಿಷ್ಠೆ ಏನು ಸುಡ್ತು ? ನನಗೇ ಎಟುರು ಬಿದ್ದ. ಈಗ ಅನುಭೋಗಿಸಲಿ ಮಗ. ನಾನೇನು ಬಿಡ್ಲಿಲ್ಲ ಅನ್ನು. ನಾನೂ ಎರಡು ಕಲ್ಲು ಹಾಕೇ ಕೈಬಿಟ್ಟೆ. "

ಮಾತಿನ ಭರದಲ್ಲಿದ್ದ ವೃದ್ಧ ದಂಪತಿಗಳಿಗೆ ರಾಜ ಹೊರಜಾರಿದ್ದು ಲಕ್ಷ್ಯಕ್ಕೇ ಬಂದಿರಲಿಲ್ಲ. ಕುಸುಮಳಿಗಾಗಿ ಮನೆಯೆಲ್ಲ ಹುಡುಕಿದ. ಚಿಕ್ಕ ಕೋಣೆ ಒಳಗಿನಿಂದ ಚಿಲಕವಿಡಲ್ಪಟ್ಟಿದ್ದಿತು. ಸಂದಿಸಿಂದ ಹಣೆ ಇಕ್ಕಿ ನೋಡಿದ. ಎಡಮೂಲೆಯಲ್ಲಿ ಶ್ರೀಕಾರ ಬರೆಯುತ್ತಿದ್ದಳು ಕುಸುಮ. ರಾಜ ಹೇಳುತ್ತಿದ್ದಾಗ ಕುಸುಮಳ ಎದೆ ಹಾರಿತು. ಕದ ಇಕ್ಕಿಕೊಂಡು ಕಣ್ಣು ಬಾಯುವಷ್ಟು ಅತ್ತಳು. ರಾಜನ ಸಲಹೆಯ ಮೇರೆಗೆ ದೀರ್ಘವಾದ ಕಾಗದ ಒಂದನ್ನು ಬರೆದು ಗಾಂಧೀ ಪಟಕ್ಕೆ ನೇತಾಡುತ್ತಿದ್ದ ನೂಲಿನ ಹಾರವನ್ನು ರಾಜನೊಂದಿಗೆ ಕಳುಹಿ ಅವನ ಹಾದಿಯನ್ನೇ ಕಾಯುತ್ತ ಹೊರಕಟ್ಟೆಗೆ ಕುಳಿತಳು.

ಅಕಸ್ಮಾತ್ತಾಗಿ ಹೊರಬಂದ ಸೌಭಾಗ್ಯಮ್ಮ ಕಟ್ಟೆಗೆ ಕುಳಿತ ಕುಸುಮ ನನ್ನು ಕಂಡು ಸಂತಸಗೊಂಡಳು.

“ ಹೀಗೆ ಕೂತರೆ ಸೈ ಅಂದೇನಮ್ಮಾ ” ಎಂದು ಮುಸಿಮುಸಿ ನಕ್ಕು ಒಳಹೋಗುವಾಗ ಸೌಭಾಗ್ಯಮ್ಮನ ಸೆರಗು ನಿಲ್ಲಲಾರದೆ ಜಾರುತ್ತಿತ್ತು.

## ೧೨. ದೇವನ ನಿಜರೂಪ ದರ್ಶನ

ರಘುರಾಮ ಜೈಲಿನಿಂದ ಮರಳಿ ಬಂದಾಗ ಮನೆಯಲ್ಲಿ ಸ್ಥಿತ್ಯಂತರ ಬಹಳವಾಗಿದ್ದಿತು. ಬೇಡವೆಂದು ಪರಿಪರಿಯಿಂದ ಅಂಗಲಾಚಿ ಅವರಿವ ರಿಂದ ಬುದ್ಧಿ ಹೇಳಿಸಿದರೂ, ತಾಯಿಯ ಅಳು ಕರೆಗಳಿಗೂ ಕಿವಿಗೊಡದೆ ಮಗ ಜೈಲಿಗೆ ಹೋದುದು ರೋಗಗ್ರಸ್ತಳಾದ ಅವನ ತಾಯಿ ಹಲವೇ ದಿನಗಳಲ್ಲಿ ದಶರಥನಂತೆ ರಾಮಾ ರಾಮಾ ಎಂದು ಕೂಗಿ, ಅಂತ್ಯಕಾಲದಲ್ಲಿ, ಇದ್ದೊಬ್ಬ ಮಗನೂ ಎದುರಿಗಿಲ್ಲದ ವೇಳೆಯಲ್ಲಿ ಮಡಿಯಲು ಕಾರಣ ವಾಯಿತು. ನೆರೆಹೊರೆಯವರು ನಾನಾಬಗೆಯಿಂದ ಹೇಳಿದರೂ ರಘುರಾಮನ ತಂದೆ ಮಗನಿಗೆ ಒಂದು ಪತ್ರವನ್ನೂ ಬರೆಯಲಿಲ್ಲ. ಅವನು ತಮ್ಮ ಮಗನೇ ಅಲ್ಲವೆಂದು ಮಾತಿಗೊಮ್ಮೆ ನುಡಿದು, ಹೆಂಡತಿಯ ಅಂತ್ಯಕ್ರಿಯೆಗಳನ್ನು ತಾವೇ ಮಾಡಿ ಮುಪ್ಪನ್ನು ತಿನ್ನುತ್ತಿದ್ದರು. ರಘುರಾಮ ಜೈಲಿನಿಂದ ಬಿಡು ಗಡೆಯಾಗಿ ಮರಳಿ ಮನೆಗೆ ಬಂದಾಗ ದುಃಖೋದ್ರೇಕದಲ್ಲಿಯೇ ಬರೆ ಕೊಟ್ಟಂತೆ ಎರಡು ಮಾತುಗಳನ್ನಾಡಿ ಮೂಗಿಗೆ ಕೈಯಿಟ್ಟು ಮೂಲೆಗೆ ಕುಳಿ

ತರು. ರಘುರಾಮನಿಗಾದರೂ ಅವರೊಡನೆ ಸರಿಗಟ್ಟಿ ಮಾತಿಗೆ ಮಾತನಾಡಿ ಜಗಳ ಬೆಳೆಸುವ ಮನೋಸ್ಥಿತಿ ಇರಲಿಲ್ಲ. ತನ್ನ ಮಾತೃವಿಯೋಗದಕಿಂತಲೂ ತನ್ನ ತಂದೆಗೆ ಆ ವಯಸ್ಸಿನಲ್ಲಿ ಪ್ರಾಪ್ತವಾದ ಪತ್ನೀವಿಯೋಗ ಹೆಚ್ಚು ದುಃಖ ದಾಯಕವೆಂಬುದನ್ನು ಅರಿತು ಕನಿಕರ ಬೆರೆತ ಗೌರವದಿಂದ ತಂದೆಯನ್ನು ಕಾಣುತ್ತಿದ್ದನು.

"ನೀನೂ ಒಂದು ಮನಿಶಾ ಆಗಿದ್ದು ಕಣ್ಣಿಲೆ ನೋಡಿ ಸತ್ತೇನಂದಳಪ್ಪಾ ಆಕಿ, ರಘುರಾಮಾ. ಕಡಿಗೂ ಆಗಲಿಲ್ಲ, ಆಕಿ ಕೈಯಿಂದ ಅದನ್ನ ನೋಡೋದು. ದೇಶಮಾತಾನ ಸೇವಾ ಮಾಡೋ ಆರ್ಭಟದಾಗ ಹೆತ್ತ ತಾಯಿಗಾ ಕುತಿಗೀ ಹಿಚಿಕಿಬಿಟ್ಟಿ. ಹಡದ ತಾಯಿನ್ನ ಕೊಂದು ಏನು ಪಡದರೆ ಏನದೆ ಹೇಳು. ಸೊಸಿನ್ನ ಕಂಡ್ನೇ, ಮೊಮ್ಮಗನ್ನ ಕಂಡ್ನೆ...." ಮೇರೆದಪ್ಪಿ ಬರುತ್ತಿದ್ದ ಅಳುವನ್ನು ತಡೆಗಟ್ಟಲು ತುಟಿ ಕಡಿದು ಸುಮ್ಮನಾದರು.

ರಘುರಾಮ ಜೈಲಿನಿಂದ ಬಿಡುಗಡೆಯಾಗಿದ್ದರೂ ಹಲವು ದಿನಗಳು ಸೆರೆಮನೆಯಲ್ಲಿದ್ದಂತೆಯೇ ಇದ್ದ. ರಸ್ತೆಯಲ್ಲಿ ಅಲೆಯಲು ದೊರೆತ ಸ್ವಾತಂತ್ರ್ಯ ಇದೆಂತಹ ಸ್ವಾತಂತ್ರ್ಯವೆಂದು ತನ್ನಲ್ಲಿಯೇ ಟೀಕಿಸಿಗೊಂಡು ಮನೆಬಿಟ್ಟು ಹೊರಡಲು ಸಹ ಮನಸ್ಸಿಲ್ಲದಾಗಿದ್ದ. ಮನೆಗೆಲಸದಲ್ಲಿ ತಂದೆಯ ವರಿಗೆ ನೆರವಾಗುವದು, ಉಳಿದ ಸಮಯವೆಲ್ಲ ರಾಟೆಯ ಮೇಲೆ ನೂಲುತ್ತ ಕೂಡುವದು ಅವನ ನಿತ್ಯದ ವಾಡಿಕೆಯಾಯಿತು. ಮುನ್ನೋಡಿ ನೂಲುತ್ತ ಕುಳಿತಾಗ ತಲೆಯಲ್ಲಿ ಹಾದುಹೋಗುತ್ತಿದ್ದ ವಿಚಾರಗಳು ಮಾತ್ರ ತಾನು, ತನ್ನ ಮನೆ, ಊರು, ದೇಶ ಇವೆಲ್ಲವುಗಳ ಸೀಮೆಯನ್ನು ದಾಟಿ ಇಡೀ ವಿಶ್ವದ ಹಿತದ ಕಡೆ ಹೊರಳುತ್ತಿದ್ದಿತು. ಸಮಾಜಕ್ಕಾಗಿ ವ್ಯಕ್ತಿಯೆ ಅಥವಾ ವ್ಯಕ್ತಿಗಾಗಿ ಸಮಾಜವೇ ಎಂಬ ತಿಕ್ಕಾಟ ಬಂದಾಗಲೆಲ್ಲ ಹಂಜಿಯಲ್ಲಿಯ ನೂಲು ಹರಿದು ರಾಟಿ ತನಗೆ ತಾನೇ ಓಟಬಿಡುತ್ತಿದ್ದಿತು. ವೇದ ಅಪೌರುಷೇ ಯವೋ ಅಲ್ಲವೋ ಎಂದು ತನ್ನಲ್ಲಿಯೇ ತಾನು ಚರ್ಚಿಸಿಕೊಂಡು ಉಪನಿಷತ್ತಿನ ಕಡೆಗೆ ನೋಡುತ್ತಿದ್ದ. ಬರುಬರುತ್ತ ಜೇಲುಜೀವನದ ಈ ವರ್ಚಸ್ಸು ಕಡಿಮೆ ಯಾಗಹತ್ತಿತು.

ಅದೊಂದು ಸಂಜೆ. ಕತ್ತಲೆಗೆ ಅಂಜಿ ಬೆಳಕು ಹಿಂದೆ ಸರಿಯುವ ಸಂಧ್ಯಾಕಾಲ. ರಕ್ತಸಾಗರದಲ್ಲಿ ಸೂರ್ಯ ಮುಳುಗಿ ಏಳುವ ಸಮಯ. ಊರ

ಮುಂದಿನ ಹಳ್ಳದಲ್ಲಿ ಬಟ್ಟೆಗಳನ್ನೊಗೆದಿಟ್ಟು ದಂಡೆಯ ಮೇಲೆ ಮೂಗು ಹಿಡಿದು ಕುಳಿತ ತನ್ನ ತಂದೆ ಇನ್ನೂ ಮನೆಗೆ ಬರುವ ಹೊತ್ತಾಗಿರಲಿಲ್ಲ. ನೂಲುವದೂ ಆಯಿತು. ಓದಲೂ ಮನಸ್ಸಿಲ್ಲ. ಸುಮ್ಮನೆ ಕೂಡಲಂತೂ ಸಾಧ್ಯವಿಲ್ಲ. ದೂಳು ಮುಚ್ಚಿದ ಪೆಟ್ಟಿಗೆಯೊಂದರಿಂದ ಬಟ್ಟೆ-ಬರೆಗಳನ್ನು ಹೊರತೆಗೆದ. ಸಿಲ್ಕಿನ ಜುಬ್ಬ ಅಂದೇಕೋ ಬಹು ಚೆಂದವೆನಿಸಿತು. ಅದನ್ನು ಧರಿಸಿ ಕನ್ನಡಿಯ ಮುಂದೆ ನಿಂತು ನೋಡಿದ. ಕಿರುನಗುವೊಂದು ಮುಖ ದಲ್ಲಿ ಮೂಡಿತು. ಬಿಳೀ ಪಂಚೆಯೊಂದನ್ನುಟ್ಟು ಹೊರನಡೆದ. ರಸ್ತೆಯಲ್ಲಿ ಕಂಡ ಪರಿಚಿತರು ನಿಲ್ಲಿಸಿ ಮಾತನಾಡಹತ್ತಿದರು. ಅವನ ತಾಯಿಯ ಮರ ಣದ ಬಗ್ಗೆ ದುಃಖವನ್ನು ವ್ಯಕ್ತಮಾಡಿದರು. ಈ ಔಪಚಾರಿಕ ರೀತಿಯಲ್ಲಿ ಮಾತನಾಡುವವರು ದಾರಿಯುದ್ದಕ್ಕೂ ಕಾಣಹತ್ತಿದರು. ಹೆದ್ದಾರಿಯನ್ನು ಬಿಟ್ಟು ಕಾಲುದಾರಿಯನ್ನು ಹಿಡಿದು ಮುಂದೆ ಸಾಗಿದ. ಹಳೆಯ ನೆನಪುಗಳೆಲ್ಲ ಒಂದೊಂದಾಗಿ ಬರಹತ್ತಿದವು. ಉಮೇಶ ಈಗ ಎಲ್ಲಿದ್ದಾನೆಯೋ ? ಹೇಗಿ ದ್ದಾನೆಯೋ ? ಅವನ ವಿಷಯವನ್ನು ತಿಳಿಯಬೇಕೆಂಬ ಲವಲವಿಕೆ ಬೆಳೆಯು ವಾಗಲೇ ಮನಸ್ಸಿನಲ್ಲಿ ಇನ್ನೊಂದು ಆಶಾಕಿರಣ ಮೂಡಿ ಬಾಯಿ ಸೀರೊಡೆ ಯಿತು. ಕೂಡಲೆ ಬಲಬದಿಗೆ ತಿರುಗಿ ಮುಂದೆ ಸಾಗಿದ. ಕೈಯಿಂದಲೇ ಕ್ರಾಪನ್ನು ಸರಿಮಾಡಿಕೊಂಡು ಬೈತಲನ್ನು ತೀಡಿಕೊಂಡ. ಹತ್ತಾರು ನಿಮಿಷಗಳಲ್ಲಿಯೇ ರಾವಸಾಹೇಬ ರಂಗರಾಯರ ಮನೆಯ ಮುಂದೆ ಬಂದು ನಿಂತ.

ಕಾಡಿನಲ್ಲಿ ಚೆಲ್ಲಿದ ಹುಣ್ಣಿಮೆಯ ಬೆಳುದಿಂಗಳಂತಿದ್ದಿತು ಕಾವೇರಿಯ ಯೌವನ. ಪುಷ್ಟವಾದ ಮೈಕಟ್ಟು, ತುಂಬಿದ ಗಲ್ಲಗಳು, ಉರುಳುವ ಕಣ್ಣು ಗುಡ್ಡೆ, ನಿಡಿದಾದ ಜಡೆ, ಜೋಡೆಲೆಗಳ ಮಧ್ಯೆ ಇದ್ದ ಕೆಂಪು ಹೂವೊಂದು ತಲೆಯಲ್ಲಿ, ಮೈಮುರಿದು ಕೈಗಳನ್ನು ತಲೆಯ ಮೇಲೆ ಉದ್ದಕ್ಕೂ ಚಾಚಿ ಕಾವೇರಿ ಹೊರಬಾಗಿಲಿಗೆ ಬರುತ್ತಿದ್ದಾಗ ರಘುರಾಮ ತಲೆಯೆತ್ತಿ ನೋಡಿದ. ಆ ಕಾವೇರಿಯೇ ಈ ಕಾವೇರಿಯೇ ಎನಿಸಿತು ರಘುರಾಮನಿಗೆ. ಅವಳ ದೇಹಸೌಂದರ್ಯಕ್ಕೂ ಮಿಗಿಲಾಗಿದ್ದುದು ಅವಳ ಹೊಳೆಯುವ ಕಣ್ಣಲ್ಲಿದ್ದ ಥಳಥಳ. ಮನಸ್ಸಿನ ವ್ಯಾಪಾರವನ್ನು ಮರೆಮಾಜಲು ಮಾತಾಡಿದ ರಘುರಾಮ.

“ ರಂಗರಾಯರು ಮನೆಯಲ್ಲಿದ್ದಾರೆಯೆ ? ” ಎಂದು ಹೊರಬಾಗಿಲಲ್ಲಿ

ನಿಂತ. ಮನೆಯಲ್ಲಿದ್ದಾರೆಯೆ ಎಂದುದರಲ್ಲಿ ಮನೆಯಲ್ಲಿಲ್ಲ ತಾನೆ ಎಂಬ ದನಿ ಇದ್ದಂತಿದ್ದಿತು.

"ಇಲ್ಲ. ಅವರಿಲ್ಲದಿದ್ದರೆ ಒಳಗೆ ಬರಕೂಡದೇ?"

ನಗುವಿನ ಸುಳಿವು ಕಾವೇರಿಯ ಮುಖದಲ್ಲಿ ಹಾದು ಹೋದಂತೆ ರಘುರಾಮನಿಗೆ ಭಾಸವಾಯಿತೇನೋ! ತಾನಂತೂ ನಗುವಿನ ಊಟೆಯಾಗಿದ್ದ. ಕೊಂಚ ಹೊತ್ತಿನಲ್ಲಿಯೇ ಒಳಬಂದು ರಂಗರಾಯರ ದೊಡ್ಡ ಕುರ್ಚಿಯ ಮೇಲೆ ಕಾಲುಚಾಚಿ ಕುಳಿತಿದ್ದ. ಮೇಲೆತ್ತಿದ ಬಲಗೈಯಿಂದ ಹಿಂದಿದ್ದ ಬಾಗಿಲನ್ನು ಹಿಡಿದು ಕಾವೇರಿ ನಿಂತಿದ್ದಳು. ಮಾತನ್ನು ಎಲ್ಲಿಂದ ಪ್ರಾರಂಭಿಸಬೇಕೆಂದು ರಘುರಾಮನಿಗೆ ತೋಚದಾಯಿತು. ಮುಗಿಸುವ ರೀತಿಯಲ್ಲಿ ಮೊದಲು ಮಾಡಿದ.

"ಉಮೇಶ ಸೌಖ್ಯವಾಗಿದ್ದಾನಷ್ಟೇ?"

ಕಾವೇರಿಯ ಮುಖದ ಕಳೆಯೇ ಬದಲಾಯಿತು. ಮುಂಬರುವ ಮಾತಿಗೆ ತಕ್ಕದಾದ ಗಾಂಭೀರ್ಯ ಮೋರೆಯಲ್ಲಿ ಮೂಡಿತು.

"ದೇವರೇ ಬಲ್ಲ."

"ಅವನಿಂದ ಪತ್ರಗಳು...."

"ಬಾರದೆ ಎಷ್ಟೋ ದಿನಗಳಾದವು" ನಡುವೆ ಬಾಯಿ ಹಾಕಿದಳು.

"ಅವನಿರುವುದಾದರೂ ಎಲ್ಲಿ?"

"ಅದೇ ತಿಳಿದಿಲ್ಲ."

"ಯಾವ ಊರಿಂದ ಅವನ ಕಡೆಯ ಪತ್ರ ಬಂದಿತ್ತು?"

"ಊರನ್ನು ತಿಳಿಸುವಂತಿಲ್ಲವಲ್ಲ ಅವನ ಪತ್ರಗಳಲ್ಲಿ? ಅವು ಸೆನ್ಸಾರ್ ಆಗಿ ಬರುತ್ತವೆ ಅಲ್ಲವೆ? ರಂಗನನ್ನು ಕಾಣುತ್ತೇನೆಂದು ಅವ್ಯಕ್ತವಾಗಿ ಸೂಚಿಸಿದ್ದ ಒಂದು ಕಾಗದದಲ್ಲಿ. ಅದೇ ಕಡೆಯದು ಅವನಿಂದ."

"ರಂಗ! ಯಾವ ರಂಗನಂತೆ?"

"ರಂಗೂನಿರಬೇಕು ಅಷ್ಟೇ."

"ಓಹೋ!"

"ಆಮೇಲೆ ಇಲ್ಲೇ ಇಲ್ಲ ಅವನ ಕಾಗದ."

"ರಂಗರಾಯರೂ, ಪಾಪ...."

" ಅವರಿಗೆ ಹಣ ಬರ್‍ತಾ ಇದೆ ತಿಂಗಳಿಗೊಮ್ಮೆ. "

" ಎಲ್ಲಿಂದ ? "

" ಸರ್ಕಾರದಿಂದ. "

" ನಾಗಮ್ಮ ? "

" ಹೆರಿಗೆಗೆ ಹೋದವಳು ತನ್ನಣ್ಣನ ಮನೆಯಲ್ಲೇ ಇದ್ದಾಳೆ. "

" ಆಯಿತೇನು ? "

" ಹೂಂ, ಗಂಡು ಮಗು. "

ಕಾವೇರಿಯ ಕಣ್ಣಲ್ಲಿ ಒಂದರೆಕ್ಷಣ ಮೂಡಿ ಮಾಯವಾದ ಆ ರೇಖೆಯ ಗುರುತು ಗೊಡ್ಡು ರಾಜಕಾರಣಿಯಾದ ರಘುರಾಮನಿಗೆ ಹೇಗೆ ಹತ್ತಬೇಕು ? ಹೆಣ್ಣಿನ ಹೃದಯಾಂತರಾಳದಲ್ಲಿ ಹುದುಗಿದ ನೋವನ್ನು ಗುರುತಿಸಲು ಹೆಣ್ಣು ಹೃದಯದ ಪರಿಚಯ ಎಷ್ಟಿದ್ದರೆ ಮಾತ್ರ ಅತಿಶಯವಾದೀತು ? ಜೇಲಿನಲ್ಲಿದ್ದಾಗ ಅವನು ಗಿಳಿಯ ಪಾಠ ಮಾಡಿದ ಗೀತೆಯೂ ಅವನಿಗೆ ಸಹಾಯವಾಗಲಿಲ್ಲ. ನಾಗಮ್ಮ ಎಂದರೆ ಕಾವೇರಿಯ ಪ್ರೇಮ ಅಷ್ಟಿಷ್ಟಲ್ಲ ಅವಳಿಗಾಗಿ ತನ್ನ ಕರುಳನ್ನೇ ಕೊರಗಿಸಿದ್ದಳು, ಅವಳ ನಿಸ್ಸಹಾಯತೆಗಾಗಿ ಕಳಕಳಿ ಬಡುತ್ತಿದ್ದಳು. ಅವಳಿಗೆ ಗಂಡು ಮಗು ಆಯಿತೆಂದು ಊರಿಗೆಲ್ಲ ಸಕ್ಕರೆ ತಿನಿಸಿದಳು. ಆದರೆ ತನಗೆ ತಿಳಿಯದಲೆ ತನ್ನ ತಲೆಯಲ್ಲಿ ಅಸೂಯೆಯನ್ನು ಹೋಲುವ ಅದೊಂದು ಬಗೆಯ ರೋಗ ಮೆಲ್ಲನೆ ಮನೆಮಾಡಹತ್ತಿದ್ದಿತು. ಕೂಡಲೆ ಅದನ್ನು ತಿಳಿದುಕೊರೆದಳು. ತಿದ್ದಿಕೊಳ್ಳಲೂ ಮನಸು ಮಾಡಿದಳು. ಎಷ್ಟೋ ಬಾರಿ ತನ್ನನ್ನು ತಾನೇ ಜರೆದುಕೊಂಡಿದ್ದಳು ಅದ್ದಕ್ಕಾಗಿ. ಒಟ್ಟಾರೆ ಈ ವಿಷಯ ಅಷ್ಟೇಕೋ ರುಚಿಸಲಿಲ್ಲ ಅವಳಿಗೆ. ರಘುರಾಮನಿಗಂತೂ ಬೇಕೇ ಇರಲಿಲ್ಲ.

" ಕೊಂಚ ಕಾಫಿ ಕುಡಿಯುತ್ತೀಯಾ ರಘುರಾಮಾ ? "

ಮಾತು ಬದಲಾಗಿ ವಾತಾವರಣ ಹಿತವೆನಿಸಿತು ರಘುರಾಮನಿಗೆ— ಬೇಡ ಬೇಡ—ಎಂದು ರಘುರಾಮ ಎನ್ನುತ್ತಿರುವಾಗಲೇ ಕಾವೇರಿ ಒಳಗೆ ಹೊರಡಲುದ್ಯುಕ್ತಳಾದಳು. ಜಾರುತ್ತಿದ್ದ ಸೆರಗನ್ನು ಸರಿಮಾಡಿಕೊಂಡಳು. ರಘುರಾಮನ ಕಣ್ಣುಗಳು ಎತ್ತೆತ್ತಲೋ ಹರಿದಾಡಹತ್ತಿದವು. ಒಳಗಿನಿಂದ ಕಪ್ಪು ಬಸಿಗಳ ಕಟಕಟ ಕೇಳಿತು.

" ನನಗೆ ಬೇಡ ಕಾಫಿ; ನಾನು ಬಿಟ್ಟೇನಿ " ರಘುರಾಮು ದನಿಯನ್ನೆತ್ತಿಸಿ ನುಡಿದ.

" ಹೌದು ಮರೆತಿದ್ದೆ, ನೀನು ದೇಶಭಕ್ತನಲ್ಲೇ ! " ಬಾಗಿಲಿಗೆ ಬಂದು ನಗೆಯಾಡಿದಳು.

" ಅದೇನೂ ಕಾರಣಿಲ್ಲ. ದೇಶಭಕ್ತರೊಳಗೆ ಎಲ್ಲಾನೂ ಕುಡಿಯೋ ದೇಶಭಕ್ತರೂ ಇದ್ದಾರೆ " ಎನ್ನುತ್ತ ಅವಳ ನಗುವಿನೊಂದಿಗೆ ತನ್ನ ನಗುವನ್ನೂ ಬೆರೆಯಿಸಿ ಬಾಯಿ ತೆಗೆದ. ತಲೆಯ ಮೇಲಿದ್ದ ಗಾಂಧೀ ಟೊಪ್ಪಿಗೆಯನ್ನು ಮಡಿಸಿ ಕಿಸೆಗಿಕ್ಕಿ ಅಂದೊಮ್ಮೆ ತಾನು ಸ್ಪೆನ್ಸ್‌ರದಲ್ಲಿ ವಿಸ್ಕಿ ಸುರುವಿಕೊಂಡುದುದು ನೆನಪಿಗೆ ಬಂತು. ನಗುವಿನ ಮಧ್ಯೆ ಒಮ್ಮೆಲೆ ರಂಗರಾಯರ ನೆನಪಿಗಾಗಿ ರಘು ರಾಮುನಿಗೆ ಹಾಲಿನಲ್ಲಿ ಹುಳಿ ಹಿಂಡಿದಂತಾಯಿತು. ಹೊರಡಲನುವಾದವನಂತೆ ಕುರ್ಚಿಯಿಂದೇಳುವ ಮುಖ ಮಾಡಿದ.

" ಕೂಡು ಕೂಡು ರಘುರಾಮು, ನಿನಗೆ ಕಾಫಿ ಕೊಡುವದಿಲ್ಲ " ಎನ್ನುತ್ತ ಮೇಜಿನ ಮೇಲೆರಡು ಕಪ್ಪುಗಳನ್ನು ಇಟ್ಟಳು.

" ಹೊತ್ತಾಗಿದೆ " ಎತ್ತಲೋ ನೋಡುತ್ತ ನುಡಿದ.

" ಸ್ವಲ್ಪ ಹಾಲನ್ನು ಕುಡಿದು ಹೋಗು " ಎಂದು ಒಂದು ಕಪ್ಪನ್ನು ಮುಂದೆ ಸರಿಸಿದಳು. ಆಗ ರಘುರಾಮು ಬೇಡವೆನ್ನಲಿಲ್ಲ. ಅದು ಬೇಡವೂ ಆಗಿರಲಿಲ್ಲ. ಕಪ್ಪನ್ನು ಹಿಡಿದಿದ್ದ ಕೈಯನ್ನೇ ನೋಡುತ್ತ ಕೈ ಚಾಚಿದ. ಕಾವೇರಿಯ ನಿಡಿದಾದ ಸುಂದರ ಬೆರಳುಗಳ ತುದಿಗೆ ರಘುರಾಮುನ ಬೆರಳು ಸೋಂಕಿದಂತಾಯಿತು. ದೇಶಭಕ್ತನ ದೇಹಾದ್ಯಂತವೂ ವಿದ್ಯುತ್ ಸಂಚಾರ ವಾಯಿತು. ಹಣೆ ಬೆವರೊಡೆಯಿತು. ಎಂದೋ ಆಶಾಭಗ್ನವಾಗಿ ಬೂದಿ ಮುಚ್ಚಿದ ಕೆಂಡ ಪುನಃ ಪ್ರಜ್ವಲಿತವಾಯಿತು. ರಕ್ತದ ಸಂಚಲನ ವೇಗ ವಾಯಿತು.

" ಈಗಾಗಲೇ ಆರಿಹೋಗಿದೆ. ಬೇಗ ಕುಡಿಯೋ ರಘುರಾಮು " ಎಂದು ನುಡಿದು ಕಾವೇರಿ ರಘುರಾಮುನಿಗೆ ಕೈಯಲ್ಲಿಯ ಕಪ್ಪನ್ನು ನೆನಪು ಮಾಡಿಕೊಟ್ಟಳು. ರಘುರಾಮುನ ಹೃದಯದಲ್ಲಿ ನಡೆದಿದ್ದ ಅಲೆಗಳ ಏಳು ಬೀಳುಗಳ ಅರಿವು ಅವಳಿಗೆ ಆಗಿರಬೇಕು. ಚೇತರಿಸಿಕೊಂಡ ರಘುರಾಮು ನೋಟನನ್ನು ಎತ್ತಲೋ ಓಡಬಿಟ್ಟು, ಹಾಲನ್ನು ಒಂದೇ ಗುಟುಕು ಕುಡಿದು

ಕಪ್ಪನ್ನು ಮೇಜಿನ ಮೇಲಿಟ್ಟನು. ಅವನ ಹೃದಯದಲ್ಲಿ ಬಲವಾಗುತ್ತಿದ್ದ ವಾಸನೆ ಅವನ ಕಣ್ಣಲ್ಲಿ ಮೂಡಿದುದನ್ನು ಸೂಕ್ಷ್ಮಗ್ರಾಹಿಯಾದ ಕಾವೇರಿ ಯಾವಾಗಲೋ ಕಂಡಿದ್ದಳು. ಎವೆ ಇಕ್ಕದೆ ಅವನು ನೋಡುತ್ತಿದ್ದಾಗ ಅವಳೊಮ್ಮೆ ಸೆರಗು ಸರಿಪಡಿಸಿಕೊಂಡಳು. ಎಲ್ಲಕ್ಕೂ ತನ್ನರ್ಥವನ್ನೇ ಮಾಡಿ ಕೊಳ್ಳುತ್ತಿದ್ದ ರಘುರಾಮ ಮುಂದಿನ ಹೆಜ್ಜೆ ಏನೆಂದು ಯೋಚಿಸುತ್ತಿದ್ದನು. ಅಡಕೆಯ ಬಟ್ಟಲವನ್ನು ಮುಂದೆ ಸರಿಸುತ್ತ 'ಇನ್ನು ತಾವು ಹೊರಡ ಬಹುದು' ಎಂದು ಅರ್ಥಪೂರಿತವಾಗಿ ನುಡಿದಳು. ಅಭ್ಯಸಿಸಿದ ನಗು ರಘು ರಾಮನ ಮುಖದಲ್ಲಿ ಮೂಡಿತು. ತಟ್ಟನೆ ಅವಳ ಮುಂಗೈ ಹಿಡಿದು ಅವಳ ಮುಖ ನೋಡಿದನು. ಕೂಡಲೆ ಮಂಗ ಆದನು. ಮರುಕ್ಷಣವೇ ಅವಳ ಕೈ ಬಿಟ್ಟು ದೂರ ಸರಿದು ನಡುಗುತ್ತ ನಿಂತಿದ್ದನು. ಉಕ್ಕುವ ಪ್ರಾಯದ ರೂಪ ವತಿ ಕಾವೇರಿ ಎಲ್ಲಿ? ಅವನ ಮುಂದೆ ಕುಳಿತುದು ಕೆಣಕಿದ ಕಾಳಿ! ರಘುರಾಮನ ನಾಲಗೆ ಒಣಗಿ ತೀವರವಾಗಿ ತುಟಿಯ ಮೇಲೆ ಓಡಾಡಿತು. ಸರ್ಪದಂತೆ ಬುಸುಗುಟ್ಟುತ್ತಿದ್ದ ಕಾವೇರಿಯ ಮುಂದೆ ನಿಲ್ಲಲು ಸಹ ತ್ರಾಣ ಸಾಲದಾಯಿತು.

"ಏನೋ ರಘುರಾಮಾ, ಮುದುಕರ ಹೆಂಡಂದಿರು ನಿನ್ನಂತಹ ದೇಶ ಭಕ್ತನನ್ನು ಮೋಹಿಸುವದು ಕಾದಂಬರಿ ಸಿನೇಮಾ ನಾಟಕಗಳಲ್ಲಿ ಮಾತ್ರ."

ರಘುರಾಮನಿಗೆ ಅವಳ ದನಿಯಲ್ಲಿ ಸಿಡಿಲು ಕಂಡಿತು, ಗುಡುಗು ಕೇಳಿಸಿತು.

"ಅಗೋ, ಅದೇ ಬಾಗಿಲು" ಎಂದು ಹೇಳಿ ಒಳನಡೆದಳು. ಮಾನ ಹೋದರೂ ಪ್ರಾಣ ಉಳಿಯಿತಲ್ಲ ಎಂದು ದೇ|| ಭ|| ರಘುರಾಮರಾಯರು ಹೊರ ಜಾರಿ ಹೆದ್ದಾರಿಗೆ ಹತ್ತದೆ ಮನೆ ಮುಟ್ಟಿಗೊಂಡರು. ಕನ್ನಡಿಯನ್ನು ನೋಡಿಕೊಳ್ಳುವ ಧೈರ್ಯ ಮಾತ್ರ ಆದೇಕೋ ಅಂದು ಆಗಲಿಲ್ಲ.

## ೧೩. ಸಾವಿನ ಸುಗ್ಗಿ

ಉಡುಪಿನ ಹೆಮ್ಮೆ ಆಡುವ ಮಕ್ಕಳಿಗೆ. ಒಡವೆಯ ಹೆಮ್ಮೆ ಹೆಂಗಳೆಯ ರಿಗೆ, ಅಲ್ಪ ಜೀವಿಗಳಿಗೆ. ತಳತಳಿಸುವ ತಗಡಿನ ತುಂಡುಗಳನ್ನೂ ಬೆಳ್ಳಿಯ ಗುಂಡಿಗಳನ್ನೂ ಅಂಗಿಗೆ ತಗಲಿಸಿಕೊಂಡ ಮಾತ್ರಕ್ಕೆ ಅದಾವ ಜಾಣನ

ಆತ್ಮಕ್ಕೆ ಹಿತವೆನಿಸೀತು ? ಮಂದಿಯ ಕಣ್ಣಿಗೆ ಉಪೇಶನ ಖಾಕಿ ಚಲ್ಲಾಣ ಅಂಗಿಗಳು, ಚಿರಟು ಬಾರುಗಳು ಸುಂದರವಾಗಿ ಕಾಣಬಹುದು. ರಬ್ಬಾಗಿಯೂ ತೋರಬಹುದು. ಪೋಷಾಕಿನ ರಬ್ಬು ಮನಸ್ಸನ್ನು ಆವರಿಸಿದ್ದ ಮಬ್ಬಿಗೆ ಮದ್ದಾಗಲು ಸಾಧ್ಯವೇ ? ಯುದ್ಧಕ್ಕೆ ಸಿದ್ಧನಾಗುವುದು ವೀರನ ಲಕ್ಷಣ. ಒಲ್ಲೆನೆನ್ನುವುದು ಹೇಡಿಯ ಮಾತು. ಆದರೆ ಯುದ್ಧ ಯಾರಿಗಾಗಿ ? ಯಾರ ಉದ್ಧಾರಕ್ಕಾಗಿ ? ಯಾವ ಧರ್ಮಕ್ಕಾಗಿ, ಯಾವ ಸಂಸ್ಕೃತಿಗಾಗಿ ? ಯಾರ ಹಿತ, ಶಾಂತಿ, ಸುಖಕ್ಕಾಗಿ ? ಸಮಯ ಬಂದಾಗ ಜೀವದ ಹಂಗು ತೊರೆದು ಕಾದಾಡಬೇಕು, ನಿಜ. ಪ್ರಾಣವನ್ನು ಹೆಂಚಿಕಡ್ಡಿ ಎಂದೆಣಿಸಿ ಮುಂದೋಡಬೇಕು, ಅಹುದು. ಆದರೆ ಯುದ್ಧ ಏತಕ್ಕಾಗಿ ? ನಾಝೀ ರಾಜನಾದ ಹಿಟ್ಲರನನ್ನು ಸೋಲಿಸಬೇಕು, ಅವನ ಮತ ಪ್ರಜಾದ್ರೋಹದ್ದು. ಆದರೆ ಹಿಟ್ಲರನನ್ನು ಕಿತ್ತಿ ಚರ್ಚಿಲ್‌ನನ್ನು ತಲೆಯ ಮೇಲೆ ಕೂಡಿಸಿಕೊಳ್ಳಬೇಕೇನು ? ಯಾವುದನ್ನು ಬಿಟ್ಟು ಯಾವುದನ್ನು ಹಿಡಿಯಬೇಕು ? ಸೊಕ್ಕಿದೆರಡು ರಾಜ್ಯಗಳು—ರಾಜ್ಯ ಎಂದರೆ ಪ್ರಜರಲ್ಲ, ಮೂರ್ಖ ಮುಖಂಡರು—ಕಾದಾಡಲು ಕಾಲು ಕೆರೆದು ಜನರನ್ನು ಕುರಿಯಂತೆ ಆಹುತಿ ಕೊಡಲು ಸೊಂಟ ಕಟ್ಟಿ ನಿಂತಿವೆ. ಪ್ರಾಣವನ್ನು ಸೂರೆಗೊಳ್ಳಲು ಸಿದ್ಧವಾಗಿವೆ. ಸಾಯಲು ಜನ ಓಡಿ ಓಡಿ ಬರುತ್ತಲಿದ್ದಾರೆ. ಜರ್ಮನ್ ಜನತೆಗೆ ಈ ಯುದ್ಧ ರಾಷ್ಟ್ರಭಕ್ತಿ ಎಂದೆನಿಸಬಹುದೇ ? ತಮ್ಮ ದೇಶದ, ತಮ್ಮ ನಾಡಿನ, ತಮ್ಮ ಬಾಳು ಬದುಕಿನ, ತಮ್ಮ ಆತ್ಮಗೌರವದ ಪ್ರಶ್ನೆಯಾಗಿದೆ ಅವರಿಗೆ ಈ ಮಹಾಯುದ್ಧ. ಅಂದಾದ ಅಪಮಾನಕ್ಕೆ ಇಂದು ಸೇಡು ತೀರಿಸಿಕೊಳ್ಳುವುದು ಅವಸರವಿದೆ ಅವರಿಗೆ. ವರ್ಸೆಲೀಸ್ ಒಪ್ಪಂದ ಜರ್ಮನ್ ಹೆಡೆಯ ಮೇಲೆ ತುಳಿದು ಗಾಯ ಮಾಡಿದೆ. ಅಂದಾದ ನೋವು ಇಂದು ಬಲ ಕೊಟ್ಟಿದೆ. ಬಿದ್ದ ರಾಷ್ಟ್ರವನ್ನು ಎದ್ದು ಕಟ್ಟಲು ಮೊದಲ ಮೆಟ್ಟಲಾಗಿದೆ. ಯುರೋಪ್ ದೇಶಗಳನ್ನೇ ಮುಳುಗಿಸುವಷ್ಟು ವಿಷ ಕಾರುತ್ತಲಿದೆ ಜರ್ಮನ್ ಸರ್ಪ. ಪೆಟ್ಟು ತಿಂದ ಹೆಡೆಯೆತ್ತಿ ಹೊಡೆಯಲು ಹಾರುತ್ತಿದೆ. ಜರ್ಮನ್ ಜನರು ಮಾಡಲಿ ಯುದ್ಧವನ್ನು, ಹಟಕ್ಕಾಗಿಯೋ ಚಟಕ್ಕಾಗಿಯೋ. ಜಪಾನಿಯರಿಗಂತೂ ದೇವರಿಲ್ಲ. ಆದರೆ ಅರಸನಿದ್ದಾನೆ. ಜಪಾನ ರಾಜನೇ ಜಪಾನ ದೇವರು. ರಾಜಾ ಪ್ರತ್ಯಕ್ಷ ದೇವತಾ ಎಂಬುದು ಅಕ್ಷರಶಃ ನಿಜ

ಅಲ್ಲಿ. ಏಶಿಯನ್ನರಿಗಾಗಿ ಏಶಿಯ ಎನ್ನುವ ಮಂತ್ರ ಯುದ್ಧಕ್ಕೆ ಬಹು ಅನುಕೂಲವಾಗಿದೆ. ಜೀವದ ಭಯವಂತೂ ಸ್ವಪ್ನದಲ್ಲಿಯೂ ಸುಳಿಯುವಂತಿಲ್ಲ. ಆತ್ಮಹತ್ಯಕ್ಕೆ ರಾಜಮನ್ನಣೆ ಇದೆ, ಶ್ರೇಷ್ಠ ಗೌರವವಿದೆ, ಅಗ್ರಪೂಜೆ ಇದೆ. ಆತ್ಮಹತ್ಯದಲ್ಲಿ ಹಿರಿಮೆ ಇದೆ. ಅವರ ಕಲ್ಪನೆಯ ಸ್ವರ್ಗವೂ ಇದೆ. ಸಹಸ್ರಾರು ಜಪಾನಿಗರ ಶವಗಳನ್ನು ತರಬಲ್ಲ ಶತ್ರುವಿಗೆ ಸಜೀವಿ ಜಪಾನಿ ಸೈನಿಕ ಓರ್ವನೂ ಸಿಗಕೂಡದೆಂಬುದೇ ನಿರ್ಧಾರ. ಜರ್ಮನಿಯೊಂದಿಗೆ ಭುಜಕ್ಕೆ ಭುಜ ಕೊಟ್ಟು ಹೋರಾಡಿ ಬಿಳಿ ದೇಶಗಳನ್ನು ಕಬಳಿಸಬೇಕೆಂಬ ಸಾಹಸಕ್ಕೆ ಜಪಾನು ಕೈಹಾಕಿದೆ. ಚಿಕ್ಕ ಬಾಯಿಗೆ ದೊಡ್ಡ ತುತ್ತು. ಯುದ್ಧದ ಮಡುವಿನಲ್ಲಿ ಜಿಗಿದು ರಕ್ತಸ್ನಾನ ಮಾಡಿದೆ. ಜರುಗಲಿ ಅದರ ಜೀವತ್ಯಾಗದ ಕತೆ. ಯುದ್ಧಕಾಲದಲ್ಲಿ ಯಾವುದಕ್ಕೆ ಬೆಲೆ ಹೆಚ್ಚಲಿಲ್ಲ? ಕತ್ತೆ ಕುದುರೆಗಳು ಐರಾವತದಂತೆ ಕಂಡಾಗ ಯುದ್ಧ ಚಟಗಾರನಾದ ಚರ್ಚಿಲ್ ದೊಡ್ಡವ ಏಕಾಗಬಾರದು? ಕಸಕ್ಕೂ ಕಳೆ ಬಂದಿದ್ದಿತು. ಬೆಳ್ಳುಳ್ಳಿಯ ಸಿಪ್ಪಿಗೂ ಬೆಲೆ ಏರಿದ್ದಿತು. ಬೆಲೆ ಕಳೆದುಕೊಂಡಿದ್ದುದು ಮಾನುಷ್ಯತ್ವ ಮಾತ್ರ. ವ್ಯಾಪಾರಕ್ಷೇತ್ರವನ್ನು ಹೆಚ್ಚಿಸುವ ಅವಸರವಿದೆ ಬ್ರಿಟಿಶರಿಗೆ. ಆದಷ್ಟು ಆಕ್ರಮಣ ಮಾಡಬೇಕೆಂಬ ಚಪಲತೆ ಇದೆ. ನೆಲಗಳ್ಳತನ ಅವರದೇ ಆದೊಂದು ವೈಶಿಷ್ಟ್ಯ. ಹುರಿದುಂಬಿಸಲು ಅಮೇರಿಕೆಯ ಬಂಡವಾಳವಿದೆ. ಬಾಂಬುಗಳನ್ನೊದಗಿಸುವ ಭಂಡತನವೂ ಇದೆ. ಮುಂದೆ ನಿಂತು ಸಾಲಾಗಿ ಸಾಯಲು, ಸುಟ್ಟು ಬೂದಿಯಾಗಲು ಫ್ರೆಂಚರು ಕಾದಿದ್ದಾರೆ. ನಿನ್ನ ಕಿಸೆಯಲ್ಲಿಯ ಕಟ್ಟಕಡೆಯ ಕಾಲಾಣೆಯನ್ನೂ ಖರ್ಚು ಮಾಡಲು ನಾನೆಂದೂ ಅಂಜುವುದಿಲ್ಲ 'ಎಂಬ ಉದಾರಿಯಂತೆ ಫ್ರಾನ್ಸ್ ಮಕ್ಕಳೆಲ್ಲರನ್ನೂ ಕೊಲ್ಲಲು ಕೊಡಲು ನಾನು ಅಂಜುವದಿಲ್ಲ ಎಂದು ಬ್ರಿಟಿಶ ಭೂಪರು ಧಾರಾಳತೆಯನ್ನು ಪ್ರದರ್ಶಿಸಿದ್ದಾರೆ. ಅವರಿಗೆ ಯುದ್ಧ ಬೇಕೇ ಬೇಕು. ಸ್ಟಾಲಿನ್ನನ ವ್ಯಾಪಕತ್ವಕ್ಕೆ ಹದ್ದು ಗಡಿಗಳಿಲ್ಲ. ಕಣ್ಣಿಗೆ ಕಂಡಷ್ಟು ಮಾತ್ರ ಅವರದಲ್ಲ, ಮನಸ್ಸಿನಲ್ಲಿ ಮೂಡಿದಷ್ಟೂ ಅವರದೇ ಆಗಬೇಕು. ಭೂಲೋಕ, ಕೈಲಾಸ, ಪಾತಾಳ, ನಾಗಲೋಕ, ವಿಷ್ಣುವಿನ ವೈಕುಂಠ ಸಾಲದಾದರೆ ಸಪ್ತ ಸಮುದ್ರಗಳೂ ರಶಿಯವೇ ರಶಿಯವಾದರೆ ಸ್ಟಾಲಿನರ ಎದೆ ಬೇಯುತ್ತದೆ. ಆದರೆ ರಶಿಯಾಕ್ಕೆ ಬೇಕಾದುದು ತನ್ನ ನಿರಂಕುಶ ಪ್ರಭುತ್ವವಲ್ಲ. ವೈಶ್ಯಮನೋ

ವೃತ್ತಿಯ ಏಕ ಸ್ವತಂತ್ರದ ವ್ಯಾಪಾರೀ ಗುತ್ತಿಗೆಯಲ್ಲ. ತಾನು ಹಿಡಿದ ಮೊಲಕ್ಕೆ ಮೂರು ಕಾಲು ಎಂಬ ಹಟಮಾರಿತನ ಮಾತ್ರ ಪೂರ್ತಿ ಇದೆ. ತನ್ನ ಅರಿಷಣ ಬಣ್ಣಕ್ಕೇ ಅದು ಬಣ್ಣವೆಂದೀತು. ತನ್ನ ಮತವೇ ಜಗತ್ತಿನ ಮತವಾಗಬೇಕು. ಸಾಲದುದಕ್ಕೆ ಜರ್ಮನಿಯ ಕಡೆಗೆ ಬೆರಳು ತೋರಿಸಿ ನೆಪವನ್ನು ಮುಂದು ಮಾಡುವ ಅನುಕೂಲತೆ ದೊರೆಯಿತು. ರಣರಂಗಕ್ಕಿಳಿದ ಎರಡೂ ಪಂಗಡಗಳೂ ರಶಿಯಕ್ಕೆ ವಿರೋಧಿಗಳೇ. ಆದರೆ ಸದ್ಯಕ್ಕೆ ಇಷ್ಟೇ ಸಾಕು. ಒಬ್ಬ ವಿರೋಧಿಯಿಂದ ಇನ್ನೊಬ್ಬ ವಿರೋಧಿಯನ್ನು ಕೊಲ್ಲಿಸುವುದೇ ಯುದ್ಧಕಾಲದ ಜಾಣತನ. ರಶಿಯಾಕ್ಕೆ ಯುದ್ಧ ಹೂಡಲು ಕೈ ಚುಟುಗುಟ್ಟಿದುದಕ್ಕೆ ಇದೂ ಒಂದು ಕಾರಣವಿರಬಹುದು. ಚಿಕ್ಕ ಪುಟ್ಟ ದೇಶಗಳಿಗಂತೂ ಯುದ್ಧದ ಬಿಸಿ ಚೆನ್ನಾಗಿ ತಾಗಿದೆ. ಬೇಕು ಬೇಡಗಳ ಪ್ರಶ್ನೆ ಅವುಗಳದಲ್ಲ. ಯುದ್ಧದಲ್ಲಿ ಎಳೆದು ತರಲ್ಪಟ್ಟಿವೆ. ನೀರಿನಲ್ಲಿ ಬಿದ್ದ ಮೇಲೆ ಆದಷ್ಟು ಈಸಬೇಕು, ಇಲ್ಲವೆ ಮುಳುಗಬೇಕು. ಯುದ್ಧ ಆ ಜನತೆಗೆ ತಪ್ಪದು.

ಗೆದ್ದವರು ನಮ್ಮವರು ಎಂಬುದು ಭಾರತದ ಸದ್ಯದ ಸ್ಥಿತಿ. ಗೆದ್ದ ಎತ್ತಿನ ಬಾಲ ಹಿಡಿಯುತ್ತದೆಂದು ಇದರ ಅರ್ಥವಲ್ಲ; ಸರ್ವಥಾ ಅಲ್ಲ. ಯುದ್ಧದಲ್ಲಿ ಗೆದ್ದವರು ನಮ್ಮನ್ನೂ ಗೆದ್ದಂತೆಯೇ. ಅವರು ನಮ್ಮವರೇ—ಅಂದರೆ ನಾವು ಅವರವರೇ ಎಂದರ್ಥ. ಇದಕ್ಕಂತೂ ಚ್ಯುತಿಯಿಲ್ಲ. ಬ್ರಿಟಿಶ ದವಡೆಯಿಂದ ಜಪಾನ ದವಡೆಗೆ ಮಾರ್ಪಾಟು! ಇದಕ್ಕಾಗಿ ಯಾವ ಭಾರತೀಯ ಹೋರಾಡಬೇಕು? ಯಾವ ಭಾರತೀಯ ಎದೆ ತುಂಬಿಬಂದು ಸಿಂಹಗರ್ಜನೆ ಮಾಡಬೇಕು? ಶೂರನಂತೆ ಕಾದಾಡಿ ಶತ್ರುವನ್ನು ಸುಡಲು ಯಾವ ಭಾರತೀಯನಿಗೆ ಹುಮ್ಮಸ ಹುರುಪುಗಳು ಬಲಗೊಡಬೇಕು? ಶತ್ರು ಯಾರು, ಮಿತ್ರನಾರು? ಯಾರ ಸಲುವಾಗಿ ಯಾರೊಡನೆ ಯುದ್ಧ? ಮೇರೆದಪ್ಪಿ ಬರುತ್ತಿದ್ದ ಈ ಎಲ್ಲ ವಿಚಾರಗಳಿಂದ ಉಮೇಶನ ತಲೆ ಕಾದು ತಲೆಯ ಮೇಲಿನ ಟೊಪ್ಪಿಗೆ ನಿಲ್ಲದಾಯಿತು. ವೀರಯೋಧನ ಪೋಷಾಕಿನಲ್ಲಿದ್ದ ಉಮೇಶನ ಹೃದಯ ಬಾಯಿ ಬಿಡಹತ್ತಿತು. ಮನದಲ್ಲೊಂದು ಅಗ್ನಿಜ್ವಾಲೆ ಎದ್ದಿತು. ಏತಕ್ಕಾಗಿ ಈ ಯುದ್ಧ ಎಂಬ ಉದ್ಗಾರ ತಾನಾಗಿ ಬಾಯಿಂದ ಹೊರಬಿದ್ದಿತು. ಆವೇಶದಲ್ಲಿ ತಲೆಯ ಮೇಲಿದ್ದ ಟೊಪ್ಪಿಗೆಯನ್ನು ಕಿತ್ತಿ ಬೀಸಿ ನೆಲಕ್ಕೊಗೆದ.

ನಾಟಕದಲ್ಲಿಯ ಪಾತ್ರಧಾರನಂತೆ "ಈ ಯುದ್ಧ ಏತಕ್ಕಾಗಿ ?" ಎಂದು ಗಟ್ಟಿಯಾಗಿ ಆರ್ಭಟದಿಂದ ಚೀರಿದ. ಹಿಂದೆಯೇ ಬಂದಿತು ಉತ್ತರ. ಡಣ್ ಡಣ್ಣೆಂಬ ಊಟದ ಗಂಟೆ! ಕೆಳಗೆ ಬಿದ್ದಿದ್ದ ಟೊಪ್ಪಿಗೆಯನ್ನು ಬಾಗಿ ತೆಗೆದು ಕೊಂಡು ದೂಳು ಜಾಡಿಸಿ ತಲೆಗಿಕ್ಕಿಕೊಂಡ. ನಾಯಿಯಂತೆ ಅನ್ನದ ಮನೆಗೆ ಸಾಗಿದ. ಹೇಡಿಯಂತೆ ಅನ್ನದ ಮುಂದೆ ಕುಳಿತ. ಕೈಲಿದ್ದ ಅನ್ನ ಬಾಯಿಗೆ ಬರುವ ಮುನ್ನ ಬಂದೇಬಿಟ್ಟಿತು ದೇವದತ್ತವಾದ ರಂಗೂನಿನ ಪತನ. ಅಳುತ್ತ ಒಳಬಂದಿದ್ದ ಉಮೇಶ ನಗುತ್ತ ಹೊರಬಂದು ಜಪಾನಿಯರ ಸೆರೆಯಾಳಾದ. ಹಿಂದೆಯೇ ಜಡಿದರು ಅವನ ಹಣೆಗೆ 'ಜೈ ಹಿಂದ' ಮುದ್ರೆಯನ್ನು. ಸತ್ತ ನಾಯಿಗೆ ಈಗ ಸ್ವರ್ಗ ದೊರೆಯಿತು— ಇಂದು ಉಮೇಶ (I. N. A.) ಆಯ್ಯನ್ಯೈದಲ್ಲಿ! ಕಸವನ್ನು ಹಸಮಾಡಿಕೊಂಡ ಕ್ರಾಂತಿವೀರ ಸುಭಾಸರು ಮಾಡಿದ ಮಹದುಪಕಾರವಿದು. ಮೀನ-ಮೇಷ ಮಾಡುತ್ತಿದ್ದ ಕಾಂಗ್ರೆಸ್ ಗಂಟಲಿಗೆ ಬಹು ದೊಡ್ಡ ಕುತ್ತಾಗಿದ್ದರು. ನೀರು ಇಳಿಯದ ಗಂಟಲಲ್ಲಿ ಕಡುಬು ಹಿಡಿಯುವುದು ಹೇಗೆ ಎಂದು ಕಾಲು ಕಿತ್ತಿದರು ರಾಷ್ಟ್ರದೂತ ನೇತಾಜಿಯವರು. ಅವರು 'ಜೈ ಹಿಂದ' ಎಂದು ಗರ್ಜಿಸಿದಾಗ ಜಗತ್ತೇ ನಡುಗಿತು. ಅವರ ಪ್ರತಾಪದ ನೆಳಲಲ್ಲಿ ಉಮೇಶನಂತಹ ಸಾವಿರಾರು ಮರಿ ಗಳಿಗೆ ಎಡೆ ದೊರೆಯಿತು. ದೇಹವನ್ನು ವಿಕ್ರಯ ಮಾಡಿಕೊಂಡು ಬಂದವರ ಆತ್ಮದ ಉದ್ಧಾರವಾಯಿತು ಅಕಸ್ಮಾತ್ತಾಗಿ, ಎಂದು ಉಮೇಶ ಹಿರಿಹಿರಿ ಹಿಗ್ಗಿದ. ಎಲ್ಲರೊಡನೆ ತಾನೂ 'ಜೈ ಹಿಂದ್' ಎಂದು ಚೀರಿ ಜಿಗಿದಾಗ ಒಳ ದನಿಯೊಂದು ಅಣಕಿನ ನಗು ನಕ್ಕಿತು.

## ೧೪. ನಿರ್ಮಾಲ್ಯ ಪುಷ್ಪ

ಹಾಳು ಹಂಪೆಯಲ್ಲಿ 'ನಾಗರಿಕ'ನನ್ನು ಕಂಡ ಯಮ್ಮಾರಶ್ರೀಯವ ರಿಗೆ, ಹಿಂದೆಯೇ ಇರುವ ಕಮಲಾಪುರ ಆದೇಕೋ ಕಂಡಂತಿಲ್ಲ. ಅಲ್ಲಿಯ ನಾಮಗಳ ಮೇಲೆ ಅವರ ಬಿದ್ದಿಲ್ಲ. ತುಂಗಭದ್ರೆ ಹರಿದು ಹುಲುಸು ಮಾಡಿಕೊಟ್ಟಿದ್ದಾಳೆ ಸುತ್ತುಮುತ್ತಲಿನ ಭೂಮಿಯನ್ನು. ಕೃಷ್ಣದೇವರಾಯ ಕೊಟ್ಟು ಮರೆತ ಅಥವಾ ಮರೆತು ಕೊಟ್ಟ ಜಹಗೀರುಗಳನ್ನು ಪಡೆದ ಬ್ರಾಹ್ಮ

ಣಿಕೆ ಕುಳಿತು ಉಣ್ಣುತ್ತಿದೆ ಕಮಲಾಪುರದಲ್ಲಿ. ಆಳರಸರು ನಿರ್ನಾಮ ವಾದರೂ ನಾಮಧಾರಿಗಳು ಮಾತ್ರ ದುಂಡಾಗುತ್ತಲೇ ಇದ್ದಾರೆ, ಬೆಲ್ಲದ ಬೆಲೆ ಏರಿದಂತೆಲ್ಲ, ಬತ್ತದ ಕಣಜ ಬಲಿತಂತೆಲ್ಲ. ಈ ಭೋಗಿಗಳ ಮನೆತನಗಳು ಊರಲ್ಲಿ ಹಲವೇ ಇದ್ದರೂ ಅವರ ಮನೆಗಳು ಮಾತ್ರ ಓಣಿಗೆಂಟು. ಚಿಕ್ಕ ತಮ್ಮನೊಬ್ಬನಿಗೆ ಮದುವೆಯಾಗಿ ಮಡದಿ ಮನೆಗೆ ಬಂದಳೆಂದರೆ ಆಯಿತು, ಹಿಂದೆಯೇ ಆಗಬೇಕು — ಪಂಚಾಯತಿ, ಪಾಲುಪಟ್ಟಿ, ಇನ್ನೊಂದು ಮನೆ ಅವನಿಗಾಗಿ. ಇದು ಒಂದೇ ಜಾತಿಯ ವೈಶಿಷ್ಟ್ಯವೆಂದರೆ ಯಾರ ಮೇಲೆ ಯಾರೂ ಸಿಟ್ಟಿಗೇಳಲಿಕ್ಕಿಲ್ಲ. ತಂಟೆ ತಗಾದಿಗಳನ್ನು, ಕಲಹ ಕಂಟಕಗಳನ್ನು ಕಲಿಸುವ ಕಾಲೇಜೊಂದನ್ನು ತೆಗೆಯಲು ಇದೊಂದು ಉತ್ತಮವಾದ ಊರು. ಹೊಸಪೇಟೆಯ ವಕೀಲರಿಗೆ ಕಮಲಾಪುರವೇ ಕಲ್ಪವೃಕ್ಷ, ಕಾಮಧೇನು. ಏಕತಂತ್ರ ಜಗತ್ತಿನ ಹುಚ್ಚುಹಿಡಿದವರು ಒಂದು ಬಾರಿಯಾದರೂ ಬಂದು ನೋಡಲೇಬೇಕು ಕಮಲಾಪುರದ ಒಳಜಗಳಗಳನ್ನು. ಬರೀ ಕಮಲಾ ಪುರಕ್ಕೇ ಬೇಕು ಕನಿಷ್ಟಪಕ್ಷಕ್ಕೆ ಎರಡು ಜಗತ್ತುಗಳು. ಕುಳಿತು ಉಣ್ಣುವ ಸುಖವನ್ನು ದೇವರು ಕೊಟ್ಟಾಗ ಉಂಡು ಸುಮ್ಮನಿರಲು ಯಾವ ಪ್ರಾಣಿಗೆ ತಾನೆ ಸಾಧ್ಯ? ಕೋರ್ಟಿನಲ್ಲಿ ವ್ಯಾಜ್ಯವಿಲ್ಲದವನೆಂದರೆ ಅವರ ದೃಷ್ಟಿಯಲ್ಲಿ ಒಂದೇ ಹೆಂಡತಿಯುಳ್ಳ ನವಾಬನಂತೆ— ಅಷ್ಟುದರಿದ್ರ! ಎರಡು ಮಠಗಳ ತೀರ್ಥದ ಜಟಾಪಟಿಯಾಗಿ ಹೈಕೋರ್ಟು ಪ್ರೀವಿಕೌನ್ಸಿಲುಗಳನ್ನು ಕಂಡು ವ್ಲೋಂಥ ಜಜ್ಜಿಗಳ ತೀರ್ಪು ಪಡೆಯಿತು ಕಟ್ಟಕಡೆಗೆ. ರಾಯರ ಮಠದವನ ಬಾಯಿಂದ ಉತ್ತರಾದಿ ಮಠವೆಂದಾಗಲಿ, ಉತ್ತರಾದಿ ಮಠದವನ ಬಾಯಿಂದ ರಾಯರ ಮಠವೆಂದಾಗಲಿ ಆಕಸ್ಮಾತ್ತಾಗಿ ಬಂದುದಾದರೆ ನಾಲಗೆ ಸೀಳಿಸಿ ಉಪ್ಪು ತುಂಬಬೇಕಾದೀತು. ಪರಸ್ಪರವಾಗಿ 'ಬೇರೆ ಮಠ'ವೆಂದೇ ಕರೆಯು ತಕ್ಕದ್ದು. ಹಳೆಯ ಬಳಗವೆಂಬ ಮೋಹದಿಂದಾಗಲಿ, ಹೆಂಡತಿಯ ತೌರೆಂಬ ಹಂಬಲಕ್ಕಾಗಲಿ ಮಗಳನ್ನು ಬೇರೆ ಮಠದವನಿಗೆ ತಾಳಿ ಕಟ್ಟಿ ಕೊಟ್ಟುಬಿಟ್ಟ ರಂತೂ ಅವಳು ಸತ್ತಂತೆಯೇ ಸರಿ, ಈ ಮನೆಗೆ. ಅವಳಿಗೆ ತೌರ ಆಸೆ ಅನವಸರ. ಸಿಹಿ ನೀರಿನ ಬಾವಿಯ ಮೇಲೆ ಬರುತ್ತಿದ್ದ ಸನ್ನಿವೇಶಗಳೇ ಸಾಕು ಕಮಲಾಪುರದ ಹೃದಯಕ್ಕೆ ಕನ್ನಡಿ ಹಿಡಿಯಲು. ತಾಯಿ ಬಾವಿಯಿಂದ ನೀರು ತೆಗೆದು ರಾಟೆಯ ಮೇಲೆ ಬಿಟ್ಟ ಹಗ್ಗವನ್ನು ಮಗಳೂ ಮುಟ್ಟು

ವಂತಿಲ್ಲ. ತಾಯಿಯದು ಬೇರೆ ಮಾತ. ಮಗಳ ಹಗ್ಗ ತಾಯಿಗೆ ಆತ್ಮ ಹತ್ಯಕ್ಕೂ ಬರುವಂತಿಲ್ಲ! ಇವರ ಈ ಹುಚ್ಚು ಕಂಡು ನಗುವವರು ಇದ್ದಿಲ್ಲ ವೆಂತಲ್ಲ. ಆದರೆ ಅವರ ಹುಚ್ಚು ಇನ್ನೊಂದು ಬಗೆಯದಿದ್ದಿತು. ಸೂರ್ಯ ಲಿಂಗವಿಲ್ಲದ ಭವಿಯಾದ ಕಾರಣ ಸೂರ್ಯರಶ್ಮಿ ಬೀಳದ ಕತ್ತಲು ಬಾವಿಗಳ ನೀರು ತಂದು ಶಿವಪೂಜೆ ಮಾಡಿ ಕೈಲಾಸದ ಗುತ್ತಿಗೆ ಹಿಡಿಯುವ ಸರದಾರ ರವರು. ಇಂಥ ಊರಲ್ಲಿ ತನ್ನ ಅಜ್ಞಾತವಾಸವನ್ನು ಕಳೆಯಬೇಕಾಯಿತು ನಾಗಮ್ಮ.

ಚೊಚ್ಚಲು ಮಗನ ತಾಯಿಯಾಗಿದ್ದ ನಾಗಮ್ಮನಿಗೆ ಜೀವನದಲ್ಲಿ ಉಳಿದುವೆಂದರೆ ಎರಡೇ. ಕಣ್ಣು ಬಾಯುವಂತೆ ಹಗಲಿರುಳು ಅಳುವುದು. ಆಗೊಮ್ಮೆ ಈಗೊಮ್ಮೆ ತೊಟ್ಟಿಲಲ್ಲಿ ಮಲಗಿದ್ದ ಮಗುವನ್ನು ನೋಡಿ ಮತ್ತೆ ಅಳುವದು. ರಂಗೂನಿನ ಪತನವಾದ ದಿನವೇ ಸುಪುತ್ರನನ್ನು ಹೆತ್ತಿದ್ದಳು. ಆಮೇಲೆ ಅವಳ ಜೀವನದಲ್ಲಿ ಕಾರ್ಗತ್ತಲೆಯೇ ಕವಿಯಿತು. ಉಮೇಶನ ಪತ್ರಗಳ ಮಾತಂತೂ ಹಾಗಿರಲಿ, ಅವನು ಜೀವಂತನಿರುವನೋ ಇಲ್ಲವೋ ಎಂಬುದೇ ಸಂಶಯದ ಮಾತಾಗಿ ಉಳಿಯಿತು. ಅಣ್ಣ ಹೇಳುತ್ತಿದ್ದ ಪೊಳ್ಳು ಸಮಾಧಾನಗಳಿಂದ ದುಃಖ ಶಮನವಾಗುವುದಾದರೂ ಎಂತು? ಉಗುಳನ್ನು ನುಂಗಿ ಹೊಟ್ಟೆ ತುಂಬಿಸಿಕೊಳ್ಳುವ ಸಾಹಸ ಮಾಡಿದಂತೆ ಆಗಿದ್ದಿತು ಅವಳ ಸ್ಥಿತಿ.

"ರಾಮಮೂರ್ತಾಚಾರ್‍ರು ಇದ್ದಾರೇನು ಮನ್ಯಾಗೆ?" ಎಂದು ಹೊರ ಬಾಗಿಲಲ್ಲಿ ಯಾರೋ ಕೂಗಿದಂತಾಯಿತು. ಅಡ್ಡ ಕಟ್ಟಿದ ಗುಡಾರವನ್ನು ಕೊಂಚ ಮರೆ ತೆರೆದು ಕುಳಿತಲ್ಲಿಂದಲೇ ನಾಗಮ್ಮ ಬಾಗಿ ನೋಡಿದಳು. ಚಿರ ಪರಿಚಿತರಾದ ಮಠದ ಆಚಾರ್ಯರ ಗುರುತು ಹತ್ತಿತು ಅವಳಿಗೆ. ಕೈಲಿದ್ದ ಮಗುವನ್ನು ತೊಟ್ಟಿಲಲ್ಲಿ ಮಲಗಿಸಿ, ನಾಲ್ಕು ಹೆಜ್ಜೆ ಮುಂದೆ ಬಂದು, ಹೊರನಿಂತ ಆಚಾರ್ಯರನ್ನು ಒಳಗೆ ಕರೆದಳು.

"ಸ್ನಾನಕ್ಕೆ ಇಳದಾರೆ, ಒಳಗೆ ಬರ್‍ರಿ, ಪರಿಮಳಾಚಾರ್‍ರೆ."

ಇವಳ ದನಿ ಕಿವಿಯಲ್ಲಿ ಬೀಳುತ್ತಲೇ ಮಠದ ಆಚಾರ್ಯರಿಗೆ ಮೈಲಿಗೆಯಾಯಿತು. 'ನಾರಾಯಣ, ನಾರಾಯಣ' ಎಂದು ಅವಳಿಗೆ

ಕೇಳುವಷ್ಟು ಮೆಲ್ಲನೆ ಮನಸ್ಸಿನಲ್ಲಿ ಅಂದುಕೊಂಡು, ಅಡ್ಡ ಹೋದ ಬೆಕ್ಕನ್ನು ಶಪಿಸುವವರಂತೆ ಏನನ್ನೋ ವಟಗುಟ್ಟುತ್ತಾ ಹಿಂದಿರುಗಿಬಿಟ್ಟರು.

" ಯಾರೇ ನಾಗು ಬಂದಿದ್ದವರು ? " ಎಂದು ಹೊರಬಂದ ಸುಬ್ಬಕ್ಕ

" ಮಠದಾಚಾರ್ಯರು ಇದ್ದಂತಿತ್ತು, ಅತ್ತಿಗಿ. "

" ಕರೀಲಿಲ್ಲ ಯಾಕೇ ಒಳಗೆ, ಚಾಪಿ ಹಾಸಿ ಕೂಡಿಸಬೇಕಾಗಿತ್ತು. "

" ಅಣ್ಣ ಸ್ನಾನಕ್ಕಿಳದಾರೆ, ಒಳಗೆ ಬರ್ರಿ ಅಂದೆ. ಅವರು ಹಾಗೇ ಹೋಗಿಬಿಟ್ಟರು. "

ದೇವರ ಕಟ್ಟೆಯ ಮೇಲಿದ್ದ ರಾಮಮೂರ್ತಾಚಾರ್ಯರಿಗೆ ಹೇಳಿ ಆಚಾರ್ಯರನ್ನು ಕರೆತರಲು ಹೊರ ಹೊರಟಳು ಸುಬ್ಬಕ್ಕ. ಇಷ್ಟರಲ್ಲಿಯೇ ವರ್ ವರ್ ಎಂದು ಚೀರಿ ಉಸಿರು ಹಿಡಿಯುತ್ತಿದ್ದ ಮಗುವನ್ನು ಕೈಲೆತ್ತಿ ಮುದ್ದಾಡಿ ತೊಟ್ಟಿಲಲ್ಲಿ ಮಲಗಿಸಿ, ದನಿಯನ್ನು ಮೇಲೆತ್ತಿ ಬೀಸಿ ಬೀಸಿ ನಾಗಮ್ಮ ಹಾಡಹತ್ತಿದಳು.

" ಜನಕರಾಜನ ಮಗಳು ವನಕೆ ತೊಟ್ಟಿಲ ಕಟ್ಟಿ
ಲವಕುಶರೆಂದು ಹೆಸರಿಟ್ಟು, ಹೆಸರಿಟ್ಟೊ,
ಆಕಿ ಸೀತಾದೇವಿ ನಗುತ ಕಳೆದಾಳು ವನವಾಸಾ. "

" ಆಗಮಾರ್ಥಂ ತು ದೇವಾನಾಂ ಗಮನಾರ್ಥಂ ತು ರಾಕ್ಷಸಾಂ " ಎನ್ನುತ್ತ ರಾಮಮೂರ್ತಾಚಾರ್ಯರು ಘಂಟಾನಾದವನ್ನು ಮಾಡಿ ಪೂಜೆಗೆ ಕುಳಿತರು. ಹಸಿರು ಶಾಲನ್ನು ಹೊದ್ದ ಪರಿಮಳಾಚಾರ್ಯರು ಬೆರಳಿನಲ್ಲಿಯ ಪವಿತ್ರದುಂಗುರವನ್ನು ಕೆಳಗೆ ಮೇಲೆ ಸರಿಸಿಕೊಳ್ಳುತ್ತ ಹೊಸ್ತಿಲಲ್ಲಿ ಕಾಲಿಟ್ಟರು.

" ದೇವರ ಮನ್ಯಾಗ ಕೂತಾರವರು. ನೀವು ಸೀದ ಒಳಗ ನಡ್ರಿ. ನೋಡಿಕೊಂಡು ಬರ್ರಿ. ಬಹಳ ಕತ್ಲು ಅದೆ. ಬಾಣಂತಿ ಮನಿ ಅಂದ್ರೆ ಇಷ್ಟೇ ಸೈ " ಎಂದು ಏನೇನನ್ನೋ ಹೇಳುತ್ತಾ ಸುಬ್ಬಕ್ಕ ಹಿಂದೆ ಬಂದಳು. ಪರಿಮಳಾಚಾರ್ಯರು ನೇರವಾಗಿ ದೇವರ ಮನೆಗೆ ಧಾವಿಸಿದರು. ಪೂಜೆಗೆ ಕುಳಿತಿದ್ದ ರಾಮಮೂರ್ತಾಚಾರ್ಯರು ತಕ್ಷಣವೇ ಎದ್ದು ತಾವು ಕುಳಿತಿದ್ದ ಪೀಠವನ್ನು ಆವರಿಗೆ ಹಾಕಿದರು. ಅದನ್ನಲಂಕರಿಸಿದ ಪರಿಮಳಾ

ಚಾರ್ಯರು ಕಾಲು ಚಾಚಿದುದನ್ನು ಕಂಡು ರಾಮಮೂರ್ತಾಚಾರ್ಯರು ನಮಸ್ಕರಿಸಿ ಸುಬ್ಬಕ್ಕನಿಗೂ ಕಣ್ಣು ಸನ್ನೆ ಮಾಡಿದರು. ಅವಳೂ ಬೆರಳಿಂದ ನೆಲ ಮುಟ್ಟಿ ನಮಸ್ಕರಿಸಿ, ಗಲ್ಲಕ್ಕೆ ಕೈ ಕೊಟ್ಟು ಹೊರಬಾಗಿಲಲ್ಲಿ ನಿಂತಳು. ಪರಿಮಳಾಚಾರ್ಯರು ಗೊಗ್ಗರ ಗಂಟಲಿಂದ ಮಾತಿಗೆ ಶ್ರೀಕಾರ ಹಾಕಿದರು.

" ಶ್ರೀಗಳವರೂ....ನನ್ನ ಕೇಳಿದರೆ....ದ್ವಾದಶಿ ಬರ್‍ತಾರಂತೆ, ರಾಯಸ ಬಂದದೆ ಇವತ್ತು. "

" ಮೂರು ನಾಲ್ಕು ವರ್ಷ ಆದುವಾಗಲೇ ಅವರು ಬಂದು. ಯಾವಾಗ ಬರ್‍ತಾರಂತ್ರೀ ಆಚಾರ್‍ರೇ ? " ಸುಬ್ಬಕ್ಕ ಕಣ್ಣರಳಿಸಿ ಕೇಳಿದಳು.

" ನನ್ನ ಕೇಳಿದರೆ....ದ್ವಾದಶಿ ಬರ್‍ತಾರಮ್ಮಾ.... "

" ಭಾಳ ಸಂತೋಷ. ನನ್ನ ತುಳಸಿ ದಳಾಂತೂ ತಗದೇ ಇಟ್ಟೇನಿ, ಅವರಿಗೆ ಸಲ್ಲತಕ್ಕದ್ದು ಅಂತ. ನನ್ನ ಅಳಿಲಸೇವೆಗೆ ಎಂದೂ ಅಪಚಹೆ ಇಲ್ಲ. " ರಾಮಮೂರ್ತಾಚಾರ್ಯರು ನುಡಿದರು.

" ಆದಂತೂ ಆತಲ್ಲ....ನನ್ನ ಕೇಳಿದರೆ "

ದೊಡ್ಡ ದನಿಯಲ್ಲಿ ನಾಗಮ್ಮನ ಹಾಡು ಕೇಳಿಬಂದಿತು.

" ಲವಕುಶರೆಂದು ಹೆಸರಿಟ್ಟು, ಹೆಸರಿಟ್ಟೊ,

ಆಕೆ ಸೀತಾದೇವಿ ನಗುತ ಕಳೆದಾಳು ವನವಾಸಾ. "

ಪರಿಮಳಾಚಾರ್ಯರು ಮೋರೆ ಕಿವುಚಿಕೊಂಡರು.

" ಆ ಹೆಣ್ಮಗಳ್ಗೆ....ನನ್ನ ಕೇಳಿದರೆ....ಹಾಡಬ್ಯಾಡ ಅನ್ರಿ.... "

ಸುಬ್ಬಕ್ಕ ಹೊರಹೋಗಿ ಏನೋ ಪಿಸಿಪಿಸಿ ಹೇಳಿದಳು. ನಾಗಮ್ಮ ಸುಮ್ಮನಾದಳು. ರಾಮಮೂರ್ತಾಚಾರ್ಯರು ಒಂದು ಬಾರಿ ದುರದುರನೆ ನೋಡಿ ಮುಂದಿನ ಮಾತಿಗಾಗಿ ಹಾದಿಕಾದರು.

" ನನ್ನ ಕೇಳಿದರೆ....ಅಲ್ಲ, ಈಗ ನೋಡ್ರೀ ರಾಮಮೂರ್ತಾಚಾರ್‍ರೆ.... ಸ್ವಾಮಿಗಳು.... "

" ಆದ್ಯಾಕಿಷ್ಟು ಗುಪ್ತಗುಪ್ತಗೆ ಖಮ್‌ಖಮ್ಗೆ ಮಾಡ್ತೀರಿ ? ಅಂದು ಬಿಡ್ರಿ ಮನಸಿನ್ಯಾಗಿಂದು. ಈಗೇನು ಸ್ವಾಮಿಗಳದು ಖಟ್ಲೆ ಜಾಸ್ತಿ ಆಗಿ

ಗೀಗೇದೋ ಏನು ಮಣ್ಣು ? ಹೇಳಿಕೇಳಿ ವಿದ್ಧ ಕಾಲ. ಎಲ್ಲಾನೂ ಜಾಸ್ತಿ ಆಗೇದ" ಸುಬ್ಬಕ್ಕ ಆಚಾರ್ಯರ ಮುಖ ನೋಡಿದಳು.

"ಜಾಸ್ತಿ ಆದರೂ ಆತು, ಕಡಿಮೆ ಆದರೂ ಆತು. ಕೆರಿ ಹಿಂದಿನ ಗದ್ದಿ ನೆಲ್ಲು ನನ್ನದಲ್ಲ ಅಂತ ಇಟ್ಟುಬಿಟ್ಟೇನಿ. ಎಷ್ಟಿದ್ರೂ ಅವರದೇ ಯಾಕ್ರೀ ಪರಿಮಳಾಚಾರ್ರೇ" ಎಂದು ಸುಬ್ಬಕ್ಕನ ಸೂಚನೆಗೆ ಉತ್ತರರೂಪವಾಗಿ ಹೇಳಿ ದೇವರ ಪೆಟ್ಟಿಗೆಯನ್ನು ಮುಂದೆಳೆದುಕೊಂಡರು ರಾಮಮೂರ್ತಾ ಚಾರ್ಯರು.

"ನನ್ನ ಕೇಳಿದರೆ...."

"ಹಾಗಂದ್ರೆ ಹ್ಯಾಗಾದೀತು, ಪರಿಮಳಾಚಾರ್ರೇ. ಗುರುಗಳ ಖಟ್ಲೆ ಅಂದಮ್ಯಾಲೆ ಕೊಡದೆ ಹಾಗೆ ಇರ್ಲಿಕ್ಕೆ ಬಂದೀತೇನು ಎಲ್ಯಾರೆ? ಯಾಕ್ರೀ ಆಚಾರ್ರೇ ?"

"ಖಟ್ಲೇದು ಹಾಗಿರ್ಲಿ. ನನ್ನ ಕೇಳಿದರೆ...."

"ಅನಾಯಸ ನಮ್ಮ ನಾದ್ನೀನೂ ಇಲ್ಲೇ ಇದ್ದಾಳೆ, ಬಾಣಂತಿ. ಆಕೀಗೂ ಇಷ್ಟು ಮುದ್ರಾಮಾಡಿಸಿ ಪುಣ್ಯ ಕಟಗೊಳ್ರಿ. ಆಕಿ ಎಂದು ಕಾಣ ಬೇಕು? ಅವರ ಮಾವನ ಮನ್ಯಾಗಂತೂ ಸೂದ್ರು ಇದ್ದಾಗೆ ಇದ್ದಾರೆ ಥೇಟು. ಆಕಿಗೂ ಮುದ್ರಾ ಮಾಡಿಸಿಬಿಡ್ರೆಪ್ಪಾ" ಅಂಗಲಾಚಿ ಕೇಳಿ ಸುಬ್ಬಕ್ಕ ಮೆಲ್ಲಗೆ ನಿಂತಲ್ಲಿಯೇ ಕುಳಿತುಕೊಂಡಳು. ಪರಿಮಳಾಚಾರ್ಯರ ಮುಖದ ಬಣ್ಣ ಕೊಂಚ ಬದಲಿಸಿತು.

"ನನ್ನ ಕೇಳಿದರೆ...."

"ಆಕೇನೂ, ದೇವ್ರು ಕೊಟ್ಟಿದ್ರೆ ಸುರುವುತಿದ್ಲು ಬಿಡ್ರಿ. ಆದರೆ ಆಕಿ ಗಂಡಂದಿಷ್ಟು ಅಡಾವುಡಿ ಆಗೇದ ಅಂತ ಇಷ್ಟು ಪಡಿಪಾಟ್ಲು ಬಡಬೇಕಾಗೇದ ಪಾಪ !" ದನಿ ತಗ್ಗಿಸಿ ಸುಬ್ಬಕ್ಕ ಕರುಣೆಯಿಂದ ನುಡಿದಳು.

"ಇದು ಎಂಥ ನ್ಯಾಯ ನೋಡ್ರಿ ! ನೂರುಗಟ್ಲೆ ಆಕಿ ಗಂಡ ದುಡಿ ದ್ರೂನೂ ಆಕಿ ಅರ್ಧಾಂಗಿ ಹುವ್ವಿಗೆ ನನ್ನ ದಕ್ಷಿಣೀನೇ ಗತಿ ಆಗಬೇಕೆ? ದೇವರ ಇಚ್ಛಾ, ಯಾಕ್ರೀ ಆಚಾರ್ರೇ?"

"ನನ್ನ ಕೇಳಿದರೆ....! ನಿಮ್ಮ ತಂಗಿ ಹೂವು ಮುಡಿಯೋದು, ನನ್ನ ಕೇಳಿದರೆ...."

"ಅದ್ಯಾಕ್ರೀ ಪರಿಮಳಾಚಾರ್ರೇ, ಹೀಗ್ಯಾಕೆ? ಆಕಿ ಹೂವು ಮುಡಿಯೋದು ಅಂದು ಮೂಗೆಳಿತೀರಲ್ಲ?" ಗದರಿಸುವ ದನಿಯಲ್ಲಿ ಸುಬ್ಬಕ್ಕ ತನ್ನ ಹರುಕುತನವನ್ನು ಸ್ಪಷ್ಟ ಮಾಡಿದಳು.

ಕೆಣಕಿದಂತಾದ ರಾಮಮೂರ್ತಾಚಾರ್ಯರು ಮಾತಿನ ಮುಂದಿನ ಧೋರಣೆಯನ್ನು ಕಾಯುತ್ತ ಸುಮ್ಮನಾದರು.

"ಅಲ್ಲಾ, ನನ್ನ ಕೇಳಿದರೆ....ನಿಮ್ಮ ನಾದಿನಿ ಗಂಡ....ನನ್ನ ಕೇಳಿದರೆ...." ಕೇಳುತ್ತ ಕುಳಿತ ಇಬ್ಬರಿಂದಲೂ ಏನೂ ಹೊರಹೊರಡದಿದ್ದುದರಿಂದ ಅನಿವಾರ್ಯವಾಗಿ ಪರಿಮಳಾಚಾರ್ಯರೇ ಮುಂದುವರಿಸಬೇಕಾಯಿತು.

"ನನ್ನ ಕೇಳಿದರೆ....ನಿಮ್ಮ ನಾದ್ನೀ ಗಂಡ....ನನ್ನ ಕೇಳಿದರೆ....ನಾನೇ ಈ ಮಾತು ಕೇಳ್ತೀನಿ ಅಂತ ತಿಳಿಬ್ಯಾಡ್ರಿ....ನನ್ನ ಕೇಳಿದರೆ....ಯಾರೋ ಆಗದವರು, ಹೌದು ಆಗದವರದೇ ಈ ಕೆಲಸ....ದಿವಾನರ ಕಿವಿವರಿಗೂ...."

ಸುಬ್ಬಕ್ಕನಿಗೆ ಈ ಮಾತನ್ನು ತಡೆಯಲಾಗಲಿಲ್ಲ. ಸೆರಗು ಅಡ್ಡಕಟ್ಟಿ ಸಡ್ಡು ಹೊಡೆದವರಂತೆ ನಿಂತೇಬಿಟ್ಟಳು.

"ಅದ್ಯಾಕ್ರಿ ಪರಿಮಳಾಚಾರ್ರೇ? ಹುಣ್ಣಿಗೆ ಬರಿ ಕೊಟ್ಟಾಗೆ ಮಾಡ್ತೀರಲ್ಲಾ ನೀವೂನೂ! ಯಾವನೋ ಪುಚ್ಚಂತ ದಿವಾನ್ರು ಕಿವಿ ಕಚ್ಚಿದಾನ? ಆ ಹುಡಿಗಿ ಪಾಪ, ದೇವ್ರೇ ದೇವ್ರೇ ಅಂತಾ ಬಾಯಾಗೆ ಅಕ್ಕೀ ಕಾಳು ಹಾಕ್ಕೊಂಡು ಕೂತದೆ. ತುರುಬಿನ ಮೇಲೆ ಬಕ್ಕಿ ಎದ್ದಾಗೆ ಈ ಫೋಟು ಬ್ಯಾರೆ ಏನು ನಿಮ್ಮದು? ಒಬ್ಬೊಬ್ಬರಿಗೆ ತಿಮುರು ಇಳಿಸಿಬಿಟ್ಟೇನು ತಿಮುರು. ಕೂಳು ಹೆಚ್ಚಾದ್ರೆ ಕುವ್ವಾಡ ಹೆಚ್ಚಿತಂತೆ." ಸುಬ್ಬಕ್ಕನ ಅಸ್ಖಲಿತ ವಾಣಿಯನ್ನು ತಡೆಗಟ್ಟುವ ಧೈರ್ಯ ಪರಿಮಳಾಚಾರ್ಯರಿಗೂ ಆಗಲಿಲ್ಲ. ಆ ಗೋಜಿಗೆ ರಾಮಮೂರ್ತಾಚಾರ್ಯರಂತೂ ಎಂದೂ ಹೋದವರಲ್ಲ.

"ನನ್ನ ಕೇಳಿದರೆ....ನನ್ನ ಕೇಳಿದರೆ...." ಎಂದು ಎರಡೆರಡು ಬಾರಿ ಪರಿಮಳಾಚಾರ್ಯರು ತಮ್ಮಷ್ಟಕ್ಕೆ ತಾವೇ ಅಂದುಕೊಂಡು ಸುಮ್ಮನಾದರು. ಅವರನ್ನು ಯಾರೂ ಕೇಳುವಂತೆಯೂ ಇರಲಿಲ್ಲ.

ಸುಬ್ಬಕ್ಕ ಎಂದರೆ ಅಳತೆ ಕೊಟ್ಟು ಮಾಡಿಸಿದ ಗಂಡುರಾಮಿ ಎಂಬುದನ್ನು ಇಡೀ ಊರೇ ಚೆನ್ನಾಗಿ ಅರಿತಿದ್ದಿತು. ನಾಲ್ಕು ಗಂಡಸರನ್ನು

ಮುರಿದು ದೇವರು ಒಬ್ಬ ಸುಬ್ಬಕ್ಕನ ಸೃಷ್ಟಿಯನ್ನು ಮಾಡಿದ್ದಾನೆಂದು ತಿಳಿದ ಯಾರೂ ಅವಳ ಬಾಯಿಗೆ ಹತ್ತುವ ಸಾಹಸವನ್ನು ಮಾಡಿದ್ದಿಲ್ಲ. ರಾಮಮೂರ್ತಾಚಾರ್ಯರನ್ನು ರಾಮಮೂರ್ತಾಚಾರ್ಯರೆಂದು ಕರೆದವರೂ ವಿರಳ. ಅವರು 'ಸುಬ್ಬಕ್ಕನ ಗಂಡ' ಎಂದೇ ಹೆಸರಾಗಿದ್ದರು. ಅರಳು ಸುರಿದಂತೆ ಅವಳು ಮಾತನಾಡುತ್ತಿದ್ದಾಗ ರಸ್ತೆಯಲ್ಲಿ ಹೋಗುವವರೆಲ್ಲರೂ ನಿಂತು ಕೇಳಿದರು.

ಏನೋ ಪ್ರಮಾದವಾಯಿತೆಂದು ಊಹಿಸಿ ನಾಗಮ್ಮ ಮೆಲ್ಲನೆ ಅಡಿಗೆ ಮನೆ ಬಾಗಿಲಿಗೆ ಬಂದು ನಿಂತಳು. ಒಲೆಯ ಮುಂದೆ ಕುಳಿತಿದ್ದ ಸುಬ್ಬಕ್ಕನ ಸಿಟ್ಟು ಕೊಳ್ಳೆಯ ಮೇಲೆ ಹೊರಳಿದ್ದಿತು. ತನ್ನಲ್ಲಿಯೇ ತಾನು—ಅಂದರೆ ಪಕ್ಕದ ಬೀದಿಯಲ್ಲಿ ಕೇಳುವಂತೆ—ವಟಗುಟ್ಟುತ್ತಿದ್ದಳು.

"ಬೆಕ್ಕು ಕಣ್ಣು ಮುಚ್ಚಿಗೊಂಡು ಹಾಲು ಕುಡೀತದಂತೆ, ಕಣ್ಣು ಮುಚ್ಚಿಕೊಂಡು. ಒಬ್ಬೊಬ್ಬಾತನ ಗೆರಿ ಎಣಿಸಬಲ್ಲೆ ನಾನು. ಸುಬ್ಬಕ್ಕ ಅಂದ್ರೆ ಏನು ತಿಳಿವಾರೋ? ಇವರೆಲ್ಲರ ಪುರಾಣಾನೂ ಬಯಲಿಗೆಳೆದೇನು, ಸ್ವಾಮಿಗಳ ಮುಂದೆ. ಆಗ ತಿಳೀಲಿ. ಅವರೇನು ನನ್ನ ಕಂದಮ್ಮಗೆ ಬಹಿಷ್ಕಾರ ಕೊಡ್ತಾರೋ, ಇಲ್ಲಾ ಊರಾಗಿನ ಥೊಡ್ಡ ಮನುಷ್ಯರಿಗೇ...."

ನಾಗಮ್ಮ ಎಂದಿಗೂ ಕೊಂಚ ಜಡಬುದ್ಧಿಯವಳಾದ್ದರಿಂದ ಸುಬ್ಬಕ್ಕನ ಸಿಟ್ಟಿನ ಕಾರಣವೇ ಹೊಳೆಯಲಿಲ್ಲ ಅವಳಿಗೆ.

"ಏನಾತ್ರೀ ಅತ್ತಿಗಿ, ಯಾರ ಸುದ್ದಿ ನೀವು ಮಾತಾಡೋದು?" ಎಂದು ಮೆಲ್ಲನೆ ಪ್ರಶ್ನಿಸಿದಳು.

ಸುಬ್ಬಕ್ಕನ ಸಿಟ್ಟಿಗೆ ಇನ್ನೂ ಹೆಚ್ಚು ಪುಟ ಸಿಕ್ಕಿತು.

"ಇಲ್ಲಿ ಹೋಗು ತಾಯಿ. ನಿನ್ನಷ್ಟಕ್ಕೆ ನೀನು ಥಣ್ಣಗೆ ಮಲಗು. ನಿನ್ನೆ ರಾತ್ರೆಯೆಲ್ಲಾ ಕಣ್ಣಿಗೆ ಕಣ್ಣು ಹಚ್ಚಿಲ್ಲ. ತಾಯಿ ತಪ್ಪಿದರೆ ಮಗ, ಮಗ ತಪ್ಪಿದರೆ ತಾಯಿ ಅಳತಾನೆ ಬೆಳಗಾತು. ಹಸಿ ಮೈಯಾಕಿ, ಹೀಗೆಲ್ಲ ತಿರಗ ಬ್ಯಾಡ. ಈಗ ಮಲಗು ಹೋಗು, ಒಂದು ತಾಸು. ಇದೆಲ್ಲ ರಬಟೆ ತೊಗೊಂಡು ನೀನೇನು ಮಾಡಿ? ನಿನಗೆ ಮುದ್ರಾ ಆಗ್ರೆ ಆತೋ ಇಲ್ಲೋ. ಅದು ಹ್ಯಾಗೆ ಸ್ವಾಮಿಗಳು ನಿನಗೆ ಹಾಕೋದಿಲ್ಲ ಅಂತಾರೋ ನೋಡೇ ಬಿಡ್ತೀನಿ. ಎಲ್ಲಾರ್ಗಾಗೆ ನಾವೇನು ಇನ್ನೊಂದು ಮಾಡಿಲ್ಲ ಮತ್ತೊಂದು

ಮಾಡಿಲ್ಲ. ದುಡ್ಡಿದ್ದವರದಾದರೆ ಎಲ್ಲಾನೂ ಮುಚ್ಚಿಗೊಂಡು ಹೋಗ್ತದೆ. ಅಲ್ಲೇನ್ರಿ ಪರಿಮಳಾಚಾರ್‍ರ್ರಿ ?"

ಪರಿಮಳಾಚಾರ್ಯರಿಗೆ 'ನನ್ನ ಕೇಳಿದರೆ' ಅನ್ನುವಷ್ಟು ಸಹ ಧೈರ್ಯ ಉಳಿದಿರಲಿಲ್ಲ. ಧಬಧಬೆ ಮುಂದುವರೆಯಿತು.

"ನೋಡಿದೆ ಎಲ್ಲಾ. ಆಚೀ ವರ್ಷ ಡಾಕ್ಟರ ಮಗಳ ಕೂಸು ಸಿನೇಮಾ ದಾಗೆ ವರವರ ಆತ್ತು ತುರುಕರು ತುಂಬಾರೇರ ಕೈಸೇರಿದ್ದು ಊರಾಗೆಲ್ಲಾ ಟಾಂ ಟಾಂ ಆಗಿಲ್ಲೇನು ? ಮೂರು ಹಡದಾಕೀಗೆ ಮದುವಿ ಮಾಡಿ ಮಂತ್ರಾಕ್ಷತೀ ನೀವೇ ಹಾಕಿಸಿದಿರಲ್ರೀ ಪರಿಮಳಾಚಾರ್‍ರ್ರೇ, ಶ್ರೀಗಳವರ ಕೈಯಿಂದ ? ಬಡವರಿಗೆ ಬಣ್ಣಬಣ್ಣದ ನೀರು ಮಾರಿದ ಆ ಡಾಕ್ಟರು ಐದು ನೂರು ರೂಪಾಯಿ ಸುರುವಿದರೆ, ಇದೇ ಸ್ವಾಮಿಗಳೇ ಎರಡೆರಡೂ ಕೈಲೆ ಬಳಬಳಕೊಂಡ್ರು. ದೊಡ್ಡವರ ಪಾಪ ದುಡ್ಡಿನಾಗೇ ಹೋತೇನು ? ಜ್ಯೋಸರ ಹನಮಿ ಕತಿ ಊರೆಲ್ಲ ಹುಯಿಲಾಗಿ ಊರು ಹೊಲಿಗೇರಿ ಒಂದಾಗಿ ತ್ತಲ್ಲ, ಮರತ್ರೇನು ? ಮೂರು ಮೂರು ದಿವಸ ಬ್ರಾಹ್ಮಣರ ಓಣೇನೇ ಬಿಟ್ಟಿದ್ಲಲ್ಲಾ; ಅಂಥಾಕೀಗೆ ಅದು ಹ್ಯಾಗ್ರೀ ಆಚಾರ್‍ರ್ರೇ ಮುಂದು ನಿಂತು ಮುದ್ರಾ ಕೊಡಿಸಿದಿರಿ ? ಸ್ವಾಮಿಗಳಾರ ಅದು ಹ್ಯಾಗ ಆಕಿ ಕೈ ಮುಟ್ಟಿದರು? ಈಗ ಸುಳ್ಳು ಸುಳ್ಳೇ ದಿವಾನರ ಕಿವಿ ಚುಚ್ಚ್ಯೋ ಅವರಿವರು ಆವಾಗ ಬಾಯಾ ಗೇನು ಕಡುಬು ಇಟ್ಟುಕೊಂಡಿದ್ರಂತೇನು, ಕಡುಬು....?"

"ನನ್ನ ಕೇಳಿದರೆ...." ಪರಿಮಳಾಚಾರ್ಯರು ತಡವಡಿಸಿದರು.

"ನಿಮ್ಮನ್ಯಾಕೆ ಕೇಳ್ಲಿ ನಾನು? ನಿಮ್ಮನ್ನ ಕೇಳೂದೂ ಬ್ಯಾಡ ಆ ಪೆದ್ದಪ್ಪ ದಿವಾನಗೆ ಹೇಳೋದೂ ಬ್ಯಾಡ, ನನಗ್ಯಾವ ಯಮದೇವರದೂ ಅಂಜಿಕಿಲ್ಲ. ಬೇಕಾದ್ರೆ ಅವರೂ ಬರೋದು ಬ್ಯಾಡ ನನ್ನ ಜೊತಿಗೆ. ಹೀಗೇ ಕೂತಿರ್ಲಿ ದೇವರ ಪೆಟಿಗಿ ಹಿಡಕೊಂಡು. ಕೂಸು ಬಾಣಂತಿನ್ನ ಕರಕೋತೀನಿ, ಹೋಗಿ ಸ್ವಾಮಿಗಳ ಮುಂದೇ ನಿಂದ್ರುತೀನಿ. ಅದ್ಯಾವಾತ ಹೊರಗೆ ದೂಕುಸ್ತಾನೋ ನೋಡೇಬಿಡುತೀನಿ. ಊರಾಗೆಲ್ಲಾ ಬರೇ ಇವರೇ ಕಾಣಿಸ್ತದೆ ದೊಡ್ಡ ಮನಿಶಾರು ಅಂದ್ರೆ. ಆ ರಾಮದೇವರಿಗೂ ದುಡ್ಡಿನ ಹುಚ್ಚು ಹಿಡದದೆ ಅಂದರೆ ಸಾಕೇ ಸಾಕು, ನಾನು ಆ ಮಠಾನೂ ಒಲ್ಲೆ, ಅವರ ಮುದ್ರಾನೂ ಒಲ್ಲೆ...."

ಸುಬ್ಬಕ್ಕನ ಈ ಪ್ರವಾಹಗಳಿಗೆ ಚಿರಪರಿಚಿತರಾದ ರಾಮಮೂರ್ತಾ

ಚಾರ್ಯರು ತುಟಿಯನ್ನು ಎರಡು ಮಾಡದೆ ಸಾಣೆಕಲ್ಲು ಗಂಧದ ಚಕ್ಕೆಗಳ ಮಲ್ಲಯುದ್ಧದಲ್ಲಿ ಮಗ್ನರಾದರು. ಈ ಮಾತಿನ ಬಾಂಬನ್ನು ಹೇಗಾದರೂ ಮಾಡಿ ನಿಲ್ಲಿಸಿದರೆ ಉಸಿರಾಡಿಸಲಾದರೂ ಸಮಯ ದೊರೆಯಬಹುದೆಂದು ಪರಿಮಳಾಚಾರ್ಯರಿಗೆ ಬಹುಹೊತ್ತಿನಿಂದ ಆಸೆಯಾಗಿದ್ದಿತು. ಆದರೆ ನಿರುಪಾಯರಾಗಿ ಬೆಲ್ಲ ಕುಟ್ಟಿದ ಕಲ್ಲಿನಂತೆ ಮೂಲೆಗೆ ಕುಳಿತುಬಿಟ್ಟಿದ್ದರು. ಸುಬ್ಬಕ್ಕನ ಯುದ್ಧ ಕ್ಷೇತ್ರ ಊರ ದೊಡ್ಡ ಮನುಷ್ಯರನ್ನೂ ದಾಟಿ ದಿವಾನರನ್ನು ಮುಗಿಸಿ, ಶ್ರೀಗಳವರಿಗೂ ಕೈಹಚ್ಚಿ ಕಡೆಗೆ ಮೂಲ ರಾಮದೇವರಿಗೂ ದುಡ್ಡಿನ ಹುಚ್ಚು ಎಂದು ಗಂಟುಬಿದ್ದಾಗ ಪರಿಮಳಾಚಾರ್ಯರಿಗೆ ಮುಗಿಲು ಹರಿದು ಮೇಲೆ ಬಿದ್ದಂತಾಯಿತು.

"ನನ್ನ ಕೇಳಿದರೆ....ರಾಮಮೂರ್ತಾಚಾರೇ....ನನ್ನ ಕೇಳಿದರೆ........ ನಿಮ್ಮ ಯಜಮಾನೀಗಿಷ್ಟು ಸಮಾಧಾನ ಮಾಡಿಕೋ ಅಂತ ಹೇಳ್ರಿ, ಯಾಕಂದ್ರೆ...."

"ನೀವೇ ಹೇಳ್ರಿ, ನಿಮ್ಮೆದುರಿಗೇ ಇದ್ದಾಳಲ್ಲ" ತಲೆ ಎತ್ತದೆ ರಾಮಮೂರ್ತಾಚಾರ್ಯರು ನುಡಿದು ಗಂಧವನ್ನು ತೆಗೆಯುವದರಲ್ಲಿ ತಮ್ಮ ಬಾಹುಬಲವನ್ನು ಪ್ರದರ್ಶಿಸಿದರು.

ಪರಿಮಳಾಚಾರ್ಯರೇ ಕಡೆಗೂ ಧೈರ್ಯವನ್ನು ಮಾಡಿ ಗೊಗ್ಗರ ಗಂಟಲನ್ನು ಎತ್ತರಿಸಿದರು.

"ಇಲ್ಲಿ ಕೇಳ್ರೀ ಸುಬ್ಬಕ್ಕಾ. ನನ್ನ ಕೇಳಿದರೆ....ನನ್ನ ಮಾತಿಷ್ಟು ಕಿವ್ಯಾಗ ಬೀಳ್ಲಿ ನಿಮಗೆ. ನನ್ನ ಕೇಳಿದರೆ....ಒಂದು ತುಸು ತಡಿರಿ, ಆಮ್ಯಾಲೆ ಮತ್ತೆ ಆಡವಂತ್ರಿ. ಈಗ...."

"ನಿಮ್ಮನ್ನ ಕೇಳೋದೆ ಇಲ್ರಿ, ಆತಿಲ್ಲೊ? ನಾ ನಿಮ್ಮನ್ಯಾಕ್ಕೇಳ್ಲಿ ಪಾಪ! ದಿವಾನರ ಕಿವಿ ಚುಚ್ಯಾನಂತಲ್ಲ ಆತ—ಯಾವ ಮುಕ್ಕಣ್ಣನೆ ಇರ್ಲಿ —ಆತನ ಜುಟ್ಟು ಹಿಡಿದು ತಂದು ಸ್ವಾಮಿಗಳ ಮುಂದೆ ನಿಲ್ಲಸ್ತೀನಿ."

ಜುಟ್ಟು ಹಿಡಿದು ಎಂದ ಕೂಡಲೆ ಪರಿಮಳಾಚಾರ್ಯರಿಗೆ ಕಣ್ಣಲ್ಲಿ ದೀಪ ಹಚ್ಚಿದಂತಾಗಿ ತಲೆಯ ಮೇಲೊಂದು ಬಾರಿ ಕೈಯಾಡಿಕೊಂಡರು. ಸುಬ್ಬಕ್ಕನ ಕೈಗೆ ಸಿಕ್ಕರೆ ಅದರ ಗತಿ ಏನಾದೀತು ಎಂಬ ಭಯದಿಂದ ನಡುಗಿ ತಮ್ಮ ಜುಟ್ಟನ್ನು ಮುಟ್ಟಿ ನೋಡಿಕೊಂಡರು.

ಅನುಗಾಲವೂ ಅಳು ಹೆಪ್ಪುಗಟ್ಟಿದ ನಾಗಮ್ಮನ ಕಣ್ಣಿಂದ ತಡವಿಲ್ಲದೆ ಗಂಗಮ್ಮ ಪ್ರಸನ್ನಳಾದಳು. ನಾಗಮ್ಮನ ಅಳು ಅಳತೆ ಮೀರಿತು. ಎರಡೂ ಕೈಯಲ್ಲಿ ಮುಖವನ್ನು ಮುಚ್ಚಿಕೊಂಡು ಹಸುಗೂಸಿನಂತೆ ಬಿಕ್ಕಿ ಬಿಕ್ಕಿ ಅಳುತ್ತ "ನಾನು ನನ್ನ ಮಾವನವರ ಊರಿಗೇ ಹೋಗ್ತೀನಿ" ಎಂದು ದೊಡ್ಡ ದನಿ ತೆಗೆದಳು. ತೊಟ್ಟಿಲಲ್ಲಿನ ಕೂಸು ಸಹ ಮ್ಯಾಳದಲ್ಲಿ ಸೇರಿತು. ಇದುವರೆಗೂ ಹುಲಿಯಂತೆ ಹಾರುತ್ತಿದ್ದ ಸುಬ್ಬಕ್ಕ ಬಿಸಿಲಿನ ಹೊಡೆತಕ್ಕೆ ಕರಗುವ ಮಂಜಿನಂತೆ ನಾಗಮ್ಮನ ಅಳುವಿನ ಕಾವಿಗೆ ಕರಗಿ ನೀರು ನೀರಾದಳು.

"ಹೋಗುವಂತೆವ್ವಾ ನಾಗೂ, ಯಾರು ಬ್ಯಾಡಂತಾರೆ ? ಒಂದಿಷ್ಟು ಗುಡಿಗೆ ಹೋಗೊ ಶಾಸ್ತ್ರ ಮಾಡಿ, ನಿನ್ನ ಮಗನ್ನ ವೆಂಕಟರಮಣನ ಮುಂದೆ ಉರುಳು ಹಾಕಿ ಅಗತ್ಯ ಬಿಟ್ಟುಬರುತೀನಿ. ಏಳು ಕರಕೋ ಹೋಗು, ಗಂಟ್ಲು ಹರಕೋತದ ಕೂಸು." ರಮಿಸುವ ದನಿಯಲ್ಲಿ ಹೇಳುತ್ತ ಸುಬ್ಬಕ್ಕ ಹತ್ತಿರ ಬಂದಳು. ಹಿತವಾದ ಮಾತನ್ನು ಕೇಳಿದಂತೆಲ್ಲಾ ನಾಗಮ್ಮನ ಅಳುವಿನ ಪ್ರವಾಹ ಇಮ್ಮಡಿಯಾಗಿ ಹರಿಯಹತ್ತಿತು. ಕೈಕಾಲು ಆಡದಂತಾಯಿತು ಸುಬ್ಬಕ್ಕನಿಗೆ.

"ನೀವೇನು, ಯಾರ ಪ್ರಾಣ ಹೋದರೂ ಆ ದೇವರ ಕಟ್ಟೆ ಬಿಟ್ಟು ಇಳಿಯೋ ಹಾಗಿಲ್ಲೇನು ? ಇದೇನು ಯಾವ್ದಾರೆ ಕಾಟಗೀಟೋ, ಘಾಳೀ ಚಾಷ್ಟಿನೋ, ಏನು ಧಣ್ಣು ಈಕಿಗೆ ? ಇಷ್ಟು ಹೊತ್ತಿಗಾಗಲೇ ಮೂರು ಬ್ಯಾರೆ ಆತು ಇದರಂತೆ. ನಾಗೀ ಮದಲನೆ ಅತ್ತೀದೆ ಇದು ಅಂತ ನಾ ಹೇಳಿದರೆ ಇವರು ಕೇಳವಲ್ರು. ಏನಾರೆ ಆಗ್ಲಿ, ವಿಷಪರೀಕ್ಷೆ ಯಾಕೆ ಅಂತೀನಿ. ಮೂರು ದುಡ್ಡಿಂದೊಂದು ತಾಯತಾ ಹಾಕಿಸರೀ ಅಂತ ತಿಂಗಳಿಂದ ಹತ್ತೀನಿ ಇವರನ್ನ. ಮೊದಲೇ ಹಸಿ ಮೈ ಹುಡಿಗಿ, ಈ ದೆವ್ವೊಂದು ಮನಿ ಮಾಡಿಕೊಂಡುಬಿಟ್ರೆ...." ಸುಬ್ಬಕ್ಕ ಮುಂದೆ ನಿಂತು ಹೇಳುತ್ತಿದ್ದಂತೆಯೆ ಗೋಡೆಗೆ ಆತು ಕುಳಿತು ಅಳುತ್ತಿದ್ದ ನಾಗಮ್ಮ ನೆಲದ ಮೇಲೆ ಒರಗಿಕೊಂಡಳು.

ಗಾಬರಿಯಿಂದ ಸುಬ್ಬಕ್ಕ "ನಾಗೂ! ನಾಗೂ! ಇದೇನವ್ವಾ ಅನ್ಯಾಯ? ಗತಿ ಏನಾಗಬೇಕವ್ವಾ ತಾಯಿ. ಇಂಥ ಥಣ್ಣನ ಬಂಡಿಮ್ಯಾಲೆ ಮಲಗಿದರೆ ? ಈ ಮಡೀಗೊಂದು ಬೆಂಕಿ ಹಚ್ಚಿತು, ಮತ್ತೆ ಮುಣುಗಿದರೆ ಆತು" ಎಂದವಳೆ

ನಾಗಮ್ಮನನ್ನು ಮುಟ್ಟಿಕೊಂಡು ಕಂಕುಳಲ್ಲಿ ಕೈ ಹಾಕಿ ಮೇಲೆತ್ತಹತ್ತಿದಳು. ವಿಕಾರ ಮನಸ್ಸಿನ ವಿಪರೀತವಾದ ಎರಿಳಿತಗಳಿಗೆ ಪರವಶಳಾಗಿದ್ದ ನಾಗಮ್ಮನ ಮುಖವೇ ಬದಲಾದಂತಾಗಿ ರಾವು ರಾವು ಹೊಡೆಯುವಂತೆ ಕಂಡಿತು ಸುಬ್ಬಕ್ಕ ನಿಗೆ. ನಾಗಮ್ಮ ಶೂನ್ಯದೃಷ್ಟಿಯಿಂದ ಮೇಲೆ ನೋಡುತ್ತ ಕುಳಿತಳು, ಕಣ್ಣಲ್ಲಿ ಭಯದ ಗೆರೆ ಕೊರೆದಂತಿದ್ದಿತು. ಅವಳು ಇದ್ದಕ್ಕಿದ್ದಂತೆ ಅಳುವನ್ನು ನಿಲ್ಲಿಸಿದು ದಕ್ಕಂತೂ ಸುಬ್ಬಕ್ಕನ ಅನುಮಾನ ಇನ್ನೂ ಹೆಚ್ಚು ಬಲವಾಗಹತ್ತಿತು. ಕೈ ಹಿಡಿದು ಅಲುಗಿಸುತ್ತ "ನಾಗೂ, ನಾಗೂ, ಏನೇ ಅದು ?" ಎಂದು ಕೂಗಿ ಕೊಂಡಳು ಸುಬ್ಬಕ್ಕ.

ನಾಗಮ್ಮನ ಮಾತುಗಳು ಬಹು ಸ್ಪಷ್ಟವಾಗಿ ಗಂಟೆ ಹೊಡೆದಂತೆ ಬರ ಹತ್ತಿದವು. ಆವಳ ದೇಹತ್ರಾಣವನ್ನು ಮೀರಿದ್ದಿತು ಆವಳ ಕಂಠತ್ರಾಣ.

"ಇಲ್ಲೇ ಇಲ್ಲ. ಹೋಗಿ ಬಿಟ್ಟರು ಆವರು, ಆಗಲೇ ಹೋದರು."

"ಯಾರೆ ನಾಗು ?"

"ಇನ್ಯಾರು ? ಅವರೇ....ಅವರೇ....ನನ್ನ ಗಂಡ."

"ನಿನ್ನ ಗಂಡನೆ, ಎಲ್ಲಿಗೆ ಹೋದರು ?"

"ಸತ್ತುಹೋದರು........ಕೇಳ್ಳಿಲ್ಲೇನು........ಪರಿಮಳಾಚಾರು ಹೇಳಿದು ಹೂವು ಮುಡುಕೋಬ್ಯಾಡಂತೆ, ಅಯ್ಯೋ ದೇವರೇ" ಎಂದವಳೇ ಒಮ್ಮೆಲೆ ನಗಹತ್ತಿದಳು. ಪರಿಮಳಾಚಾರ್ಯರಿಗೆ ಹೃದಯ ಚಟ್ಟನೆ ಹಾರಿ ಬಾಯಿಗೆ ಬಂದಿತು. ಅವಳ ಆ ನಗು ಉತ್ತರಭೂಪನಂತಹ ಆಚಾರ್ಯರ ಕೈಕಾಲು ತಣ್ಣಗಾಗುವಂತೆ ಮಾಡಿತು.

"ಆಕಿನ್ನ ಒಯಿದು ಹಾಸಿಗೆ ಮ್ಯಾಲೆ ಮಲಗಿಸಿ ಬಿಡು. ಆಕೀಗೆ ತುಸು ಪಿತ್ತನೂ ಆಗೇದ" ಎಂದು ರಾಮಮೂರ್ತಾಚಾರ್ಯರು ಕುಳಿತಲ್ಲಿಂಡ ಹೇಳಿ ತಮ್ಮ ಕೆಲಸದಲ್ಲಿ ತಾವು ತೊಡಗಿದರು.

ಸುಬ್ಬಕ್ಕ ಸುರುಮಾಡಿದಳು, ದುರುದುರು ಮುಖವನ್ನು ನೋಡಿ.

"ಯಾರೂ ಅಂತ ಮಲಗಸ್ತೀರಿ ಹೊರಸಿನ ಮ್ಯಾಲೆ ? ಇದರ ಕೈಯಾಗ ನಂಬಿ ಕೂಸಿನ್ನ ಹ್ಯಾಗೆ ಕೊಡಂತೀರಿ. ಗೋಣು ಮುರಿದು ಬಿಟ್ಟೀತು ಎಲ್ಯಾರೆ. ಇದು ಬ್ಯಾರೆ ಏನೂ ಅಲ್ಲ, ಅದೇ—ಉಮೇಶರಾಯನ ತಾಯಿನೇ ಮೈಮ್ಯಾಲೆ ಬಂದಾಳೆ. ಮಾರಿ ನೋಡಿದರೆ ತಿಳಿಯೋದಿಲ್ಲೆ ?"

ಪುನಃ ಅಳಲು ಸುರು ಮಾಡಿದ್ದ ನಾಗಮ್ಮನ ಮುಖವನ್ನು ದಿಟ್ಟಿಸಿ ನೋಡಿ ಸುಬ್ಬಕ್ಕ ದೆವ್ವವನ್ನು ಕೆಣಕಿದಳು.

"ಯಾರವ್ವಾ ನೀನು? ಏನು ಬೇಕು ನಿನಗೆ, ಝಳಝಳ ಹೇಳಿಬಿಡು. ನಿನಗೇನು ಸೀರಿ ಬೇಕೆ, ಅನ್ನ ಬೇಕೆ, ಇಲ್ಲಾ ಯಾರದಾರ ಪ್ರಾಣ ತೊಗ ಳ್ಳಿಕ್ಕೇ ಬಂದೀಯಾ, ಹ್ಯಾಗೆ? ಅದೇನದೆ ನಿಂದು ಸ್ಪಷ್ಟ ಹೇಳು. ಹೀಗೆ ಪ್ಯಾಲಿಂದ ಪ್ಯಾಲೆ ಬಂದು ಬಾಣಂತಿನ್ನ ಕಾಡಿದರೆ ಹ್ಯಾಗೆ ನೋಡು, ಕಾಲಾ ಗಿನವು ತರಲಾ ಇಲ್ಲಾ ಹೋಗ್ತೀಯಾ?"

"ನಾ ಹೋಗ್ತೀನೀ" ಎಂದು ಅಳುತ್ತ ದೆವ್ವ ಉತ್ತರ ಕೊಟ್ಟಿತು. ತನ್ನ ಮಾವನ ಮನೆಗೆ ಹೋಗುತ್ತೇನೆಂದು ಹೇಳಲು ಕಡೆಗೂ ನಾಗಮ್ಮನಿಗೆ ಆಸ್ಪದ ದೊರೆಯಲಿಲ್ಲ, ಸುಬ್ಬಕ್ಕನ ಮಾತಿನ ಗೊಂದಲದಲ್ಲಿ.

ಚೀರುತ್ತಿದ್ದ ಕೂಸಿನ ದನಿಯನ್ನು ಕೇಳಿದಾಗ ಮೂರ್ಛೆ ಹೋದವನ ಮುಖಕ್ಕೆ ನೀರು ಚೆಲ್ಲಿದಂತಾಯಿತು ನಾಗಮ್ಮನಿಗೆ. ಚಟಕ್ಕನೆ ಎದ್ದು ತೊಟ್ಟಿಲ ಬಳಿ ಹೊರಟಾಗ ಹಿಂದೆಯೇ ಬಂದಿತು ಅವಳ ಹಾಡು.

"ಅತ್ತಾರೆ ಅಳಲೆಮ್ಮ ಅಳುವ ಕೂಸಿರಲೆಮ್ಮಾ
ಕೆಟ್ಟಾರೆ ಕೆಡಲಿ ಮನಿ ಕೆಲಸಾ
ಈ ಪಾಪಿ ಅಂಥಾವೂ
ಮಕ್ಕಳಿರಲೆಮ್ಮ ಮನೆ ತುಂಬಾ
ಹಳ್ಳೂ ಳ್ಳೂ ಳ್ಳೂ ಳ್ಳಾ ಯೀ"

ತಲೆ ಎತ್ತಿ ಸುಬ್ಬಕ್ಕನ ಮುಖವನ್ನು ನೋಡಲು ಧೈರ್ಯ ಸಾಲದೆ ಪರಿಮಳಾಚಾರ್ಯರು ಮೂಲೆಯಲ್ಲಿದ್ದ ಜೇಡನ ಬಲೆಯನ್ನು ದಿಟ್ಟಿಸುತ್ತ ಕುಳಿತರು. ರಾಮಮೂರ್ತಾಚಾರ್ಯರಂತೂ 'ಎಲ್ಲವೂ ನಿನ್ನ ಮಾಯೆ' ಎಂಬಂತೆ ಮುಖ ಮಾಡಿ ದೇವರ ಅಭಿಷೇಕದಲ್ಲಿ ತನ್ಮಯರಾಗಿದ್ದರು.

"ಅನಾಯಾಸ ನಾಳೆ ಗುರುವಾರ ಆಗಿದೆ, ದೇವರ ಮ್ಯಾಲೆ ಭಾರ ಹಾಕಿ ನೀವೇ ಒಂದು ಯಂತ್ರ ಕಟ್ಟಿಬಿಡ್ರಿ ಪರಿಮಳಾಚಾರ್ರೇ" ಎಂದು ಸುಬ್ಬಕ್ಕ ಹೇಳುತ್ತಿದ್ದಾಗ ಸನಾತನಿ ಪರಿಮಳಾಚಾರ್ಯರಿಗೆ ಸಹಸ್ರಾರು ಚೇಳು ಗಳು ಒಮ್ಮೆಲೆ ಕುಟುಕಿದಂತಾಯಿತು. ಯುದ್ಧಕ್ಕೆ ಹೋಗಿದ್ದ ಉಮೇಶ ರಾಯನ ಹೆಂಡತಿ ಇತ್ತ ಮುತ್ತೈದೆಯೂ ಅಲ್ಲ, ಅತ್ತ ವಿಧವೆಯೂ ಅಲ್ಲ?

ನೋಡೀ ನೋಡೀ ಸಕೇಶಿಗೆ ಯಂತ್ರ ಹ್ಯಾಗೆ ಕಟ್ಬೋದು ? ಮಡಿನಾರೇ ಆದ್ರೆ....' ಎಂಬ ಮಾತುಗಳು ಮನಸ್ಸಿನಲ್ಲಿ ಮೂಡಿದರೂ ಬಾಯಿಂದ ಹೊರ ಬರಲು ಮಾತ್ರ ಧೈರ್ಯ ಸಾಲದಾಯಿತು. ಜುಟ್ಟನ್ನು ಹಿಡಿದು ನಿಲ್ಲಿಸುತ್ತೇನೆ ಎಂದು ಕೊಂಚ ಸಮಯದ ಹಿಂದೆಯೇ ಸುಬ್ಬಕ್ಕ ಹಾಕಿದ ಬೆವರಗುಂಡಿನ ದುರ್ವಾಸನೆ ಇನ್ನೂ ಮೂಗಿಗೆ ಕಟ್ಟಿರುವಾಗಲೇ 'ನಿಮ್ಮ ನಾದಿನಿಗೆ ಮುಂಡನ ಮಾಡಿಸಿರಿ' ಎಂದು ಹೇಳಲು ಆಚಾರ್ಯರಿಗೆ ಉಸಿರಾದರೂ ಎಲ್ಲಿಂದ ಬರ ಬೇಕು ?

"ನನ್ನ ಕೇಳಿದರೆ....ಹಾಗೆಯೇ ಆಗಲಿ ! ನನ್ನ ಕೇಳಿದರೆ...." ಎಂದು ಮಾತು ಮುಗಿಸಿಕೊಂಡು ಪರಿಮಳಾಚಾರ್ಯರು ಜೀವ ಸಹಿತ ಸುಬ್ಬಕ್ಕನ ಕೈಯಿಂದ ಪಾರಾದರು. ಅಂದೆಲ್ಲಾ ಅದೇಕೋ ಆಚಾರ್ಯರ ಕೈ ಮಾತ್ರ ಜುಟ್ಟನ್ನು ಮುಟ್ಟಿ ಮುಟ್ಟಿ ನೋಡಿಕೊಳ್ಳುತ್ತಿದ್ದಿತು !

## ೧೫. ಹೆಂಡದಂಗಡಿಯಿಂದ ಹನಮಂತರಾಯನ ಗುಡಿಗೆ

ದಿವಂಗತ ಭೂಲ್ಭಾಯಿ ದೇಸಾಯಿಗಳ ಹೆಸರನ್ನು ಹೇಳಿಯೇ ದೀಪ ವನ್ನು ಹಚ್ಚಬೇಕಾದ ಮನೆಗಳು ಇಂದು ಭಾರತ ಮತ್ತು ಪಾಕಿಸ್ತಾನಗಳಲ್ಲಿ ಒಂದಲ್ಲ, ಎರಡಲ್ಲ, ಸಹಸ್ರಾರು ಇವೆ. ಕಾಯಿದೆ ನಿಪುಣತೆಯ ಶ್ರೇಷ್ಠ ಸದುಪಯೋಗ ನಮ್ಮ ದೇಶದಲ್ಲಿ ಆದುದೆಂದರೆ ಅದೇ ಮೊದಲನೆಯ ಬಾರಿ. ಅದೇ ಕಡೆಯ ಬಾರಿ ಆದರೂ ಆಶ್ಚರ್ಯವಲ್ಲ. ಅದಾದುದು ಈ ಮಹನೀಯರಿಂದ. ತುತ್ತು ಅನ್ನಕ್ಕಾಗಿ, ಹಿಡಿ ಮಣ್ಣಿಗಾಗಿ ಸುಳ್ಳನ್ನಾಡಿ ಸುಳ್ಳನ್ನು ಕಲಿಸಿ, ಸುಳ್ಳನ್ನಾಡಿಸುವ ಮಹಾ ಪಾಪವೃತ್ತಿ ವಕೀಲಸದೆಂದು ಜರಿದು ಮೂಗು ಮುರಿದ ಅನೇಕ ಉಗ್ರವಾದಿಗಳೂ ಸಹ ಭೂಲ್ಭಾಯಿ ಅವರ ಜಾಣ್ಮೆ, ಸಾಹಸ, ಅವುಗಳ ಫಲಕ್ಕೆ ಮೆಚ್ಚಿ ತಲೆದೂಗಿ ತಮ್ಮ ತಪ್ಪು ಅಭಿಪ್ರಾಯವನ್ನು ತಿದ್ದಿಕೊಂಡರು. ಭೂಲ್ಭಾಯಿಯವರು ಕೊಟ್ಟ ಜೀವದಾನ ಒಂದೆರಡಲ್ಲ, ನೂರುಗಳಲ್ಲಿಲ್ಲ. ಕೈಹಿಡಿದವರ ಮುಖ ಕಾಣದೆ ಬಾಳು ಕಾಡುಪಾಲಾಯಿತೆಂದು ಕಂಗಾಲಾಗಿ ಗೋಳಿಡುತ್ತಿದ್ದ ಸಹಸ್ರಾರು ಸತೀಮಣಿಯರ ಕುಂಕುಮ ಮಾಂಗಲ್ಯಗಳನ್ನು ಉಳಿಸಿಕೊಟ್ಟ ಕೀರ್ತಿ

ಇವರದು. ಲಾಲನೆ ಪಾಲನೆ ಮಾಡಿ ಬೆಳೆಯಿಸಿ ವೃದ್ಧಾಪ್ಯದಲ್ಲಿ ದುರ್ದೈವೀ ದಶರಥನಂತೆ ರಾಮಾ ರಾಮಾ ಎಂದು ಬಾಯ್ಬಿಟ್ಟು ಕಣ್ಣು ಮುಚ್ಚುವ ದುಃಸ್ಥಿತಿಗೆ ಬಂದಿದ್ದ ಆ ತಂದೆತಾಯಿಗಳಿಗೆ ಮುಪ್ಪಿನಲ್ಲಿ ಮಮತೆಯ ಮಕ್ಕಳನ್ನು ತಂದು ಕೊಟ್ಟುದೂ ಭೂಲ್ಭಾಯಿಗಳು. ಚಪಲತೆಗೊ ಚಟಕ್ಕೊ ಅಥವಾ ದಾರಿದ್ರ್ಯದ ಕಾಟಕ್ಕೊ ಬ್ರಿಟಿಷರ ಪರವಾಗಿ ಸಾಯಲು ಸಿದ್ಧರಾಗಿ ಹೊರಟ ಭಾರತ ಯುವಕರನ್ನು ಭಾರತಮಾತೆಗೆ ಉಳಿಸಿಕೊಟ್ಟು, ಅವರನ್ನು 'ಆಯ್ಯೆನ್ನೆ' ( I. N. A. ) ಅಟ್ಟಕ್ಕೆ ಏರಿಸಿದ ಮಹಾಪುಣ್ಯವೂ ಭೂಲ್ಭಾಯಿಯವರದೇ.

ಯಮನಿಗೇ ಇಲ್ಲದ ಅವಸರ ತನಗಾದರೂ ಏಕೆ? ಸಾಕ್ಷಾತ್ ಯಮನಿಗೂ ಬೇಡಾಗಿ ಮರಳಿ ಬಂದ ಉಮೇಶ. ಕೆಂಪು ಕೋಟೆಯನ್ನು ಕಂಡುಬಂದ ಉಮೇಶ. ಪ್ರಾಣವನ್ನು ದಕ್ಕಿಸಿಕೊಂಡು ತಾನು ಬಂದ. ಮಾನವನ್ನು ತುಂಬಿ ಕೊಡಲು ದಾರಿಯುದ್ದಕ್ಕೂ ರೇಜಿಟ್ಟಿದ್ದಿತು ಹೂ ಮಾಲೆಗಳನ್ನು ಹಿಡಿದು ನಿಂತ ಜನತೆ. ರೈಲ್ವೆ ನಿಲ್ದಾಣಗಳಲ್ಲಿ ಪೂಮಾಲೆ ಗಳೇ ಪೂಮಾಲೆಗಳು. ಅವುಗಳ ಮಧ್ಯೆ ಥಳಥಳಿಸುವ ಚಿನ್ನದ ದಾರಗಳು. ಓಡಿಬಂದು ಮುಗ್ಧರು ಪೂಜೆಯನ್ನರ್ಪಿಸುವಾಗಲೆಲ್ಲಾ ತನ್ನ ಮುಖವನ್ನು ಎಲ್ಲಿ ಬಚ್ಚಿಟ್ಟುಕೊಳ್ಳಲಿ ಎಂಬಂತಾಗುತ್ತಿತ್ತು ಉಮೇಶನಿಗೆ. ಈ ಗೌರವ ಯಾರಿಗೆ? ತಾಪತ್ರಯಗಳನ್ನು ಇದುರಿಸಲಾರದೆ ಕಣ್ಣು ತಪ್ಪಿಸಿ ಸೆರೆ ಸುರಿದು ಕೊಳ್ಳಲು ಹೊರಟು, ಯಾರ ಸೋಲು ಗೆಲವುಗಳ ಕಾರಣದಿಂದಲೋ ಅತ್ತ ಹೋಗದೆ ಸತ್ತುಹೋಗದೆ, ಆಕಸ್ಮಾತ್ತಾಗಿ ಇತ್ತ ಬಂದು ಗುಡಿ ಗೋಪುರ ದಿಂದ ಇಳಿದು ಬಂದರೆ ಅವನಿಗೇ ಈ ಮಹಾಗೌರವ! ದೇವರ ಮನೆಯಿಂದ ಹೊರಬಂದ ಎಲ್ಲ ಹೊಗೆಯೂ ಲೋಬಾನದ್ದೇನು? ತಾನು ಸ್ವೀಕರಿಸುವ ಈ ಗೌರವದಿಂದ ಗೌರವಕ್ಕೇ ಅಗೌರವ ಎಂದು ಮನದಲ್ಲಿ ನುಡಿದುಕೊಂಡ. ಹುರುಪಿನಿಂದ ತಲೆಬಾಗಿ ಹಾರ ತುರಾಯಿಗಳನ್ನು ಸ್ವೀಕರಿಸುತ್ತಿದ್ದ. ಸಹೋದರರನ್ನು ಕಂಡಾಗ ನಕ್ಕು, ಈ ಲೋಕೈಕವೀರನ ಪೂಜೆಮಾಡಿ ಆದಾವ ಸ್ವರ್ಗಕ್ಕೆ ಹೋಗುವುದೋ ನಮ್ಮ ಕುರುಡ ಜನತೆ ಎಂದು ಅತ್ತ. ಕಡೆಗೂ ಊರು ಬಂದಿತು. ಉಸಿರು ಬಿಟ್ಟ.

ನಿಲ್ದಾಣದಲ್ಲಿ ಬ್ಯಾಂಡು ಬಜಂತ್ರಿ ಸಿದ್ಧವಿದ್ದಿತು. ನೂರಾರು ಯುವಕರು, ಹಿರಿಯರು, ಮಕ್ಕಳು, ಹೆಂಗಳೆಯರು ಕಿಕ್ಕಿರಿದಿದ್ದರು. ಆರತಿ ಅಕ್ಷತೆಗಳು ಸ್ತ್ರೀಯರ ಕೈಯಲ್ಲಿ ಶೋಭಿಸುತ್ತಿದ್ದವು. ಯಾರಿಗಾಗಿ ಇದೆಲ್ಲ ಎಂಬುದು ಮಾತ್ರ ಉಮೇಶನಿಗೆ ಹೊಳೆಯದಾಯಿತು. ಇದು ತನಗೇ ಇರಬಹುದೆಂದು ತಿಳಿದುಕೊಳ್ಳುವಷ್ಟು ಮೂರ್ಖನವನಿರಲಿಲ್ಲ. ಆದರೆ ಇದೆಲ್ಲವೂ ಯಾರಿಗೆ ? ಹಿಂದಿನ ನಿಲ್ದಾಣದಲ್ಲಿಯೇ ಇಳಿದು ಇಡೀ ಗಾಡಿಯನ್ನೆ ಒಂದೆರಡು ಬಾರಿ ಪ್ರದಕ್ಷಿಣೆ ಮಾಡಿದ್ದ. ಮೊದಲನೆಯ ಮತ್ತು ಎರಡನೆಯ ವರ್ಗದ ಡಬ್ಬಿಗಳಂತೂ ತಾನು ಕಂಡಂತೆ ಬರಿದಾಗಿ ಇದ್ದವು. ಇನ್ನು ಮೂರನೆಯ ವರ್ಗದ ಡಬ್ಬಿಯಲ್ಲಿ ಕುಳಿತು ಬರುವಂತಹ ಮಹನೀಯನಾದರೂ ಯಾರು? ಮಹನೀಯನಾಗಲಿ ಮಹೋಮಹನೀಯನೇ ಆಗಲಿ, ಸಾಕ್ಷಾತ್ ಪರಶಿವನೇ ಕೈಲಾಸ ಪರ್ವತದಿಂದಿಳಿದು ಬಂದು ಸ್ಮಶಾನವಾಸಿಯಾದ ಕಾರಣ, ಸಾಕಷ್ಟು ಹಣವಿಲ್ಲದೆ ಮೂರನೇ ವರ್ಗದಲ್ಲಿ ಬಂದರೆ ಅವನನ್ನು ಮಾತನಾಡಿಸುವಷ್ಟು ಮುಂದವಾತಿಗಳೇ ನಮ್ಮ ಜನರು ? ಟಿಕೀಟಿಲ್ಲದೆ ಮೊದಲನೆಯ ಅಥವಾ ಎರಡನೆಯ ವರ್ಗದಲ್ಲಿ ಬಂದವನಿಗೆ ತೋರುವ ಮಾನಮರ್ಯಾದೆಗಳನ್ನು ಹಣ ತೆತ್ತು ಮೂರನೆಯ ವರ್ಗದಲ್ಲಿ ಬಂದವನಿಗೆ ತೋರಲು ಅದು ಹೇಗೆ ಸಾಧ್ಯ ? ಅಗ್ರಪೂಜೆ ಸಲ್ಲುವದು ಇಂದು ವರ್ಗಕ್ಕೆ, ವ್ಯಕ್ತಿಗೆ ಅಲ್ಲ ಎಂಬುದನ್ನು ಸಂಪೂರ್ಣವಾಗಿ ಅರಿತಿದ್ದ ಉಮೇಶ. ನಾಯಕಪೂಜಕರು ಗಾಡಿಯನ್ನು ಎರಡೆರಡು ಬಾರಿ ಸುತ್ತಿದರು. ತನ್ನ ಕಡೆಗೇ ಬರುವಂತೆ ಕಂಡಾಗ ಅವರ ಗುಂಪಿನಲ್ಲಿ ರಘುರಾಮನನ್ನು ಗುರುತಿಸಿದ. ಸಂದರ್ಭ ಉಮೇಶನಿಗೆ ಹೊಳೆಯಿತು. ಗೌರವದ ಮಾನಸಂರಕ್ಷಣೆಯಾಗಬೇಕೆಂದು ದೃಢಸಂಕಲ್ಪ ಮಾಡಿಕೊಂಡ. ಹೇಡಿಯಾಗಿ ಬಾಳಿದ ತಾನು ಇವರಿಂದ ಗೌರವಿಸಿಕೊಂಡು ಇನ್ನು ವಂಚಕನಾಗಿಯೂ ಬಾಳುವುದು ಬೇಡ ಎಂದೆನಿಸಿತು. ಆಡುವ ಹುಡುಗರು ಹಿಡಿಯಲು ಬಂದಾಗ, ಶಂಖದಲ್ಲಿ ಒಳಸರಿದು ತಲೆ ತಪ್ಪಿಸುವ ಬಸವನ ಹುಳುವಿನಂತೆ, ಕೂಡಲೇ ಗಾಡಿಯಲ್ಲಿ ಹಿಂದೆ ಸರಿದು ಹಳ್ಳಿಗರ ಗುಂಪಿನಲ್ಲಿ ಸೇರಿ ಪಾರಾದ. ರಘುರಾಮನ ರಥ ಮುಂದೆ ಸಾಗಿತು. ಸದ್ಯ ಮಾನ ಉಳಿಯಿತು ಎಂದು ಹಿಗ್ಗಿದ. ಕಟ್ಟಿಟ್ಟ ಬಟ್ಟೆಯನ್ನು ಬಿಚ್ಚಿ ಕ್ಷಣಾರ್ಧ

ದಲ್ಲಿಯೇ ಬಿಳೀ ಉಡುಪನ್ನು ಧರಿಸಿದ. ಇನ್ನು ಭಯವಿಲ್ಲವೆಂದು ನಂಬಿಕೆ ಆಯಿತು. ಆದರೂ ಅವರನ್ನು ತಪ್ಪಿಸಲೋಸುಗ ಗಾಡಿಯಲ್ಲಿ ಕೂಡುವ ದಾದರೂ ಎಷ್ಟು ಸಮಯ ? ಗಾಡಿ ಕದಲುವ ಸಮಯವೂ ಸನಿಯ ಬಂದಿತು. ಬೇರೆ ಉಪಾಯವಿಲ್ಲವೆಂದು ತಿಳಿದು ಕಳ್ಳ ಯಾತ್ರಿಕನಂತೆ ಮೆಲ್ಲಗೆ ಗಾಡಿಯ ಹಿಂದಿನಿಂದಿಳಿದು, ಹಾಸಿಗೆಯನ್ನು ಹೊತ್ತು, ಕಾಲಿಗೆ ಬುದ್ಧಿ ಹೇಳಿದ. ಕೈದೀಪ ಹಿಡಿದು ಹುಡುಕಾಡುವ ಪೋಲೀಸರನ್ನು ಕತ್ತಲಲ್ಲಿ ಓಡಾಡುವ ಕಳ್ಳ ತಪ್ಪಿಸುವಂತೆ ಉಮೇಶ ತನ್ನ ಆರ್ಚಕ ಮಂಡಳಿಯ ಕಣ್ಣು ತಪ್ಪಿಸಿ ಪಾರಾಗಿ ಮನೆ ಹಾದಿ ಹಿಡಿದ.

ಅರ್ಧ ಹಾದಿ ಸಾಗಿ ಬಂದು ರಸ್ತೆಯ ದೀಪದಡಿಯಲ್ಲಿ ನಿಂತು, ಹೊತ್ತ ಹಾಸಿಗೆಯನ್ನು ಹೆಗಲು ಬದಲಿಸುವಾಗ ಹಿಂದಿನಿಂದಾರೋ ‘ ಉಮೇಶ ರಾಯರೇ ’ ಎಂದು ಕೂಗಿದಂತಾಯಿತು. ಜೀವ ಹುಳ್ಳಾಯಿತು. ಆದರೆ ಕೂಗಿದವರ ದನಿಯ ಗುರುತು ಹತ್ತಲಿಲ್ಲ. ಸನಿಯ ಬಂದನಂತರ ವ್ಯಕ್ತಿಯ ಮುಖ ನೋಡಿದ. ಎಲ್ಲಿಯೋ ಎಂದೋ ನೋಡಿರಬೇಕು ಎಂದಿಷ್ಟು ಮಾತ್ರ ಅನಿಸಹತ್ತಿತು.

“ನೀವು ಹೇಗೆ ಸಾರ್ ಬಂದಿರಿ ?” ಎಂದು ಪರಿಚಿತರ ಸಲಿಗೆಯಿಂದ ಆ ಕಿರಿಯ ಕೇಳಿದ.

“ಹೀಗೆಯೇ ಬಂದೆ.”

“ಗಾಡಿಯಲ್ಲೆಲ್ಲಾ ಹುಡುಕಿದೆವು. ರಘುರಾಮರಾಯರೂ ಬಂದಿದ್ದರು ಸಾರ್, ನಿಮ್ಮನ್ನು ನೋಡಲು ನೂರಾರು ಜನರು ಬಂದಿದ್ದರು ಸಾರ್, ಹಾರ ತುರಾಯಿಗಳಿಂದ. ನೀವೇನು ಸಾರ್ ಹೀಗೆ ಬಂದುಬಿಟ್ಟಿರಿ ? ಬಹಳ ಜನರು ಬಂದಿದ್ದರು.”

ಮಹಾ ಯುದ್ಧದಲ್ಲಿ ವಿಜಯಶಾಲಿಯಾಗಿ ಮರಳಿದಾಗ ತನ್ನನ್ನು ಕಾಣಲು ಕಾದು ನಿಂತ ಸಹಸ್ರಾರು ಪ್ರಜೆಗಳ ಕಣ್ಣು ತಪ್ಪಿಸಿ ಹಿಂದಿನ ಬಾಗಿಲಿಂದ ಬಂದಿದ್ದ ವೀರ ನೆಪೋಲಿಯನ್ನನ ನೆನಪಾಯಿತು ಉಮೇಶನಿಗೆ. ಕಾತರದಿಂದ ಓಡಿಬಂದು ಸೇನಾಧಿಪತಿಗಳು ನೆಪೋಲಿಯನ್ನನಲ್ಲಿ ಆರಿಕೆ ಮಾಡಿಕೊಂಡಿದ್ದರು.

"ತಾವು ಹೀಗೆ ಹಿಂದಿನ ಬಾಗಿಲಿಂದ ಅರಮನೆಯನ್ನು ಹೊಗುವಿರಿ ಎಂದಾರೂ ತಿಳಿದಿರಲಿಲ್ಲ. ತಮ್ಮನ್ನು ನೋಡಲು ಲಕ್ಷಾವಧಿ ಜನರು ಬಂದು ಕಾದಿದ್ದರು."

"ಅಹುದು, ಜನರು ಬರುತ್ತಾರೆ. ಸಾರ್ವಜನಿಕ ಸ್ಥಳದಲ್ಲಿ ನನ್ನನ್ನು ನೇಣು ಹಾಕಿದರೆ ಅದನ್ನು ನೋಡಲೂ ಬರುತ್ತಾರೆ, ಇನ್ನೂ ಹೆಚ್ಚಾಗಿಯೂ ಬರುತ್ತಾರೆ" ಎಂದುತ್ತರ ಕೊಟ್ಟಿದ್ದ ಆ ವೀರ-ಯೋಧ.

ನೆಪೋಲಿಯನ್ ತಾನಲ್ಲವಾದರೂ, ' ಜನತೆಯೇನೋ ಅದೇ ' ಎಂದು ಅಂದುಕೊಳ್ಳುತ್ತ ಮುಂದಡಿಯಿಟ್ಟು ಸಾಗಿದ.

"ನಾವಿಬ್ಬರೂ ಬಂದಿದ್ದೆವು ಸಾರ್, ನಾನು ನಮ್ಮಕ್ಕ ನಿಮ್ಮನ್ನು ನೋಡಲು."

ಉಮೇಶನಿಗೆ ಮಾತಿನ ಸಂದರ್ಭವೇ ತಿಳಿಯದಂತಾಯಿತು. ನಾನು ಎಂದು ಹೇಳುತ್ತಿರುವ ಈ ಹಿರಿಯ ಹುಡುಗನು ಯಾರು, ಅವನಕ್ಕ ಯಾರು, ತನ್ನನ್ನು ನೋಡಲು ಬಂದಿದ್ದರೇಕೆ ? ಉಮೇಶನ ಮುಖದಲ್ಲಿ ಬರೆದಂತಾ ಯಿತು, ಅವನ ಮನದ ಸ್ಥಿತಿ. ಇದನ್ನು ಗುರುತಿಸಿದ ರಾಜ ಕೂಡಲೆ ಮಾತು ಬೆಳೆಸಿದ.

"ನಾನು....ತಮಗೆ ಗುರುತು ಸಿಕ್ಕಂತಿಲ್ಲ ಸಾರ್—ನಾನು...."

'ರಾಜ!' ಉಮೇಶನಿಗೆ ತಟ್ಟನೆ ಹೊಳೆಯಿತು. ಅಂದಿನ ಆ ಹೊಳಪು ಅವನ ಕಣ್ಣಲ್ಲಿರಲಿಲ್ಲ. ಗಾಜಿನ ಬೊಂಬೆಯ ಆ ಮೈಬಣ್ಣವೂ ಮಾಯವಾಗಿ ದ್ದಿತು. ನಕ್ಕಾಗ ಚಿಕ್ಕೆ ಮೂಡುತ್ತಿದ್ದ ಆ ಸುಂದರ ಕಪೋಲಗಳ ಮೇಲೆ ಗಡ್ಡ ಒರಟಾಗಿ ಚಿಗುರುತ್ತಿದ್ದಿತು. ಅಂದೊಮ್ಮೆ ಸುಂದರವಾದ ಮುಖಕ್ಕೆ ಕುಂದಣವಿಟ್ಟಂತಿದ್ದ ಗುಂಗುರ ಕೂದಲ ಕ್ರಾಪು ಇಂದು ಎಣ್ಣೆ ಕಾಣದ ಟಗರಿನ ಉಣ್ಣೆಯಂತಿದ್ದುದು ಅವನ ಉಡುಪು ಸೂಚಿಸುತ್ತಿದ್ದ ಅವನ ದುರ್ದಸೆಗೆ ಸಾಕ್ಷಿಯಾಗಿದ್ದಿತು.

"ಅದೇಕೋ ರಾಜಾ ಹೀಗಾಗಿರುವೆ ?" ಎಂದು ಮುಖ ನೋಡುತ್ತಾ ನಿಂತ.

"ಹೀಗೆಯೇ ಸಾರ್ ಈಗೆಲ್ಲ, ಎಲ್ಲವೂ ಕೆಟ್ಟು ಹೋಗಿದೆ!" ಎಂದು

ರಾಜ ನುಡಿದು ಸುಮ್ಮನಾದ. ಮನಸ್ಸಿನ ಖಿನ್ನತೆಯನ್ನು ಹೋಗಲಾಡಿಸಲು ಮಾತು ಹೊರಳಿಸಿ ಉಮೇಶ ಕುಶಲ ಪ್ರಶ್ನೆ ಮಾಡಿದ.

"ಮಲ್ಲಾರಿಭಟ್ಟರು ಚೆನ್ನಾಗಿದ್ದಾರೆಯೇ ?"

"ಅವರಿಲ್ಲ ಸಾರ್, ಅವರು ತೀರಿಕೊಂಡರು...."

"ಅಯ್ಯೊ! ಏನಾಗಿದ್ದಿತೋ ಪಾಪ ?"

"ಇನ್ನೇನು ಸಾರ್ ? ಅದೇ. ಹೊಟ್ಟೆಯಲ್ಲಿ ನೀರು ತುಂಬಿತ್ತು. ಆದರಿಂದಲೇ ಅವರು ಹೊರಟುಹೋದರು."

ಹೆಜ್ಜೆಯೊಂದಿಗೆ ಮಾತು ಸಾಗಿದವು.

"ನೀವು ಚೆನ್ನಾಗಿದ್ದೀರಾ ಸಾರ್ ? ನೀವೂ ಬಹಳ ಸೊರಗಿದ್ದೀರಿ."

"ಇದ್ದೇನಲ್ಲ. ನನಗೇನಾಗಿದೆ ? ಆ....ನಿನ್ನ ತಾಯಿ ಸೌಭಾಗ್ಯಮ್ಮ ಇದ್ದಾರೆಯೇ ?"

"ಅವಳಿಗೇನು ಚೆನ್ನಾಗಿರದೆ ? ಬೇರೆ ಇದ್ದಾಳೆ ಈಗ."

"ಬೇರೆ! ಅಂದರೆ ?"

"ನಮ್ಮ ತಂದೆ ಸತ್ತನಂತರ ನಮಗೂ ತಮ್ಮ ತಾಯಿಗೂ ಕೊಂಚ ಮನಸ್ತಾಪವಾಗಿ ನಮ್ಮನ್ನು ಹೊರಗೆ ಹಾಕಿದಳು ಸಾರ್—ನಮ್ಮಿಬ್ಬರನ್ನೂ."

"ಇ....ಬ್ಬ....ರ....ನ್ನು ?"

"ಅಹುದು ಸಾರ್, ಕುಸುಮಳನ್ನೂ ಕೂಡ. ಅವಳ ವಿಷಯದಲ್ಲಿಯೇ ತಕರಾರು ಬಂತು. ನಮ್ಮ ತಾಯಿಗೆ........ಗೊತ್ತಿದೆಯಲ್ಲ ಸಾರ್........... ನಮ್ಮ ತಾಯಿಗೆ........ಹಣದ ಪಿಶಾಚಿ ಸಾರ್. ಅದಕ್ಕೆ·····....ಕುಸುಮ ಒಪ್ಪಲಿಲ್ಲ ಸಾರ್. ಏನೇನೋ ಆಯಿತು ಬಿಡಿ ಸಾರ್, ನಮ್ಮ ಜೀವನದಲ್ಲಿ. ನಾಲ್ಕು ತಿಂಗಳು ಅವಳು ಸಹ ಆಸ್ಪತ್ರೆಯಲ್ಲಿದ್ದು ಮೊನ್ನೆ ತಾನೆ ಬಂದಳು ಮನೆಗೆ."

"ಆಸ್ಪತ್ರೆ! ಏನಾಗಿದ್ದಿತೋ ?"

"ಟಿ. ಬಿ. ಅಂತೆ ಸಾರ್. ನಾನು ಪೂರ್ತಿ ಆಸೆಯನ್ನೇ ಬಿಟ್ಟಿದ್ದೆ ಆಗಲೆ. ನಿಮಗೆ ತಾರು ಸಹ ಕೊಡೆಂದು ಹೇಳಿದಳು ಸಾರ್ ಆಗ. ಎಲ್ಲಿಗೆಂದು ನಾವು ಕೊಡೋದು ? ನಿಮ್ಮ ಮನೆಯವರಿಗೇ ನಿಮ್ಮ ಅಡ್ರೆಸ್ಸು ಗೊತ್ತಿರಲಿಲ್ಲವಂತೆ !"

"ನಮ್ಮ ಮನೆಯಲ್ಲಿ ವಿಚಾರಿಸಿದೆಯೇನು ?"

"ಹೋಗಿದ್ದೆ ಸಾರ್ ನಿಮ್ಮ ಮನೆಗೆ. ಇವಳು ಒಂದೇ ಹಟ ಹಿಡಿದು ಬಿಟ್ಟಿದ್ದಳು. ಅದಕ್ಕಾಗಿ ಹೋಗಬೇಕಾಯಿತು. ನಿಮ್ಮ ತಂದೆಯವರೇ ಹೇಳಿದರು, ಅಡ್ರಸ್ಸು ಗೊತ್ತಿಲ್ಲವೆಂದು."

"ಹೇಗಿದ್ದಾರೋ ರಾಜ, ನನ್ನ ತಂದೆಯವರು ?"

"ಹಾಸಿಗೆ ಹಿಡಿದಿದ್ದಾರೆ ಪಾಪ !"

ಮನೆಯೂ ಸಮೀಪ ಬಂದಿತು. ಸದ್ಯಕ್ಕೆ ಮಾತುಗಳೂ ಮುಗಿಯುತ್ತ ಬಂದವು.

"ಸರಿ, ನೀನು ಹೋಗು."

"ಮತ್ತೆ ಯಾವಾಗ ಬರ್‍ತೀರಾ, ನಮ್ಮ ಮನೆಗೆ ?"

"ನಾನೆಲ್ಲ ಬರ್‍ತೇನೆ, ನೀನು ಹೋಗು."

"ತಾವು ಮನೆ ಕೂಡ ನೋಡಿಲ್ಲಲ್ಲ."

"ಅಹುದು........"

"ನಾಳೆ ಬೆಳಿಗ್ಗೆ ನಾನೇ ಬಂದು ನಿಮ್ಮನ್ನು ಕರೆದೊಯ್ತೀನಿ."

"ಆಗಲಿ."

"ಬರ್‍ತೇನೆ ಸಾರ್. ಹೇಳ್ತೇನೆ ಕುಸುಮಾಗೆ, ಸ್ಟೇಶನ್ನಿಗೆ ಬಂದು ವಾಪಸು ಹೋದಳು, ನೀವು ಬರಲಿಲ್ಲವೆಂದು."

ಉಮೇಶ ದೊಡ್ಡ ಉಸಿರೊಂದನ್ನು ಬಿಟ್ಟು ಕಾಲಿಕ್ಕಿದ, 'ಆನಂದ ವಿಲ್ಲ'ದ ಒಳಹೊಸ್ತಿಲಲ್ಲಿ. ಗೌ ಎಂದಳು ಬ್ರಿಟ್ಟಾಳ ಮಗಳು.

## ೧೬. ಕುಮಾರಸಂಭವ

ಯಾರದು ? ಎಂದು ಕಾವೇರಿ ಹೊರಬಂದಳು. ಉಮೇಶನ ಕಣ್ಣುಗಳು ನಂಬದಾದವು. ಇವಳೇನೇ ಆ ಕಾವೇರಿ ! ಮಧುಯೌವನದಿಂದ ಕಾಂತಿ ಯುಕ್ತಳಾಗಿದ್ದ ಆ ಕಾವೇರಿ ಎಲ್ಲಿ ? ಕಾವೇರಿಯ ವೇಷದಲ್ಲಿ ಬಂದ ಈ ವಯಸ್ಸಾಗದ ವೃದ್ಧಳಾರು, ಎಂದೆನಿಸಿತು ಉಮೇಶನಿಗೆ. ಅಂದಿದ್ದ ಪ್ರಾಯದ ಹುಮ್ಮಸ ಮೈಯಲ್ಲಿಲ್ಲವಾದರೂ ಕಣ್ಣಲ್ಲಿ ಅದರ ಗುರುತೂ ಬೇಡವೆ ?

ಮುಖದಲ್ಲಿ ಯೌವನದ ನಗು ಇಲ್ಲವಾದರೂ ಮಿಂಚಿನ ಹೊಳಪೇಕೆ ಮಾಯ ವಾಯಿತು? ಕೃಷ್ಣವೇಣಿಯಂತಿದ್ದ ಅವಳ ಕುರುಳಿನ ಕಪ್ಪು ಮಾಸಿ ಅಲ್ಲೆ ಇಲ್ಲೆ ಬಿಳಿ ಬಣ್ಣ ಬಂದಂತಿದ್ದಿತು. ವೃದ್ಧಳಾಗುವ ವಯಸ್ಸಿಲ್ಲ. ವಯಸ್ಸಿನಿಂದ ವೃದ್ಧಳಾಗಿದ್ದರೂ ತಪ್ಪಿಲ್ಲ. ಅದೊಂದು ನಿಸರ್ಗದ ನಿಯಮ. ಆದರೆ ಮುದುಕನ ಹೆಂಡತಿ ಚಿಕ್ಕವಳಿದ್ದರೂ ಮುಮುಕೆಯಾಗಲೇಬೇಕೆಂಬುದೂ ನಿಸರ್ಗದ ನಿಯಮವೇ ? ಕಣ್ಣಲ್ಲಿ, ಮೈಯಲ್ಲಿ, ಮುಖದಲ್ಲಿ, ಮನದಲ್ಲಿ ಮೂಡಿರುವದು ಅಕಾಲ ಮುಪ್ಪು. ಸ್ವಾರ್ಥಸಮಾಜಕ್ಕೆ, ಸಮಾಜದ ವಂಚಕ ವರ್ಗಕ್ಕೆ ಸೋತು ಬಾಗದೆ, ಕಿವಿಹಿಂಡಿ ಕಲಿಸುವ ನಿರ್ಧಾರದ ನಿಷ್ಠುರತೆಯ ಗಂಡು ಹೆಣ್ಣಾಗಿದ್ದ ಆ ಕಾವೇರಿ ಎಲ್ಲಿ ಎಂದೆನಿಸಿತು ಉಮೇಶನಿಗೆ !

ಉಮೇಶನನ್ನು ಕಂಡಾಗ ಕಾವೇರಿಯ ಬಾಯಿಂದ ಮಾತುಗಳೇ ಹೊರಡಲಿಲ್ಲ. ಆಡಬೇಕಿದ್ದ ಮಾತುಗಳು ಗುಡ್ಡದಷ್ಟಿದ್ದವು. ಆಗಿಹೋದು ದನ್ನೆಲ್ಲಾ ಆಡಿತೋಡುವ ಅವಸರ ಇದ್ದಿತು. ಆದರೆ ಅದಕ್ಕೂ ಹೆಚ್ಚಿನ ಅವಸರವಿದ್ದಿತು, ಕಣ್ಣಲ್ಲಿ ಬಂದು ನಿಂತಿದ್ದ ಕಂಬನಿಗೆ. ಉಮೇಶನನ್ನು ಕಂಡೊಡನೆಯೇ ಕಾವೇರಿಯ ಕಣ್ಣಿಂದೆರಡು ಹನಿಗಳು ಹರಿದು ಕೆನ್ನೆಗೆ ಬಂದು ನಿಂತು ಥಳಥಳ ಹೊಳೆದವು. ಹೊರಬಿದ್ದ ಎರಡು ಮೂಕ ತೊಟಕು ಗಳು ಹೇಳಿದ ಮಾತು ಉಮೇಶನ ಹೃದಯಾಂತರಾಳವನ್ನು ಹೊಕ್ಕು ಕದಡಿತು. ಹೃದಯವನ್ನು ಗುರುತಿಸುವ ಹೃದಯದ ಮುಂದೆ ಬಡಬಡಿ ಸುವ ಬಾಯಿ ಕಿವಿಗಳ ಬಳಕೆ ಬರೀ ಎದೆಗುರುಡರಿಗಷ್ಟೆ ! ಕಾವೇರಿ ಸೆರಗಿನಿಂದ ಕಣ್ಣೊರಸಿಕೊಂಡಾಗ ಉಮೇಶನ ಗಂಟಲುಬ್ಬಿ ಬಂದಿತು. ಹೊರಟ ಮಾತು ಬಾಯಂಗಣದಲ್ಲಿಯೇ ಉಳಿಯಿತು. ಕಡೆಗೆ ಕಾವೇರಿಯೇ ಬಾಯಿಬಿಟ್ಟಳು.

“ಒಳಗೆ ಹೋಗಿ ನಿಮ್ಮ ತಂದೆಯವರನ್ನು ನೋಡಿ ಬಾ, ಉಮೇಶಾ.”

“ಏನು ಮಲಗಿದ್ದಾರೆಯೇ? ” ಕಾಲಲ್ಲಿನ ಬೂಟು ಬಿಚ್ಚುತ್ತಾ ಕೇಳಿದ.

“ಮಲಗದೇ ಮಾಡುವದೇನು ? ಏಳಲೂ ಬರುವದಿಲ್ಲ. ” ದನಿಯಲ್ಲಿ ನಿರಾಶೆ, ಅದರೊಂದಿಗೆ ಬೆರೆತುದುದು ಸಹಾನುಭೂತಿ.

“ಏಳಲು ಬರುವುದಿಲ್ಲ ! ಏನು ಜ್ವರವೇ ?” ಕೋಣೆಯ ಬಾಗಿಲಿಗೆ ಬಂದ.

"ಜ್ವರವಲ್ಲ, ಪ್ರಾರಬ್ಧ" ಕಾವೇರಿ ನುಡಿದು ಹೊರಬಾಗಿಲಲ್ಲಿಯೇ ನಿಂತಳು.

"ಪ್ರಾರಬ್ಧ !" ಈ ಶಬ್ದ ಕಾವೇರಿಯ ಬಾಯಿಂದ ಎಂದು ಆಶ್ಚರ್ಯಗೊಂಡನು ಉಮೇಶ. ಕೆಟ್ಟ ಸಮಾಜವನ್ನು ಕೆಡವಬಲ್ಲಳು, ಹೊಸ ಸಮಾಜವನ್ನು ಕಟ್ಟಬಲ್ಲಳು. ಕಾವೇರಿಯ ಕೈಯಲ್ಲಿ ಸಮಾಜವನ್ನು ತಿದ್ದುವ ಸಾಮರ್ಥ್ಯವಿದೆ. ಸಿಟ್ಟು, ಸಿಡುಕು, ಅವಸರ, ಅಸಹನೆ ಎಲ್ಲವೂ ಇವೆ. ಇವೆಲ್ಲದರ ಮೇಲೂ ತಾರೆಗಳ ಮಧ್ಯದಲ್ಲಿ ಪ್ರಕಾಶಿಸುವ ಚಂದ್ರನಂತೆ ಆತ್ಮವಿಶ್ವಾಸವಿದೆ ಕಾವೇರಿಗೆ ಎಂದು ಏನೇನನ್ನೋ ತಿಳಿದಿದ್ದ ಉಮೇಶ. ಆ ಕಾವೇರಿಗೂ ಪ್ರಾರಬ್ಧ, ದುಷ್ಕರ್ಮಗಳ ಕಾಟವೇ !

ಉಮೇಶ ತಂದೆಯ ಕೋಣೆಯಲ್ಲಿ ಕಾಲಿಟ್ಟಾಗ ಕಾವೇರಿ ಒಳಗೆ ಬರಲಿಲ್ಲ. ಬಾಗಿಲ ವರೆಗೆ ಬಂದವಳು ಹಾಗೆಯೇ ಹಿಂದಿರುಗಿದಳು. ಮಡಿಸಿದ ಎಡಗಾಲಿನ ಮೇಲೆ ಬಲಗಾಲನ್ನು ಹೇರಿ ಪಿಳಿಪಿಳಿ ಕಣ್ಣು ಬಿಡುತ್ತಾ ರಾವಸಾಹೇಬ ರಂಗರಾಯರು ಹಾಸಿಗೆಯಲ್ಲಿ ಒರಗಿದ್ದರು. ಅವರ ಕೃಶವಾದ ದೇಹವನ್ನು ಕಂಡ ಕೂಡಲೇ ಉಮೇಶನಿಗೆ ಎದೆ ಹಾರಿತು. ಬಾಗಿಲಿಗೆ ಬೆನ್ನು ಮಾಡಿ ಮಲಗಿದ್ದ ರಂಗರಾಯರು ಕಾಲ ಸಪ್ಪಳ ಕೇಳಿ ತಲೆ ಹೊರಳಿಸಿದರು. ಮಗನ ದರ್ಶನದಿಂದಾದ ಆನಂದ ಸಾವು ನೋವುಗಳನ್ನೆಲ್ಲಾ ಒಂದರೆಕ್ಷಣ ಮರೆಯಿಸಿಬಿಟ್ಟಿತು. ಮೈಮರೆತರು. 'ಉಮೇಶ' ಎಂದವರೆ ಚಟ್ಟನೆ ಎದ್ದು ಕುಳಿತರು. ಅದೇ ಕಾರಣವಾಯಿತು ಮುಂದಿನ ಪ್ರಮಾದಕ್ಕೆ. ಮರುಗಳಿಗೆಯಲ್ಲಿಯೇ 'ಅಯ್ಯೋ' ಎಂದು ಚೀರಿ ಎಡಗಾಲನ್ನು ಹಿಡಿದುಕೊಂಡು ಹಾಸಿಗೆಯಲ್ಲಿ ಬಿದ್ದು ವಿಲಿವಿಲಿ ಒದ್ದಾಡಿದರು. ನೋವಿನಿಂದ ತುಟಿ ಕಡಿದರು. ಕಣ್ಣಿಂದ ನೀರು ಸುರಿದರು. ಅಯ್ಯೋ ಅಪ್ಪಾ ಎಂದು ಕೂಗಾಡಿ ಗಳಗಳ ಅತ್ತರು.

ಇದೊಂದೂ ಅರ್ಥವಾಗದ ಉಮೇಶ ಮಂಕಾಗಿ ತಂದೆಯವರ ತಲೆಯ ಹತ್ತಿರ ನಿಂತು ಏನಾಯಿತು ಎಂದು ಉಪಚರಿಸಹತ್ತಿದನು. ತಲೆದಿಂಬಿನಲ್ಲಿ ಮುಖವನ್ನು ಹುದುಗಿಸಿಟ್ಟು ರಂಗರಾಯರು ಬಾಧೆಪಡುತ್ತಿದ್ದಾಗ ಹೇಗೆ ಸಂತೈಸಬೇಕೆಂಬುದೇ ತಿಳಿಯದಾಯಿತು. ಕೂಗನ್ನು ಕೇಳಿ ಬಂದ ಕಾವೇರಿ ಮೊದಲು ರಾಯರ ಹೊದಿಕೆಯನ್ನು ಸರಿಪಡಿಸಿದಳು. ಎಡದ

ಕಾಲ ಬುಡದಲ್ಲಿ ದುಂಡು ದಿಂಬೊಂದನ್ನು ಸರಿಸಿ ಅವರ ಬಲಗಾಲನ್ನು ಎತ್ತಿ ಎಡದ ಮೇಲಿಕ್ಕಿದಳು. ತುಸು ಹೊತ್ತಿನವರೆಗೂ 'ಹಾ', 'ಹೂ' ಎಂದು ಹಾಯ್‌ಗುಟ್ಟಿ ರಂಗರಾಯರು ಮುನುಗನ್ನು ಮುಂದುವರಿಸಿದರು. ತಲೆಯ ಬದಿ ಉಮೇಶ ಕಲ್ಲಿನಂತೆ ನಿಂತು ಉಗುರು ಕಡಿಯಹತ್ತಿದ. ಕೈಲಿದ್ದ ಬೀಸಣಿಗೆಯಿಂದ ಕಾವೇರಿ ರಾಯರ ಕಾಲಿಗೆ ಗಾಳಿ ಹಾಕುತ್ತ ನಿಂತಳು. ಮಧ್ಯೆ ಮಧ್ಯೆ ಏನನ್ನೋ ಅಸ್ಪಷ್ಟವಾಗಿ ನುಡಿಯುತ್ತಾ ರಂಗರಾಯರು ತಲೆಗೆ ಕೈ ಕೊಟ್ಟರು. ಅತ್ತು ತಣಿದ ಕಣ್ಣುಗಳಿಗೆ ವಿಶ್ರಾಂತಿಯ ಆನಂದ ಲಭಿಸಿತು. ನಿದ್ರೆಹತ್ತಿತು. ಪೀಪಿಯೂದಿದಂತೆ ಮೂಗಿನಿಂದ ಗೊರಕೆ ಹೊಡೆದರು. ಹೊರಗೆ ಹೋಗಲು ಕಾವೇರಿ ಕೈಸನ್ನೆ ಮಾಡಿದಳು. ಉಮೇಶ ಕಾಲ ಶಬ್ದದಿಂದ ತಂದೆಗೆ ನಿದ್ರೆ ಹಾನಿಯಾದೀತೆಂದು ಬೆರಳುಗಳ ಮೇಲೆ ಹೆಜ್ಜೆ ಇಕ್ಕುತ್ತಾ ಹೊರಬಂದು ನಿಂತು ಉಸಿರುಬಿಟ್ಟನು. ಕಾವೇರಿ ಸೊಳ್ಳೆಪರದೆಯನ್ನು ಮಂಚಕ್ಕೆ ಇಳಿಬಿಟ್ಟು ಸರಿಮಾಡಿ ಹೊರಬಂದಾಗ, ಅವಳ ಕಣ್ಣಿನ ತೇವವಿನ್ನೂ ಆರಿರಲಿಲ್ಲ.

ನಡುಮನೆಯಲ್ಲಿ ಅಜೆಯ ತುದಿಗಿದ್ದ ಮೇಜಿನ ಮೇಲೆ ಕಾಫಿ ಉಮೇಶನಿಗಾಗಿ ಕಾದಿದ್ದಿತು. ಕಾಫಿ ಕುಡಿ ಎಂದು ಅವನನ್ನು ಕರೆಯಲು ಬಂದಿದ್ದ ಕಾವೇರಿ ಗಂಡನ ನೋವಿನ ಗಡಿಬಿಡಿಯಲ್ಲಿ ಮರೆತೇಬಿಟ್ಟಿದ್ದಳು. ಹೊರಬಂದು ನೋಡಿದ ಮೇಲೆಯೇ ಅದರ ನೆನಪಾಯಿತು.

"ಬಾ ಉಮೇಶ, ಕಾಫಿ ಕುಡಿ" ಎಂದು ಕಾವೇರಿ ಹೇಳಿದಾಗ ಉಮೇಶನ ದೃಷ್ಟಿ ಮೇಜಿನ ಕಡೆ ಹೊರಳಿತು.

"ಅಪ್ಪನಿಗೆ ನಿದ್ರೆ ಹತ್ತಿತೆ ?" ಕಾತರದಿಂದ ಕೇಳಿದ.

"ಮೂರು ರಾತ್ರಿ ಮೂರು ಹಗಲು ಆದವು ನಿದ್ದೆ ಇಲ್ಲದೆ. ಸದ್ಯ ಅಧೇಗೋ ಈಗ ಮಲಗಿದ್ದಾರೆ." ಎಂದು ಹೇಳಿ ಕಾಫಿ ಕಡೆ ಬೆರಳು ಮಾಡಿದಳು. ಮಲಗಿದ್ದ ತಂದೆಗೆ ತೊಂದರೆಯಾದೀತೆಂದು ಮೆಲುದನಿಯಲ್ಲಿಯೇ ಉಮೇಶ ಮಾತು ಮುಂದುವರಿಸಿದ.

"ಏನಾಗಿದೆ ಕಾವೇರಿ, ಅಪ್ಪನಿಗೆ ?"

"ಕಾಲ ನೋವು. ಕಾಫಿ ಕುಡಿ ಉಮೇಶ. ಈಗಾಗಲೇ ತಣ್ಣಗಾಗಿರಬಹುದು."

"ಕುಡಿಯುತ್ತೀನಿ, ಅದೆಂತಹ ಕಾಲುನೋವು ಅದು? ಎದ್ದು ಕೂಡಲು ಸಹ ಬರುವುದಿಲ್ಲವೇ ?"

"ಕಾಲು ಕದಲಿಸಿದರೂ ನೋವಾಗುತ್ತದೆ."

"ಡಾಕ್ಟರು ಏನೆಂದರು ?"

"ಸಿಯಾಟಿಕ್ ಅಂತೆ ಉಮೇಶ, ಅದು. ನರಮಂಡಲದ ದೌರ್ಬಲ್ಯ ದಿಂದ ಬಂದದಂತೆ."

ಒಂದೇ ಗುಟುಕಿನಲ್ಲಿ ತಣ್ಣಗಿದ್ದ ಕಾಫಿಯನ್ನು ಗಂಟಲಿಗೆ ಸುರುವಿ ಕೊಂಡು ಕಪ್ಪನ್ನು ಕೆಳಗಿಕ್ಕಿ " ನರಮಂಡಲದ ದೌರ್ಬಲ್ಯದಿಂದ..........." ಉಮೇಶ ಕಾವೇರಿಯ ಮುಖ ನೋಡಿದನು. ಕಾವೇರಿ ದೃಷ್ಟಿಯನ್ನು ಬೇರೆ ಕಡೆ ಹೊರಳಿಸಿದಳು. ಈ ದೌರ್ಬಲ್ಯದ ಕಾರಣ ಊರ್ವರಿಗೂ ಹೊಳೆಯಿತೇ ?

"ಚಳಿಜ್ವರ ಏನೂ ಇಲ್ಲ. ಎದ್ದು ಓಡಾಡುವಂತಿಲ್ಲ, ಉಂಡಿದ್ದು ಪಚನ ವಾಗುವಂತಿಲ್ಲ. ಹೀಗೆಯೇ ಸೊರಗುತ್ತಿದ್ದಾರೆ."

"ಇದಾಗಿ ಎಷ್ಟು ದಿನಗಳಾದುವು ಕಾವೇರಿ ?"

"ಆಯಿತಲ್ಲ, ಹಾಸಿಗೆ ಹಿಡಿದೇ ಮೂರು ತಿಂಗಳಾದುವು. ನಿನ್ನ ಮಗ ಹುಟ್ಟಿದ ದಿನವೇ...."

"ನನ್ನ ಮಗ !" ಮಧ್ಯದಲ್ಲಿ ಉಮೇಶ ಬಾಯಿ ಹಾಕಿದನು.

"ನೀನು ನಾಗೂ ಕೂಸನ್ನು ನೋಡಿ ಬರಲಿಲ್ಲವೇ ಉಮೇಶ?"

"ಎಲ್ಲಿದ್ದಾಳೆ ?"

"ಅವಳಣ್ಣನ ಊರಲ್ಲಿ. ಎಂತಹ ಕಟುಕನೋ ನೀನು !" ಸಿಟ್ಟನ್ನು ಬೆರಸಿ ನುಡಿದಳು ಕಾವೇರಿ.

"ನನಗೊಂದೂ ಗೊತ್ತೇ ಇಲ್ಲ ಕಾವೇರಿ. ಕರೆದುಕೊಂಡು ಹೋಗಲು ಅಣ್ಣ ಬಂದಿದ್ದಾರೆ. ಹೆರಿಗೆಗೆ ಅಲ್ಲಿಗೆ ಹೋಗುತ್ತೇನೆಂದು ಒಂದು ಪತ್ರದಲ್ಲಿ ಲಿಖಿಸಿದ್ದಳು. ಅದೇ ಅವಳಿಂದ ಬಂದ ಕೊನೆಯ ಕಾಗದ. ಆಮೇಲೆ ನಾನೇ ನಾನು."

"ಅಂತೂ ಬಂದೆಯಲ್ಲಪ್ಪಾ ಸಾಕು, ನಾಗೂನ ಮಾಂಗಲ್ಯದ ಪುಣ್ಯ ದಿಂದ" ಎಂದು ನುಡಿದು ಅವಸರದಿಂದ ತನ್ನ ಕೋಣೆಗೆ ಹೋದಳು.

ತಾನು ಬದುಕಿ ಬಂದುದು ತನ್ನ ಹೆಂಡತಿಯ ಮಾಂಗಲ್ಯದ ಪುಣ್ಯ ದಿಂದಲೇ ಇರಬೇಕೆಂದು ಉಮೇಶನಿಗೂ ಎನಿಸಿತು. ಏಕೆಂದರೆ ತನ್ನ ಜನ್ಮಾರದ ಪುಣ್ಯದಿಂದ ಎಂದು ಅಂದುಕೊಳ್ಳಲು ಆದು ಎಂದೋ ತನ್ನ ಕೊರಳಿನಿಂದ ಹೋಗಿದ್ದಿತು. ಬಣ್ಣಬಣ್ಣದ ಮಣಿಗಳಿಂದ ಹೆಣೆದ ಚಿಕ್ಕ ಚೀಲ ಒಂದನ್ನು ಹೊರತಂದು ಕಾವೇರಿ ಅದರಲ್ಲಿದ್ದ ಮಡಿಸಿದ ಕಾಗದವನ್ನು ತೆಗೆದು ಮೇಜಿನ ಮೇಲೆ ಹಾಕಿದಳು. ಆ ಅಕ್ಷರಗಳನ್ನು ಕೂಡಲೆ ಗುರುತಿಸಿದ ಉಮೇಶ ಎದ್ದು ನಿಂತು ಪತ್ರವನ್ನು ಓದಲು ಸುರುಮಾಡಿದ. ಮೇಲೆ ಮಧ್ಯದಲ್ಲಿ ರಾರಾಜಿಸುತ್ತಿದ್ದ 'ಕ್ಷಾಮ' ವನ್ನು ಕಂಡೊಡನೆಯೇ ಮುಗುಳು ನಗೆಯೊಂದು ನಗು ಮರೆತ ಅವನ ಮುಖದ ಮೇಲೆ ಸುಳಿಯಿತು. ಪತ್ರದಲ್ಲಿ—

ಕ್ಷಾಮ ಕಮಾಲಪುರ

ಕಾವುಯೇರಿಗೆ ನಾಗೂ ನಡುವ ಆಸಿ ರವದಗಾಳು. ಅಚೆ ಸೂಕ್ರವಾರ ಹೆರಿಗ್ಗೆ ಆತು. ಗಡುಂ ಹುಟ್ಯಾನೆ. ಮುರುತಿಸ್ಗಳು ತುಮ್ಬಿದಮ್ಯಾಲೆ ಗುಂಡಿಗೆ ಹೋಗಿಬತ್ತೀನಿ. ನನ ಜೀವಮೆಲ್ಲ ಆಲೆ ಆದೆ. ಕುಸು ಕಣ್ಣು ಮೂಗಿನಾಗ ಛಂದಾಗಿದ್ದನೆ. ಅವರಪನಹಾಗೆ ಇದ್ದನಂತ ಸೂಬಕ ಅನ್ನುತ್ತಾಳೇ. ಭಾಳಾ ದೇಶವಾನ ಆಗುತ್ತಾನಂತ ಅಣ್ಣ ಹೇಳೇ ಹೇಳುತ್ತೆನೆ. ಆತನ ಮಾತು ಸುಳ್ಳ ಯಾವುದು ಆಗ್ಲಿಲ್ಲಾ. ನೊಡಬೆಕು. ಸಂತೋಕ್ಷ. ಅವರು ಮೆಲ್ಲಿದ್ದಾರೆ. ಯಾವ ಕ್ಯೆಲಸದಾಗಿದ್ದಾರೆ, ಅವರ ದಗ ಒನ್ನೂ ಇಲೇ ಇಲ್ಲ. ದೂಖ ಆಗ್ಯೆದೆ. ಆಲಿಗೆ ಕಾದಗ ಬಂದದೇನು. ನೀನು ಕಳ್ಳಿಸಿದ ಬೆಳ್ಳಿ ಬಂಟಳು ನವುಟು ಭಾಳಾ ಮದ್ದವೆ ಆವರಿಂದಹಲು ಕುಡಿತಾನೆ. ನಂಗೆ ಮಯ್ಯಾಗೆ ಛಂದಾಗಿಲ್ಲ. ಕೆಟಕ್ಕನಸು ಬೀದ್ದು ಹೆದರಿಕಿ ಬರುತ್ತದು. ಇಲಿಗೆ ಸ್ವಾಮಿಗೂಳು ಬರ್ತಾರಂತೆ. ಮಾವನವ್ರು ಕೀಲು ಹೀಗದೆ. ಅಪ್ರೀಗೆ ನನ್ನ ನಮುಕ್ಸಾರ ಹೆಳು. ಮ್ಯಾಲೇ ಮ್ಯಾಲೇ ನೀನು ಕ್ಷಾಮುಕ್ಕೆ ಕಾದಗ ಹಾಕು. ಮರೆಯ ಬ್ಯಾಡಾ. ನಗಮ್ಮ.

ಅರಳಿದ ಮುಖದಿಂದ ಎದುರು ನಿಂತಿದ್ದ ಕಾವೇರಿ ಮಧ್ಯೆ ಮಧ್ಯೆ ಪ್ರಶ್ನೆ ಮಾಡಿ ನಗುತ್ತಿದ್ದಳು.

"ಓದಲು ಬಂದಿತೇನೋ ಉಮೇಶ ?"

"ಓದಲು ಬಾರದಿದ್ದರೂ ಅರ್ಥವೇನೋ ಆಯಿತು, ಕಾವೇರಿ !"

ಎಂದು ಚೇಷ್ಟೆಯ ಹಗುರ ಮನದಿಂದ ಟೀಕೆ ಮಾಡುತ್ತಾ "ಇವಳು ಕನ್ನಡ ಕಲಿಯಬೇಕಿತ್ತು" ಎಂದು ನಗೆಯಾಡಿದ.

"ಅಹುದು ಪಾಪ ! ಅವಳು ಬರೆದುದು ಸಂಸ್ಕೃತ ಅಲ್ವೇನೋ ?" ನೀನು ಕಲಿಸಿದ್ದರಲ್ಲವೇ ಅವಳಿಗೆ ಬರಬೇಕು. ಹಾಲು ಮೊಸರಿನ ಲೆಕ್ಕವನ್ನು ಬಿಳೀ ಗೋಡೆಯ ಮೇಲೆ ಕೆಂಪು ಗುರುತುಗಳಿಂದ ಇಟ್ಟುಗೊಳ್ಳುವಷ್ಟು ಜಾಣತನದಲ್ಲಿ ಹೆಂಡಂದಿರನ್ನಿಟ್ಟ ನೀವು ಸ್ತ್ರೀವಿದ್ಯಾಭ್ಯಾಸದ ಬಗ್ಗೆ ಮೂರು ಮೂರು ತಾಸು ಭಾಷಣಗಳನ್ನು ಬಿಗಿಯಲಿಕ್ಕೇ ಲಾಯಕ್ಕು. ಮನಸ್ಸಿನಲ್ಲಿಯೇ ಓದಬ್ಯಾಡ, ಗಟ್ಟಿಯಾಗಿಯೇ ಓದು. ನಾನೂ ಕೇಳುತ್ತೇನೆ."

ಉಮೇಶ ನಗುವಿನ ಮಧ್ಯೆ ಓದಿದ.

"ಕ್ಷೇಮ. ಕಾವೇರಿಗೆ ನಾಗು ಮಾಡುವ ಆಶೀರ್ವಾದಗಳು. ಆಚೆ ಶುಕ್ರವಾರ ಹೆರಿಗೆಯಾಯಿತು."

ಇಬ್ಬರೂ ಒಮ್ಮೆಲೆ :ಖೊಳ್ಳೆಂದು ನಕ್ಕರು. ನಗುವಿನ ಹುಚ್ಚುಹೊಳೆ ಹರಿಯಿತು.

"ಗಡುಂ ಹುಟ್ಯಾನೇನೋ ಉಮೇಶ ?" ಎಂದಳು.

ನಗುವನ್ನು ತಡೆದ ಉಮೇಶ ಪತ್ರವನ್ನು ಮುಂದುವರಿಸಿದನು.

"ಗಂಡು ಹುಟ್ಯಾನೆ. ಮೂರು ತಿಂಗಳು ತುಂಬಿದ ಮೇಲೆ ಗುಡಿಗೆ ಹೋಗಿ ಬರುತ್ತೇನೆ. ನನ್ನ ಜೀವ ಎಲ್ಲಾ ಅಲ್ಲೇ ಇದೆ. ಕಣ್ಣು ಮೂಗಿನ್ಯಾಗೆ ಚಂದಾಗಿದ್ದಾನೆ. ಅವರಪ್ಪನ್ಹಾಗೆ ಇದ್ದಾನಂತ ಸುಬ್ಬಕ್ಕ ಅನ್ನುತ್ತಾಳೆ. ಬಹಳ ದೆಸೆವಾನ ಆಗುತ್ತಾನಂತ ಅಣ್ಣ ಹೇಳೇ ಹೇಳುತ್ತಾನೆ. ಆತನ ಮಾತು ಸುಳ್ಳು ಯಾವುದೂ ಆಗಿಲ್ಲ. ನೋಡಬೇಕು. ಸಂತೋಷ. ಅವರು ಎಲ್ಲಿದ್ದಾರೆ? ಯಾವ ಕೆಲಸದಲ್ಲಿದ್ದಾರೆ? ಅವರು ಕಾದಗ (ಕಾಗದ ?) ಒಂದೂ ಇಲ್ಲೇ ಇಲ್ಲ. ದುಃಖ ಆಗಿದೆ. ಅಲ್ಲಿಗೆ ಕಾಗದ ಬಂದದೇನು ? ನೀನು ಕಳಿಸಿದ ಬೆಳ್ಳಿ ಬಟ್ಟಲು ಸೌಟು ಬಹಳ ಮುದ್ದು ಅವೆ. ಅದರಿಂದ ಹಾಲು ಕುಡೀತಾನೆ. ನನಗೆ ಮೈಯಾಗೆ ಛಂದಾಗಿಲ್ಲ. ಕೆಟ್ಟ ಕನಸು ಬಿದ್ದು ಹೆದರಿಕೆ ಬರುತ್ತಿದೆ. ಇಲ್ಲಿಗೆ ಸ್ವಾಮಿಗಳು ಬರುತ್ತಾರಂತೆ. ಮಾವನವರ ಕಾಲು ಹೇಗಿದೆ. ಅವರಿಗೆ ನನ್ನ ನಮಸ್ಕಾರ ಹೇಳು. ಮೇಲೆ ಮೇಲೆ ನಿಮ್ಮ ಕ್ಷೇಮಪತ್ರಿ ಕಾಗದ ಹಾಕು. ಮರೆಯಬೇಡ. ನಾಗಮ್ಮ.'

ಇದನ್ನು ಓದಿ ಮುಗಿಸಿದಾಗ ಉಮೇಶನ ಜೀವವೆಲ್ಲವೂ ಅಲ್ಲಿಯೇ — ನಾಗೂನ ಮತ್ತು ಅವಳ 'ಗಡುಂ' ಕೂಸಿನ ಬಳಿಯೇ ಇದ್ದಿತು. ತಾನೂ ಒಬ್ಬ ತಂದೆಯಾದೆನೆಂಬ ಭಾವನೆಯ ಅನುಭವವೂ ಆಗಹತ್ತಿತು.

"ಇವಳಿಗೆ ಕೆಟ್ಟ ಕನಸು ಬೇರೆ ಬೀಳುತ್ತಿದೆಯಂತೆಯೇ" ಉಮೇಶ ಕಾವೇರಿಯ ಕಡೆ ನೋಡಿದ.

"ಸ್ವಪ್ನದಲ್ಲಿ ನಿನ್ನನ್ನೇ ಕಂಡಳೋ ಏನೋ ?"

ಇಬ್ಬರೂ ನಕ್ಕರು. ನಾಗೂನ ವ್ಯಾಕರಣ ತಪ್ಪುಗಳ ಕಡೆ ಮೊದಲು ಹರಿಯುತ್ತಿದ್ದ ಮನಸ್ಸು ಅದೊಂದು ಬಗೆಯ ಗಾಂಭೀರ್ಯವನ್ನು ತಾಳಿ ಉಮೇಶನ ಮುಖದ ಮೇಲೆಯೂ ಮೂಡಿತು. ಇತರರ ಮನವನ್ನು ಓದುವುದರಲ್ಲಿ ನಿಪುಣಳಾದ ಕಾವೇರಿ ಉಮೇಶನ ಮನಸ್ಸಿನ ವ್ಯಾಪಾರವನ್ನೆಲ್ಲಾ ತಿಳಿದೆನೆಂಬುದನ್ನೆಷ್ಟೂ ಹೊರತೋರದೆ ಮಾತು ಬೆಳೆಸಿದಳು.

"ಈಗ ನೀನೊಂದು ಕೆಲಸ ಮಾಡು ಉಮೇಶ."

"ಏನು ?"

"ಈ ಕ್ಷಣವೇ ನಾಗೂನ ಊರಿಗೆ ಹೊರಡು. ಹೌದು ಉಮೇಶ, ನಿನಗೆ ಅವಳ ಸ್ಥಿತಿ ಗೊತ್ತಿಲ್ಲ. ಹುಚ್ಚು ಹಿಡಿಯುವಷ್ಟು ಅಳುತ್ತಿರುತ್ತಾಳೆ ಅವಳು. ನೀನೀಗಲೆ ಹೊರಡು."

"ನಾಳೆ ಹೋದರೆ...." ಸುಮ್ಮನೆ ಒಂದು ಸಲಹೆಯನ್ನು ಮಾಡಿ ನೋಡಿದ. ಅದು ತನಗೇ ಸೂಕ್ತವೆನಿಸಲಿಲ್ಲ.

"ಛೆ, ಬೇಡ. ಈಗ ರಾತ್ರಿ ಗಾಡಿಗೆ ಹೋಗು. ಜಾಗ್ರತೆ ಊಟ ಮುಗಿಸು." ಎಂದು ನಡುವೇ ಬಾಯಿ ಹಾಕಿ ಅವಸರ ಮಾಡಿದಳು.

"ಅಪ್ಪನೊಟ್ಟಿಗೆ ಮಾತನ್ನೇ ಆಡಿಲ್ಲ ನಾನಿನ್ನೂ."

"ಈಗ ಅವರನ್ನು ಎಬ್ಬಿಸುವುದು ಬ್ಯಾಡ. ಬಂದಮೇಲೆ ಬೇಕಾದಷ್ಟು ಆಡಬಹುದು. ಅವರೆಲ್ಲಿಗೂ ಹೋಗುವಂತಿಲ್ಲ."

"ಹೇಳದೇ ಹೋದರೆ ಅವರೇನು ತಿಳಿಯುತ್ತಾರೋ ?" ಎಂದು ಅನುಮಾನಿಸಿದ.

"ಏನು ತಿಳಿಯುತ್ತಾರೆ. ಹೆಂಡತಿಯ ದಾಸನಾದಿ ಎಂದು ಒಳಗೇ ನಗುತ್ತಾರೆ" ಕಾವೇರಿಯೂ ಒಳಗೇ ನಕ್ಕಳು. ಆ ನಗು ಉಮೇಶನ ಮನದಲ್ಲಿ ಪ್ರತಿಬಿಂಬಿಸದಿರಲಿಲ್ಲ.

"ಅವರೂ ಹಾಗೆ ಆಗಿದ್ದಾರೇನು ಕಾವೇರಿ ?" ದನಿಯಲ್ಲಿ ತುಂಟತನ ವಿತ್ತು. ಅದರ ಹಿಂದೆ ಅವರು ಹಾಗಾಗಿರಲಿ ಎಂಬ ಹಾರೈಕೆ ಇತ್ತು. ತಲೆ ಎತ್ತದೆ ಉತ್ತರ ಕೊಟ್ಟಳು.

"ಅವರು ಆಗಿಲ್ಲ, ನಾನು ಆಗೀನಿ."

ಹೀಗಾಯಿತೆಂದು ಹೇಳುವದರಲ್ಲಿ ಹೆಮ್ಮೆಯೂ ಅನಿಸಲಿಲ್ಲ. ದುಃಖವೂ ಆಗಲಿಲ್ಲ ಕಾವೇರಿಗೆ. ಹೀಗೇಕಾಯಿತೆಂಬುದು ಉಮೇಶನಿಗಂತೂ ಅರ್ಥವಾಗಲಿಲ್ಲ. ಇದು ಸರಿಯೋ ಅಲ್ಲವೋ ಎಂಬುದನ್ನು ಚರ್ಚೆಗೆ ಹಾಕಿಕೊಳ್ಳುವ ಗೋಜಿಗೆ ಹೋಗಲಿಲ್ಲ. ಅಂದೊಮ್ಮೆ ಕಾವೇರಿ ಹಾಗಿದ್ದಳು. ಇಂದು ಅದೇ ಕಾವೇರಿ ಹೀಗಿರುವಳು ಎಂಬುದಿಷ್ಟೇ ಅವನ ತಲೆಗೆ ತೋಚಿತು.

"ಕಾಲು ತೊಳೆ ಏಳು ಉಮೇಶ. ಜಾಗ್ರತೆ ಊಟ ಮುಗಿಸು, ಗಾಡಿಗೆ ತಡವಾದೀತು." ಎಂದು ಆಲೋಚನೆಗಳ ಅಪರಿಮಿತ ಆಳದಲ್ಲಿ ಇಳಿಯುತ್ತಿದ್ದ ಉಮೇಶನನ್ನು ಎಚ್ಚರಿಸಿದಳು ಕಾವೇರಿ.

ಊಟವನ್ನು ಮುಗಿಸಿದ ನಂತರ ಉಮೇಶನೊಂದು ಬಾರಿ ತಂದೆಯ ಕೋಣೆಯಲ್ಲಿ ಹಣೆ ಇಕ್ಕಿ ನೋಡಿ ರೈಲ್ವೆ ನಿಲ್ದಾಣಕ್ಕೆ ಹೊರಟ. ಹೊರಬಾಗಿಲ ವರೆಗೂ ಸಾಗಿದ್ದವನನ್ನು ಕರೆದು ಕಾವೇರಿ ತನ್ನ ಪೆಟ್ಟಿಗೆಯನ್ನು ತೆರೆದು ಅದೇನನ್ನೋ ಹುಡುಕಿದಳು.

"ಮತ್ತೇನು ಕಾವೇರಿ ?" ಎಂದು ಹಿಂದೆ ಬಂದ.

"ಚೊಚ್ಚಲುಮಗನನ್ನು ನೋಡಲು ಬರಿಗೈಯಿಂದೇಕೋ ಹೋಗಬೇಕು ? ಇವನ್ನು ಒಯ್ದು ಕೊಡು."

"ಆರು ಸವರನ್ನುಗಳು ! ಆಯಿತು. ಅಜ್ಜಿ ಕೊಟ್ಟಿದ್ದು ಎಂದು ನಿನ್ನ ಮೊಮ್ಮಗನಿಗೆ ಹೇಳುತ್ತೇನೆ." ಗೆಲುವ:ುಖದಿಂದ ಹೊರಟ. ರೈಲು ನಿಲ್ದಾಣವನ್ನು ಬಿಟ್ಟಮೇಲೆ ಉಮೇಶನಿಗೆ ನೆನಪಾಯಿತು. ತನ್ನನ್ನು ಹುಡುಕುತ್ತಾ ಬೆಳಗಿನಲ್ಲಿ ರಾಜು ಬರುವನೆಂದು. ಕೂಡಲೆ ಕುಸುಮಳ ನೆನಪು ಬಂದಿತು. ಅವಳೇಕೆ ಸೌಭಾಗ್ಯವ್ವನಿಂದ ದೂರವಾದಳೋ ಎಂಬ ಪ್ರಶ್ನೆ ತಲೆಗೆ ತೋಚಿತು. ಕ್ಷಯರೋಗ ಬಂದಿದ್ದಿತೇ ಪಾಪ, ಎಂದೆನಿಸಿತು. ಅಂತೂ ಈಗ ಚೆನ್ನಾಗಿರುವಳಲ್ಲ ಎಂಬ ಸಮಾಧಾನ ಜತೆಗೇ ಆಯಿತು. ಅವಳ

ಕಾಗದ ಕಣ್ಣೆದುರಿಗೆ ಬಂದಿತು. ನಿದ್ರೆಯು ಹೊತ್ತಿಗೆ ಏನೆಲ್ಲ ಯೋಚನೆಗಳು ತಲೆ ತುಂಬಿ ಕಣ್ಣು ನಿಚ್ಚಳವಾಯಿತು. ಮಲಗಿದಲ್ಲಿಂದಲೇ ಕಣ್ಣರಳಿಸಿ, ಮೇಲಿದ್ದ ದೀಪದತ್ತ ನೋಡಿದಾಗ ಗಾಜಿನ ಮೇಲಿದ್ದ ಎರಡು ಬಿಳೀ ಹಲ್ಲಿಗಳು ಬಾಲ ಮಡಿಸಿ ಆಡುತ್ತಿದ್ದವು.

## ೧೭. ಮೂಲರಾಮ ದೇವರು

ಹರಿಸರ್ವೋತ್ತಮನು ರೇಶನಾತೀತ. ರೇಶನ್ ಇದ್ದ ಊರುಗಳಿಗೆ ಶ್ರೀಗಳವರು ಎಂದೂ ಹೋದವರಲ್ಲ. ಮಠದಲ್ಲಿ ಯಾವದಕ್ಕೂ ರೇಶನ್ ಬರಲು ಸಾಧ್ಯವೇ ಇಲ್ಲ, ವಿದ್ಯೆ ಮತ್ತು ಭಕ್ತಿಗಳ ಹೊರತು. ಈ ಕೊರತೆಗಳನ್ನು ತುಂಬಿ ಕೊಡಲು ಸಹಸ್ರಾರು ಸರಕುಗಳು ಅಲ್ಲಿ ಇದ್ದವು. ಪೂಜೆಯ ವಿಜೃಂಭಣೆ, ಗಂಟೆಗಳ ಗಣಗಣ, ಜಾಗಟೆಯ ಜಣಜಣ, ಶಂಖನಿನಾದ, ನಗಾರಿಯ ಢಂ ಢಂ, ಮಂತ್ರಘೋಷಣೆ, ಮಸಾಲೆಯ ಕಡಬು—ಹಾಕಿದ ಷ್ಟಲ್ಲ, ತಿಂದಷ್ಟು ಮತ್ತೂ ಚೆಲ್ಲಿದಷ್ಟು. ಬಂಗಾಲದಲ್ಲಿ ಬರಗಾಲ ಬಂದಿರ ಬಹುದು; ತುತ್ತು ಅನ್ನಕ್ಕಾಗಿ, ಗುಟುಕು ನೀರಿಗಾಗಿ ಗುಬ್ಬಿಯಂತೆ ಬಾಯಿ ಬಿಟ್ಟು ಕಸಿದು ತಿನ್ನಲಾರದ ಹೇಡಿ ಬಡಪಾಯಿಗಳು ಹಸಿವೆಯ ಅಗ್ನಿಯಲ್ಲಿ ದಹದಹಿಸಿ ಬೂದಿಯಾಗಿರಬಹುದು. ಆದರೆ ಅದೇ ಸಮಯದಲ್ಲಿ ಮಠದ ಭಕ್ತರು ಜಿಲೇಬಿ ಲಾಡುಗಳನ್ನು ಮರಗಟ್ಟಲೆ ತಿಂದು ಬುಟ್ಟಿಗಟ್ಟಲೆ ತಿಪ್ಪೆಗೆ ಚೆಲ್ಲಿದರು. ಎಲೆಗೆರಡಾದರೂ ಚೆಲ್ಲದಿದ್ದರೆ ಯಾರಿಗೂ ತೃಪ್ತಿ ಇಲ್ಲ. ಅದೇನೋ ಹಪಹಪ ಎಲ್ಲರ ಮನಸ್ಸಿಗೂ. ಉಂಡು ಕೈ ತೊಳೆದ ಮೇಲೆ ಜಿದ್ದು ಕಟ್ಟಿ ವೀಳ್ಯೆಯನ್ನು ನುಂಗಿ, ಆಣೆಗೆರಡು ಲಾಡುಗಳಂತೆ ಮೂರು ರೂಪಾಯಿ ಲಾಡು ಗಳನ್ನು ತಿಂದವರು ಹಲವರು. ಅನ್ನದಾನದ ಹೆಸರಿನಲ್ಲಿ ಅನ್ನದಹನ ಆಳತೆ ತಪ್ಪಿ ಆಗುತ್ತಿದ್ದಿತು. ಅರಿಷಡ್ವರ್ಗಗಳನ್ನು ಗೆಲ್ಲಲು ಕಂಕಣಬದ್ಧ ರಾಗಿದ್ದ ಶ್ರೇಷ್ಠ ಯತಿಗಳ ನೇತೃತ್ವದಲ್ಲಿ ನಿರಂಕುಶವಾಗಿ ನಡೆಯುತ್ತಿತ್ತು ಜಿಹ್ವಾಚಾಪಲ್ಯದ ಆರಾಧನೆ. ಶಿಷ್ಯರಿಂದ ಮಠ ಯೋಗ್ಯತೆ ಮೀರಿದ ಕಾಣಿಕೆ ಯನ್ನು ಬೇಡುತ್ತಿದ್ದಿತು. ಮನದಲ್ಲಿ ಮರುಗುತ್ತ ಮೂರು ತಿಂಗಳ ವೇತನ ವನ್ನು ಸಲ್ಲಿಸಿದವರು ಹಲವರು, ತಾತ ಮುತ್ತಾತಂದಿರು ಗಳಿಸಿಟ್ಟ ಮನೆ

ಗಳನ್ನು ಶೆಟ್ಟರಿಗೋ ಸೊಸೈಟಿಗೋ ಬರೆದುಕೊಟ್ಟು ತಿಂದು ತಣಿದವರಿಗೆ ಸಿಹಿ ಮೇಯಿಸಿ ಸ್ವರ್ಗದ ಹಾದಿಯನ್ನು ಕಾದವರು ಕೆಲವರು, ವೃದ್ಧ ತಂದೆಯ ಆಜ್ಞೆ ಮೀರದೆ ಹೆಚ್ಚು ಹಣ ತೆತ್ತವರು, ಮನೆಯವಳು ದುರು ದುರು ನೋಡಿದಾಗ ಮರುಮಾತನಾಡಲಾರದೆ ಕಡ ತಂದು ಕೊಟ್ಟವರು, ಪುಣ್ಯ ಸಂಪಾದನೆಗಾಗಿ ಹಣವನ್ನು ಮಣ್ಣಿನಂತೆ ಸುರಿದವರು ಅನೇಕರು. ಸತ್ತ ನಂತರ ಸಿಗುವ ಸ್ವರ್ಗ ಇರಲಿ ಇರದಿರಲಿ, ಬದುಕಿರುವಾಗಲೇ ಎಲೆ ಯಲ್ಲಿ ಬಿದ್ದುದನ್ನೆಲ್ಲಾ ಕಬಳಿಸುವ ಸ್ವರ್ಗವಂತೂ ಎಲ್ಲರಿಗೂ ಸಿಕ್ಕಿದ್ದಿತು.

ಶ್ರೀಗಳವರು ಮುಕ್ಕಾಂ ಮಾಡಿದಾಗ ಇಡೀ ಊರಿಗೆ ಮಠವೇ ಅಡಿಗೆಯ ಮನೆ. ಸಹಸ್ರಾರು ಜನರು ರಸ್ತೆ ಬೀದಿಗಳಲ್ಲಿ ಸಾಲುಸಾಲಾಗಿ ಕುಳಿತು, ಗಂಡು, ಹೆಣ್ಣು, ಮಕ್ಕಳು ಮರಿಗಳು ಉಣ್ಣುವದನ್ನು ನೋಡಲು ಎಲ್ಲ ದೇವತೆಗಳೂ ಬಂದಿರಲು ಸಾಕು. ಅದೊಂದು ಬರಗಾಲದಲ್ಲಿ ಅವಶ್ಯ ವಾಗಿ ನೋಡಬೇಕಾದ ದೃಶ್ಯ. ಇಡೀ ಊರಿನಲ್ಲಿ ಆಗ ಮನೆಯಲ್ಲಿ ಒಲೆ ಹೊತ್ತಿಸಿದವಳೇ ಮಹಾಪಾಪಿ--ಈ ಪಾಪಿಯೇ ಸುಬ್ಬಕ್ಕ. ಸುಬ್ಬಕ್ಕನ ಚೀರಾಟ ಪೇಚಾಟಗಳನ್ನು ಕಿವಿಗೆ ಹಾಕಿಕೊಂಡು ಮಾತಿಗೆ ಮಾತನಾಡಿ ಜವಾಬು ಕೊಟ್ಟು, ಸೋಲು ಗೆಲುವುಗಳನ್ನು ತಂದುಕೊಳ್ಳುವ ದಡ್ಡತನ ರಾಮಮೂರ್ತಾಚಾರ್ಯರದಲ್ಲ. ಗೆಲ್ಲುವ ಆರ್ಭಟದಲ್ಲಿ ಅನುಗಾಲವೂ ಮಾತ ನಾಡಿ ಕಡೆಗೆ ಸೋತು ಕೂಡುವದು ಸುಬ್ಬಕ್ಕನ ಹಣೆಯಬರಹ. ಸರಿಯಾದ ಸಮಯದಲ್ಲಿ ಮುತ್ತಿನಂತಹದೊಂದು ಮಾತನಾಡಿ ಅವಳ ಮನಸ್ಸನ್ನು ತಿರುಗಿಸಿ ತಮ್ಮ ಹಾದಿಗೆ ತಂದುಕೊಳ್ಳುವದು ಆಚಾರ್ಯರ ವಾಡಿಕೆ. ಸಿಟ್ಟಿನ ಭರದಲ್ಲಿ ಸುಬ್ಬಕ್ಕ ಆಡುತ್ತಿದ್ದೆಲ್ಲ ಮಾತುಗಳಿಗೆಲ್ಲಾ ರಾಮಮೂರ್ತಾ ಚಾರ್ಯರು ಕಿವುಡರಾಗುತ್ತಿದ್ದರು. ಚೀರಾಡಿ ಬಡಬಡಿಸಿ ಕೈಚೆಲ್ಲಿ ಕುಳಿತಾಗ ಇಲ್ಲವೇ ರೋಷದ ಆವೇಶದಲ್ಲಿ ಏನಾದರೊಂದು ಅಲ್ಲದುದನ್ನು ಮಾಡುತ್ತೇ ನೆಂದು ಸುಬ್ಬಕ್ಕ ನೆಗೆಯುತ್ತಿರುವಾಗ ಒಂದೇ ಮಾತನ್ನಾಡಿ ಗೆಲ್ಲುವ ದಾರ್ಢ್ಯ ಅವರದೇ ಸುಬ್ಬಕ್ಕನಾದರೂ ಬಾಯಿಂದಾಡುವಷ್ಟು ಹಗುರಾಗಿ ಅವರನ್ನು ಮನಸ್ಸಿನಿಂದ ನೋಡುತ್ತಿರಲಿಲ್ಲ. ಅಲ್ಲದೆ ಅವರಂದುದೇ ಎಂದಿಗೂ ಸರಿ ಎಂಬುದನ್ನು ಸಾವಧಾನಚಿತ್ತಳಾಗಿದ್ದಾಗೆಲ್ಲ ಒಪ್ಪಿಕೊಳ್ಳುತ್ತಿದ್ದಳು. ಆದರೂ ಸಿಟ್ಟಿಗೆ ಬಂದಾಗ ಮಾತ್ರ ಭೂಮಿ ಆಕಾಶಗಳು ಅವಳಿಗೆ ಒಂದೇ ಆಗುತ್ತಿದ್ದವು.

ಅಂದು ಬೆಳಗಿನಲ್ಲಾದ ಘಟನೆಯೊಂದರಿಂದ ಸುಬ್ಬಕ್ಕ ಕೆರಳಿದ ಹುಲಿಯಾಗಿದ್ದಳು. ಶ್ರೀಗಳವರನ್ನು ಸ್ವಾಗತಿಸಲು ಊರ ಹಿರಿಕಿರಿಯರೆಲ್ಲರೂ ಸಿದ್ಧರಾದರು. ಸ್ನಾನ ಪೂಜೆಗಳನ್ನು ಮುಗಿಸಿಕೊಂಡು ಬಣ್ಣಬಣ್ಣದ ಮಡಿಗಳನ್ನುಟ್ಟು, ಕಾಯಿಗಳನ್ನು ಕೈಲಿ ಹಿಡಿದು ಒಬ್ಬೊಬ್ಬರೇ ಹೊರ ಬಂದರು. ಎಲ್ಲರೂ ಒಟ್ಟಾಗಿ ಸೇರಿ ಉಕ್ಕಡದ ಆ ಬದಿ ಹೋಗಿ ಕಾದು ನಿಂತು, ಸ್ವಾಮಿಗಳವರ ದರ್ಶನ ಪಡೆದು, ಆನೆಯ ಮೇಲೆ ಕುಳ್ಳಿರಿಸಿ ಬರ ಮಾಡಿಕೊಳ್ಳುವ ಏರ್ಪಾಡು ಆಗಿದ್ದಿತು. ಅವಸರವಸರವಲ್ಲಿ ಪರಿಮಳಾಚಾರ್ಯರು ಸ್ನಾನ ಆಯಿತೆನಿಸಿ, ಪೂಜೆಗೆ ಪೂಜೆ ಹಾಕಿ, ಶಾಲು ಹೊದ್ದು ಹೊರಗೆ ರಸ್ತೆಗೆ ಬಂದು ನಿಂತರು. ಈ ಸನ್ನದ್ಧತೆಯನ್ನೆಲ್ಲಾ ಕಟ್ಟೆಯ ಮೇಲೆ ನಿಂತು ನೋಡಿ ಸುಬ್ಬಕ್ಕ ವಟಗುಟ್ಟುತ್ತ ಒಳಬಂದು ರಾಮಮೂರ್ತಾಚಾರ್ಯರ ಮೇಲೆ ಮಳೆಗರೆದಳು.

"ಇನ್ನಾ ಕೂತೀರಹುದಲ್ಲೋ ಮೂಗ್ಹಿಡಕೊಂಡು ? ನಾನೊಲ್ಲೆ ನಿಮ್ಮ ಪೂಜೀನಾ. ಅವ್ನರಿಲ್ಲಾ ಆಪತ್ತಿಲ್ಲ, ಅದೇನು ಪೂಜೀನೋ ಇವ್ರುದು. ದೇವರಕಟ್ಟೆ ಹತ್ತಿದರಂದ್ರೆ ತೀರಿತು. ಮೈಮ್ಯಾಲಿನ ಎಚ್ಚರಾನೇ ತಪ್ಪದೆ ಇವರಿಗೆ. ಆಗಲೇ ಪರಿಮಳಾಚಾರ್ರು ಸುದ್ಧಾ ಬಂದುಬಿಟ್ರು. ಸ್ವಾಮಿಗಳ್ನ ಕರೀಲಿಕ್ಕೆ ಹೋಗಲಿಕ್ಕೆ ಊರಿಗೆ ಊರೇ ಹೊರಟಿದೆ, ನೀವಿನ್ನೂ ತಯಾರ ಆಗುವಲ್ರೆಲ್ಲಾ ? ದೇವ್ರು ಪ್ರತ್ಯಕ್ಷ ಆಗೋವರಿಗೂ ಹೀಗೇ ಕೂಡ್ತಿರೋ ಏನ್ಮಣ್ಣು ? ಸಾಕು ಏಳ್ರಿನ್ನ, ದೇವರ ಪೆಟ್ಗಿ ಕಟ್ಟಿ" ಎಂದವಸರಪಡಿಸಿ ತಾನೇ ಅವಸರಪಟ್ಟಳು. ರಾಮಮೂರ್ತಾಚಾರ್ಯರ ಪೂಜೆ ಮಾತ್ರ ಯಥಾಸ್ಥಿತಿ ಸಾಗಿಯೇ ಇದ್ದಿತು. ತನ್ನ ಹೇಳಿಕೆಯಿಂದ ಏನೂ ಪರಿಣಾಮ ಆಗದಿದ್ದುದಕ್ಕೆ ಸುಬ್ಬಕ್ಕನ ಸಿಟ್ಟು ಸಿಡುಕು ಬಲವಾದವು. ಮಂತ್ರಪುಷ್ಪಗಳು ಹೆಚ್ಚೆಚ್ಚು ಬೀಳಹತ್ತಿದವು ಅವಳ ಬಾಯಿಂದ.

"ಇವತ್ತೊಂದು ದಿವ್ಸಾದ್ರು ಬಿಡ್ರಿ ನಿಮ್ಮ ದೇವರ್ನ, ನಾ ನೋಡ್ತಾರೆ. ಸ್ವಲ್ಪ ಹೊರಗೆ ಬಂದು ನೋಡ್ರಿ, ಎಷ್ಟು ಜನ ಹ್ಯಾಗೆ ಓಡ್ಯಾಡ್ತಾರೆ. ಊರಿಗೆ ಊರೇ ಮಿರಗ್ತದೆ. ಕಟ್ಟೆ ಹತ್ತಿದರೂ, ಕಣ್ಣು ಮುಚ್ಚಿಗೊಂಡು ಕೂತರು. ಏಳ್ರಿ, ಏಳ್ರಿ ಸಾಕು ಇನ್ನ. ಛಂದ ಕಾಣೋದಿಲ್ಲ. ಊರು ಬಾಗಿಲಾಗೆ ಬಂದಾರಂತೆ ಸ್ವಾಮಿಗಳು. ಎಲ್ಲಾರಂತೆ ನೀವೂ ಹೋಗಿ

ಬರ್ರಿ. ಮುಂದಕ್ಕೆ ಬೀಳ್ಳಿಕ್ಕೆ ಏಳ್ರಿ. ಮೂಗ್ಹಿಡಕೊಂಡು ಕೂತ್ರೆ ಯಾರು ಕೇಳ್ಬೇಕೂ ಅಂತೀನಿ. ಹೋದ್ವು ಆ ಕಾಲ ಇನ್ನ. ಇದ್ದದ್ದೇನು ಇದ್ದೇ ಇರ್ತದೆ, ತೋರ್ಸ್ಲಿಕ್ಕಿಷ್ಟು ಆಡಂಬರ ಬೇಕು ಈಗ. ಅವಡ್ಡಾಳ ಸಾವಿರ ಇರಲಿ, ಆಡಂಬರ ಇದ್ದರೆ ಎಲ್ಲಾರೂ ಮುಂದೆ ಬರ್ರಿ ಅಂದಾರು, ಮರ್ಯಾದೆ ಮಾಡ್ತಾರು. ನೋಡಿ ಕಲೀರಿ ಪರಿಮಳಾಚಾರ್ರನ್ನ. ಹ್ಯಾಗೆ ಜನ ಅವರ ಪಾದ ಮುಟ್ಟಿ ನಮಸ್ಕಾರ ಮಾಡ್ತಾರೆ ರಸ್ತೇದಾಗೆ. ಆ ಹಸರು ಶಾಲಿನ ಮಹಿಮಾ ಅದು. ನಿಮ್ಮ ಆ ನೀರು ಪಂಚೆ ನೋಡಿದ್ರೆ ನನಗೆ ಒಲ್ಲೆ ಅನಸ್ತದೆ, ಮಂದಿ ಮಾತು ಹಾಗಿರ್ಲಿ. ಇನ್ನೂ ಮುಗಿಲಿಲ್ಲೇನು ನಿಮ್ಮ ದೇವತಾರ್ಚನಿ."

ಇದಾವುದನ್ನೂ ಕಿವಿಗೆ ತಂದುಕೊಳ್ಳದೆ 'ನನ್ನ ಹಾದಿ ನನಗೆ' ಎಂಬಂತೆ ರಾಮಮೂರ್ತಾಚಾರ್ಯರು ಪೂಜೆಯಲ್ಲಿ ನಿರತರಾಗಿಬಿಟ್ಟರು. ಒಳಗೆ ನಿಂತು ವಟಗುಟ್ಟಿ ಬೇಸತ್ತ ಸುಬ್ಬಕ್ಕ ಹೊರಕಟ್ಟೆಗೆ ಬಂದು ಕುಳಿತು ಊರಿನಲ್ಲಿನ ದಿಮಿದಿಮಿಯನ್ನು ನೋಡುತ್ತ ಮೂಗಿಗೆ ಬೆರಳಿಟ್ಟರು. ರಸ್ತೆಗೆ ತೋರಣ, ಬೀದಿಗಳಲ್ಲೆಲ್ಲಾ ನೀರು ಸಿಂಪಡಿಸಿ, ರಂಗವಲ್ಲಿ ಮುಂತಾದವುಗಳಿಂದ ಅಗ್ರಹಾರ ಕಳೆಗಟ್ಟಿದ್ದಿತು. ಸುಬ್ಬಕ್ಕನ ಕಣ್ಣಿಗಂತೂ ಸಾಕ್ಷಾತ್ ದೇವಲೋಕದಂತೆಯೇ ಕಂಡಿತು. ಇದನ್ನು ನೋಡುವ ಪುಣ್ಯ ತನ್ನ ಗಂಡನಿಗಿಲ್ಲವೆಂದು ಮಾತ್ರ ಕೊಂಚ ಪೇಚಾಟವಾಯಿತು.

"ರಾಮಮೂರ್ತಾಚಾರ್ರು....ಏನ್ಮಾಡ್ತಾರಮ್ಮ ?" ಎಂದು ಬಾಗಿಲೆದುರು ನಿಂತು ಪರಿಮಳಾಚಾರ್ಯರು ವಿಚಾರಿಸಿ ಎಡಗೈಯಿಂದ ಜುಟ್ಟನ್ನು ಮುಟ್ಟಿಕೊಂಡರು.

"ಬರ್ತಾರೆ. ಈಗ ಕಳಿಸ್ತೀನಿ. ಅವರ ದೇವತಾರ್ಚನಿ ಮುಗೀತಾ ಬಂತು. ಸ್ವಾಮಿಗಳು ಎಲ್ಲೀ ತನಕ ಬಂದಾರಂತ್ರೀ ಪರಿಮಳಾಚಾರ್ರೇ ?" ನಿಂತಲ್ಲಿ ನಿಲ್ಲವೇ ಕುಣಿಯುತ್ತಿದ್ದಳು ಸುಬ್ಬಕ್ಕ.

"ನನ್ನ ಕೇಳಿದರೆ....ದಿವಾನ್ರು.......ರಾಮಮೂರ್ತಾಚಾರ್ರಿಗೆ........ಈ ರಾಯಸ ಮುಟ್ಟಿಸಿಬಿಡ್ರಿ" ಕೈಲಿದ್ದ ಕಾಗದ ಒಂದನ್ನು ಸುಬ್ಬಕ್ಕನ ಗೆ ಎತ್ತಿಹಾಕಿ ಪರಿಮಳಾಚಾರ್ಯರು ಒಂದೇ ಓಟದಲ್ಲಿ ಮಾಯವಾದರು.

ಮುಂದೆ ತನ್ನ ಗತಿ ಏನಿದೆಯೋ ಎಂಬಂತೆ ಜುಟ್ಟಿನ ಮೇಲೆ ಮೇಲಿಂ ಮೇಲೆ ಕೈಯಾಡಲು ಮಾತ್ರ ಮರೆಯಲಿಲ್ಲ.

" ಇದೇನು ರಾಯಸವೂ ಅಂತೀನಿ. ನನಗೇನು ಸುಡುಗಾಡು ತಿಳೀ ಬೇಕಾಗೇದ ಇವರಾಗೆ! ಮತ್ತಿನ್ನೇನಾರ ಅ ಹಾದ್ಯೊಲ್ಲೋ ಅಂತ. ಪರಿಮಳಾಚಾರೇನಾರ ಕಂತು ನಡಿಗಿಡಿಶಾರೋ ಏನ್ನಸ್ನೋ ಮತ್ತೆ......." ತನ್ನಲ್ಲಿಯೇ ತಾನು ವಟಗುಟ್ಟುತ್ತ ಕೈಲಿ ಕಾಗದವನ್ನು ಹಿಡಿದು ಸುಬ್ಬಕ್ಕ ಒಳಗೆ ಬಂದಳು. ದೇವರ ಮನೆಯನ್ನು ಹೋಗುವ ಮುನ್ನೆಯೇ ಸುಬ್ಬಕ್ಕ ಅದೆಷ್ಟು ಮಾಡಿದರೂ ಜಪ ಮಾಡುತ್ತ ಕುಳಿತ ರಾಮಮೂರ್ತಾ ಚಾರ್ಯರು ಜುಮ್ ಎನ್ನಲಿಲ್ಲ.

"ಇದೇನೋ ರಾಯಸಂತೆ ನೋಡ್ರಿ, ಪರಿಮಳಾಚಾರ್ರು ಕೊಟ್ಟು ಹೋದ್ರು. ಸ್ವಾಮಿಗಳಿಂದ ಬಂದದೋ ಏನೋ ? ಇಲ್ಲಿಡ್ತೀನಿ. ನೀರು ಹಾಕಿ ತೊಗೊಳ್ರಿ, ಮಸ್ಯಾಗೆ ನೀರ ಕಲ್ತಿರತದೆ" ರಾಯಸವನ್ನು ದೇವರ ಕಟ್ಟೆಯ ಮೇಲಿಟ್ಟು ಕಾದು ನಿಂತಳು. ಜಪದಲ್ಲಿ ಮಗ್ನರಾಗಿ ಸ್ಥಿತಪ್ರಜ್ಞರಾಗಿ ಹೊರ ದೃಷ್ಟಿಯನ್ನು ಒಳತಿರುವಿ ಕುಳಿತಿದ್ದ ರಾಮಮೂರ್ತಾಚಾರ್ಯರ ಮುಂದೆ ಆ ರಾಯಸ ತೇಜೋಹೀನವಾಗಿ ನೆಲಕ್ಕೆ ಬಿದ್ದ ಕ್ಷತ್ರದಂತೆ ಕಂಡಿತು. ಒಂದೆರಡು ನಿಮಿಷಗಳಲ್ಲಿ ಕಣ್ತೆರೆದನಂತರ ಆ ಕಾಗದವನ್ನು ಕೈಗೆ ನಗು ಕೊಂಡರು. ಮೊದಲು ಕಂಡ ' ಶ್ರೀ ಮೂಲರಾಮೋ ವಿಜಯತೇ ' ಎಂಬುದಕ್ಕೆ ಮನಸ್ಸಿನಲ್ಲಿಯೇ ಕೈಮುಗಿದರು. ಮಠದ ಪೀಠವನ್ನು ಸ್ಮರಿಸಿ ಕೊಂಡು ಗೌರವ ಪೂಜ್ಯಭಾವನೆಗಳಿಂದ ಕಣ್ಣಿಗೊತ್ತಿಗೊಂಡು, ರಾಯಸ ವನ್ನು ಓದಿ ಮುಗಿಸಿದರು. ಒಂಟಿಗಾಲ ಮೇಲೆ ನಿಂತ ಸುಬ್ಬಕ್ಕ ' ಏನಂತೆ ಏನಂತೆ ' ಎಂದು ಇಷ್ಟರಲ್ಲಿಯೇ ಹತ್ತು ಬಾರಿ ಕೇಳಿದಳು. ರಾಮಮೂರ್ತಾ ಚಾರ್ಯರು ಮಾತ್ರ ಮನಶ್ಶಾಂತಿಯನ್ನು ಕೊಂಚವೂ ಕದಡಿಕೊಳ್ಳದೆ ಆ ರಾಯಸವನ್ನು ಬದಿಗಿದ್ದ ಚಿಕ್ಕದೊಂದು ಮಣೆಯ ಮೇಲಿಕ್ಕಿ, ಎರಡು ಕಾಳು ಮಂತ್ರಾಕ್ಷತೆ ಹಾಕಿ ಕೈಮುಗಿದು, ಮತ್ತೆ ಕಣ್ಣು ಮುಚ್ಚಿದರು.

"ಏನಂತಾರೆ ಅವರು ಅಂಬೋದರ? ಏನು ಮಠಕ್ಕೆ ಬರಬ್ಯಾಡ ಅಂತ ಬರದಾರೋ, ಏನ್ಗತಿ ? ಈ ಪರಿಮಳಾಚಾರಿ...."

"ರಾಮದೇವರು ಆಜ್ಞಾ ಮಾಡಿಸಿದರೆ ಪರಿಮಳಾಚಾರನ್ನ ಯ

ಬಾರದು" ಬುದ್ಧಿ ಹೇಳುವ ದನಿಯಲ್ಲಿ ಆಚಾರ್ಯರು ನುಡಿದರು. ಆದರೆ ಕೇಳುವ ಸ್ಥಿತಿಯಲ್ಲಿರಲಿಲ್ಲ ಸುಬ್ಬಕ್ಕನ ಮನಸ್ಸು. ಆ ಪತ್ರದಲ್ಲಿದ್ದುದರ ಅಭಿಪ್ರಾಯ ವೇನೆಂಬುದು ಆವಳಿಗೆ ಸ್ಪಷ್ಟವಾಯಿತು.

"ಅಂತೂ ತೀರ್ಥಪ್ರಸಾದಕ್ಕೆ ಬರಬ್ಯಾಡ ಅಂತ ಬರದಾರೆ ಹೌದಲ್ಲೋ? ಎಂದು ಇನ್ನೊಂದು ಬಾರಿ ದೃಢ ಮಾಡಿಕೊಳ್ಳಲು ಕೆಣಕಿ ಕೇಳಿದಳು.

"ದರ್ಶನಕ್ಕೂ ಬರಬಾರದು ಎಂದು ಆಜ್ಞಾ ಕೊಡಿಸ್ಯಾರೆ ದಿವಾನರು."

"ದಿವಾನರ ಅಪ್ಪನಪಂತೇನು ರಾಮದೇವ್ರು? ಕಂಟ್ರಾಕ್ಟು ಹಿಡಿದಾ ನಂತೇನು ದೇವ್ರನ್ನ !" ಹುಲಿಯಂತೆ ಕಣ್ಣರಳಿಸಿದಳು.

"ರಾಮದೇವರು ಅವರಪ್ಪನದಲ್ಲ. ಆದರೆ ಮಠ ಅವರದು. ಅಲ್ಲಿಯ ಅಧಿಕಾರ ಅವರದು "

"ಹಾಗಾದರೆ ನಾವ್ಯಾರೂ ಅಲ್ಲಿ ಹೋಗ್ಲಿಕ್ಕಿಲ್ಲಾ ?"

"ಇಲ್ಲ."

ಸುಬ್ಬಕ್ಕನ ಆವೇಶ ಇತಿಮಿತಿಯಾಯಿತು. ಕೋಪ ತಾಪಗಳಿಂದ ಕಿಡಿಕಿಡಿಯಾದಳು. ಮರು ಮಾತಾಡದೆ, ಒಮ್ಮೆಲೆ ಹಿಂದಿರುಗಿ ಹೊರ ಬಾಗಿಲನ್ನು ಧುಪ್ಪೆಂದು ಹಾಕಿ, ಲಾಲವಂಡಿಗೆ ಎಳೆದಳು. ತನ್ನಿಂದಲೇ ಇಷ್ಟೆಲ್ಲ ಅನಾಹುತವೆಂದು ಅರಿತು ಅಳುತ್ತ ಕುಳಿತ ನಾಗಮ್ಮನನ್ನು ಸಂತೈಸು ವುದೇ ಸುಬ್ಬಕ್ಕನಿಗೆ ಪ್ರಯಾಸದ ಕೆಲಸವಾಯಿತು. ಸುಬ್ಬಕ್ಕನ ಮನಸ್ಸಿಗಾದ ಸಂತಾಪದ ಅರಿವು ಲೌಕಿಕದ ಆ ಬದಿ ಸಾಗಿ ಸನ್ಮುಖದತ್ತ ಹೊರಹೊರಡಲು ಹೆಣಗುತ್ತಿದ್ದ ರಾಮಮೂರ್ತ್ಯಾಚಾರ್ಯರಿಗೆ ಆಗಲೇ ಇಲ್ಲ. ಕಣ್ಣು ಮುಚ್ಚಿ ಕುಳಿತ ರಾಮಮೂರ್ತ್ಯಾಚಾರ್ಯರು ದಿವ್ಯದರ್ಶನಕ್ಕಾಗಿ ಮಾನಸಪೂಜೆಯ ಲ್ಲಿಯೇ ಮಗ್ನರಾದರು.

ಅತ್ತು ಬೇಸತ್ತು ತುಸು ಹೊತ್ತಿನ ನಂತರ ನಾಗಮ್ಮ ಮೆಲ್ಲಗೆ ಮಾತಿ ಗಾರಂಭಿಸಿದಳು.

"ನಾನು ಹೋಗ್ತೀನಿ ಅಂದ್ರೆ ನೀನು ಕೇಳ್ಲಿಲ್ಲ. ಈಗ ನೋಡವ್ವ ಅತ್ತಿಗಿ ನಿಮಗೆಲ್ಲಾರಿಗೂ...."

"ಹ್ಯಾಗೆ ಹೋಗ್ತೀದೇ ನಾಗೂ. ಲಕ್ಷಣಾಗಿ ಗಂಡು ಹಡದೀದಿ. ಗುಡಿಗೂ ಕಳಿಸ್ಟೇನೆ ಹಸಿ ವೈ ಹುಡುಗಿನ್ನ ಕಳಿಸಿಕೊಡೋದು ಎಲ್ಲಾ್ಯರ

ಉಂಟೇ ?” ಸುಬ್ಬಕ್ಕ ಹೇಳುತ್ತಿದ್ದ ಸಮಾಧಾನ ನಾಗಮ್ಮನಕಿಂತಲೂ ತನಗೇ ಹೆಚ್ಚು ಉಪಯುಕ್ತವಾಗುವಂತಿದ್ದಿತು. ನಾಗಮ್ಮನ ಮಾತೇ ನಾಗಮ್ಮನಿಗೆ.

“ಅಣ್ಣನಿಗೆ ಅವಮರ್ಯಾದಿ ಆಗೋದು ಹ್ಯಾಗೆ ನೋಡ್ಲಿ ಅತ್ತಿಗಿ, ಅದೂ ನನ್ನಾಲಾಗೆ ! ನನ್ನ ದುರ್ದೈವ ನಾನು ಅನುಭವಿಸ್ಬೇಕೂ ಸೈ. ನಿಮಗೆಲ್ಲ ಯಾಕ ಬಡಕೋಬೇಕು ಅಂತೀನಿ. ಅದಕ್ಕ ಅಂತಾರೆ....”

“ಏನಂತಾರೇ ನಾಗು ? ಹೀಗ್ಯಾಕೆ ಹುಚ್ಚುಚ್ಚು ಬಡಬಡಸ್ತೀದಿ. ಥಣ್ಣಗೆ ಮಲಗು.”

“ಮಲಗಿಧಾಗೆ ಅದವ್ವ ಥಣ್ಣಗೆ. ಮಲಗೂ ಮಲಗೂ ಅನ್ನಿಕ್ಕೆ ನಾನು ಎದ್ದೀನೆಲ್ಲಿ. ಮಲಗಿಸೇ ಬಿಟ್ಟಾನೆ ನನ್ನ ದೇವ್ರು. ಅವದು ಎಂದು ಹೋದ್ರೋ....”

“ ಛೀ ಹುಚ್ಚಿ ! ಹಾಲು ತುಪ್ಪ ಅನ್ನು ” ಎಂದು ಮಧ್ಯದಲ್ಲಿಯೇ ಸುಬ್ಬಕ್ಕ ನಾಗಮ್ಮನ ಬಾಯಿಗೆ ಕೈಯಿಟ್ಟಳು. “ ಹಾಗೆಲ್ಲ ಅನಬಾರದಮ್ಮ. ಅವಲಕ್ಷಣ ” ಎಂದಿನ್ನೂ ಕಣ್ಣು ಒರಿಸುತ್ತಿದ್ದಾಗಲೇ ನಾಗಮ್ಮನ ಮೈಮೇಲೆ ದೆವ್ವ ಕಾಣಿಸಿಕೊಂಡಿತು. ಗಹಗಹಿಸಿ ನಕ್ಕು ನಾಗಮ್ಮ ಕಾಲ ಮೇಲೆ ಕಾಲು ಹಾಕಿ ಕುಳಿತುಕೊಂಡಳು. ಮುಖದಲ್ಲಿ ವಿಕಾರವಾದ ಗೆರೆಗಳು ಮೂಡಿದವು. ಗಂಟಲು ಬದಲಾಯಿತು.

“ನಾನಿದ್ದಲ್ಲೆ ನನ್ನ ಮಗ, ನನ್ನ ಮಗ ಇದ್ದಲ್ಲೆ ನನ್ನ ಸೊಸಿ. ನಾನೇ ಒಯ್ದದ್ದು ನನ್ನ ಮಗನ್ನ. ಉಮೇಶನಿಗೆ ಏನು ಸುಖ ಇತ್ತು ಮನ್ಯಾಗೆ ಅಂತ ಅವನ್ನ ಬಿಡ್ಲಿ. ಅವರು, ಯಜಮಾನ್ರು ಆ ಕಂದಮ್ಮನ ಕಾಡಿ ಕಾಡಿ ಹುರುಕೊಂಡು ಮುಕ್ಕಿದರು. ಅವನ ಸಂಸಾರ ಹಂಡಾವರಣ ಆದದ್ದು ನೋಡಿ ಅವನ್ನ ಕರಕೊಂಡ್ಹೋದೆ. ಈಗ ಸೊಸಿನ್ನೂ ಒಯ್ಲಿಕ್ಕೆ ಬಂದೀನಿ.” ಸುಬ್ಬಕ್ಕ ಎದ್ದು ಬಂದು, ಹಾಸಿದ್ದ ಹರುಕು ಸೀರೆಯ ಮೇಲೆ ಅಪುಕ್ತ ಮಲಗಿದ್ದ ಕೂಸಿಗೆ ಅಡ್ಡ ಕುಳಿತಳು.

“ಹೋಗ್ತೀನೀ ಅಂದೆಲ್ಲವ್ವಾ ಅವತ್ತು. ಹೀಗೆ ಮಂದೀ ಮನ್ಯಾಗೆ ಬಂದು....”

"ಮಂದಿ ಯಾಕೆ ಅಗ್ತಾರೇ ನಮ್ಮವ್ವ? ನನ್ನ ಸೊಸಿನ್ನ ನನ್ನ ಮಮ್ಮಗನ್ನ ನೋಡ್ಲಿಕ್ಕೆ ನಾ ಬಂದ್ರೆ ಅದೂ ಸ್ವೈರಣೀ ಇಲ್ಲೇ ಈ ಜನಕ್ಕೆ? ನಾನು ಇನ್ನೊಬ್ಬರ ಮನ್ಯಾಗೆ ಆಗೂ ಕಾಲಿಟ್ಟಾಕೆಲ್ಲ, ಈಗೂ ಕಾಲಿಡಾಕೆಲ್ಲ. ಈ ಮನಿ, ತಪ್ಪಿದರೆ ಆ ಮನಿ. ಅವರನ್ನೂ ಕಾಡತಿದ್ದೀನಲ್ಲ ಈಗ, ಮತ್ತೇನು ತಿಳಿದಿ? ಅವರ ಕಾಲಸೂಲಿ ಎಲ್ಲೀದು ಅಂತ ಮಾಡೀರಿ? ಅಹಹಹಹ" ಗಹಗಹಿಸಿ ನಕ್ಕಳು.

"ನೀನು ಅಲ್ಲಿಗೇ ಹೋಗವ್ವ ತಾಯಿ. ಈ ಹಸಿ ಮೈ ಹುಡಿಗಿನ್ನ ಕಾಡಬ್ಯಾಡ."

"ಅಯ್ಯ, ನಾನ್ಯಾಕೆ ಹೋದೇನು? ನನ್ನ ಸೊಸಿನ್ನ ಮೊಮ್ಮಗನ್ನ ಬಿಟ್ಟು!"

"ಕರದಾರ ಕರಿತೀನಿ ನಿಂದ್ರು ಅವರ್ನ, ದೇವ್ರು ಕಟ್ಟೇ ಮ್ಯಾಲೆ ಕೂತಾರೆ" ಸುಬ್ಬಕ್ಕ ಏಳಲು ಹವಣಿಸಿದಳು. ಆದರೆ ಕೂಸನ್ನೊಂದನ್ನೇ ಬಿಟ್ಟು ಹೋಗಲು ಅನುಮಾನಿಸಿದಳು.

"ಹೋಗ್ತೀನವ್ವಾ ತಾಯಿ. ಇಗೋ ಹೊರಟೆ. ಕರೀಬ್ಯಾಡವ್ವ ಆ ಬೆಂಕಿಯಂಥ ಬ್ರಾಮ್ಣನ್ನ. ಆತನ ಹೆಸರಂದ್ರೆ ಅಂಜಿ ಸಾಯ್ತೇನಿ."

ಅದೇ ಇನ್ನೂ ಪೂಜೆ ಮುಗಿಸಿ ಕಟ್ಟೆಯಿಂದ ಇಳಿದ ರಾಮಮೂರ್ತಾಚಾರ್ಯರಿಗೆ ನಡುಮನೆಯಲ್ಲಿ ಜರುಗುತ್ತಿದ್ದ ಮಾತುಗಳು ಅರ್ಧಂಬರ್ಧ ಕಿವಿಗೆ ಬಿದ್ದವು. ನಡುಮನೆಗೆ ಬಂದು ಬಾಗಿಲಿಗೆ ನಿಂತು ನಾಗಮ್ಮಾ ಎಂದು ಕೂಗಿದರು. ಕನಸಿನಿಂದ ಎಚ್ಚೆತ್ತಂತೆ ನಾಗಮ್ಮ ಎದ್ದು ಸೆರಗು ಸರಿಪಡಿಸಿ ಕೊಂಡಳು.

"ಬಂದೆ ಮಾರಾಯ್ರಿ, ಆಗಿನಿಂದ ನಡಿಸೇಬಿಟ್ಟಾಳೆ ಒಂದೇ ಸವನೆ. ಇದ್ಯಾವ ಕಾಟೋ ಏನ್ಮಣ್ಣೋ?"

ನಾಗಮ್ಮ ಹೊರಸಿನ ಮೇಲೆ ಮಲಗಿ ಅಳಹತ್ತಿದಳು. ಸನಿಯ ಬಂದ ರಾಮಮೂರ್ತಾಚಾರ್ಯರು ಮಗುವನ್ನು ಅವಳ ಬದಿ ಮಲಗಿಸೆಂದು ಸುಬ್ಬಕ್ಕನಿಗೆ ಹೇಳಿದರು. ದೆವ್ವದ ಮಗ್ಗುಲಲ್ಲಿ ಮಗುವನ್ನೊಯ್ದು ಮಲಗಿ ಸಲು ಸುಬ್ಬಕ್ಕ ಅನುಮಾನಿಸುವುದನ್ನು ಕಂಡು ತಾವೇ ಹಾಸಿಗೆಯ ಬಳಿಗೆ ಬಂದು ಕೂಸನ್ನು ಎತ್ತಿಕೊಂಡರು.

"ಅಯ್ಯ! ಮೈಲಿಗಾಗಿ ಬಿಡ್ತೀರಲ್ಲ ಈಗಲೇ" ಎಂದು ಸುಬ್ಬಕ್ಕ ಉದ್ಗಾರ ತೆಗೆದಾಗ ರಾಮಮೂರ್ತಾಚಾರ್ಯರ ಮುಖದ ಮೇಲೆ ಅದೊಂದು ಬಗೆಯ ನಗು ಮೂಡಿತು.

"ನನಗೇ—ನಿನಗೆ ಮೈಲಿಗಿ. ಈ ಕೂಸಿಗೂ ಮೈಲಿಗಿ ಅಂದ್ರೇನೆ?" ಮಗುವನ್ನು ಮುದ್ದಿಕ್ಕಿ ತಂಗಿಯ ಮಗ್ಗುಲಲ್ಲಿ ಮಲಗಿಸಿದರು.

"ನಾಗವ್ವಾ, ಹಸದಾನ್ನೋಡು ನಿನ್ನ ಮಗ" ಎಂದು ಮೆಲ್ಲನೇ ಹೊರಗೆ ಸರಿದರು.

ಕೂಸಿನ ಮುಖದ ಮೇಲೆ ನಾಗಮ್ಮ ಸೆರಗು ಹೊದಿಸಿದಳು.

"ಯಾವಾಗ ಹೊಟ್ಟಿ ಕೊಟ್ಟಿದ್ಲೋ ಏನ್ಮಣ್ಣೋ. ಕೂಸಿನ ಹೊಟ್ಟಿ ಅನ್ನೋದು ಎಳೀ ಬಾಳೀಯೆಲಿ ಆಗೇದ. ಕರಕೋಳವ್ವ ನನ್ತಾಯಿ, ನಾನಿಷ್ಟು ಅಡಿಗಿಮನಿ ನೋಡ್ತೀನಿ."

ಕೈಕಾಲು ಚಿಮ್ಮುತ್ತ ನೆಗೆಯುತ್ತ ಆಡುತ್ತ ಮಗುವು ಹಸಿವನ್ನು ತಣಿಸಿಕೊಂಡು ಅಲ್ಲಿಯೇ ಕೈಯಿಟ್ಟು ಮೈಮರೆಯಿತು. ಅದಾವಾಗಲೋ ನಾಗಮ್ಮನಿಗೆ ನಿದ್ರೆ ಹತ್ತಿಬಿಟ್ಟಿದ್ದಿತು.

ಸುಬ್ಬಕ್ಕನಿಗೆ ಮಾತುಗಳು ಬೇಡಾದವು. ಆಡಿವಷ್ಟೂ ಅದೇ ಮಾತು! ಸ್ನಾನ ತೀರಿಸಿ ನೇರವಾಗಿ ಬಂದವಳೇ ಅನ್ನದ ತಪ್ಪೇಲಿಯನ್ನು ಒಲೆಗೇರಿಸಿ ಗೌರಿಪೂಜೆಯನ್ನು ಮಾಡಿಕೊಂಡಳು. ತುಳಸಿಗೆ ನೀರು ಹಾಕಿ ತನ್ನ ನಿತ್ಯದ ಪ್ರದಕ್ಷಿಣೆ ನಮಸ್ಕಾರಗಳನ್ನು ಮುಗಿಸಿ ನಡುಮನೆಯಲ್ಲಿ ಹಣೆ ಇಕ್ಕಿ ನೋಡಿದಳು. ರಾಮಮೂರ್ತಾಚಾರ್ಯರು ಕೃಷ್ಣಾಜಿನವನ್ನು ಹಾಸಿಕೊಂಡು ಪುಸ್ತಕವನ್ನು ನೋಡುತ್ತ ಕುಳಿತಿದ್ದರು. ಸುಬ್ಬಕ್ಕನ ಕಣ್ಣಿಗೆ ತನ್ನ ಗಂಡ ಸಾಕ್ಷಾತ್ ವ್ಯಾಸರಂತೆ ಕಂಡನು. ಅವಳ ಮನಸ್ಸು ಕದಡಿ ಹೃದಯದ ತಂತಿಯೊಂದು ಮಿಡಿದಾಗ ಪಳಪಳನೆ ಕಣ್ಣಿಂದೆರಡು ಹನಿಗಳು ಉದುರಿದವು. ಕಣ್ಣೊರಸಿಕೊಳ್ಳುತ್ತ ಒಲೆಯೂದಿ ತನ್ನಲ್ಲಿ ತಾನು ಪೇಚಾಡಿಕೊಳ್ಳಲು ಸುರು ಮಾಡಿದಳು.

"ಇಂಥ ಋಷಿ ಅಂಥಾ ಬ್ರಾಹ್ಮಣಗೆ ಅವಮಾನ! ಮಳಿ ಬೆಳಿ ಬಾ ಅಂದ್ರೆ ಎಲ್ಲಿಂದ ಬಂದಾವು? ಅದಕೇ ಈ ಸುಡುಗಾಡು ವಿದ್ಧಗಳು, ರೂಪಾಯಿಗೆರಡು ಸೇರಕ್ಕಿ ಆಗ್ಯಾವೆ ಮತ್ತೆ. ಯೋಗ್ಯರಿಗೆ ಕಾಲವಲ್ಲಿದು. ಸುರಿ

ಲಿಕ್ಕೆ ದುಡ್ಡಿಲ್ಲ, ತೋರಿಸಲಿಕ್ಕೆ ಬೂಟಾಟ್ಕಿ ಇಲ್ಲ. ಅಂದಮ್ಯಾಲೆ ಇಷ್ಟೇ ಸೈ, ಇವರ ಹಣೇಬಾರ. ಯಾರು ಕೈಬಿಟ್ರೂನೂ ಆತ ಒಬ್ಬಾತ ಹಿಡಿದರೆ ಸಾಕು ....ಆತನ ದರ್ಶನಾನೂ ಇಲ್ಲಧಾಗೇ ಮಾಡಿಟ್ರು........" ಸುಬ್ಬಕ್ಕನ ಗಂಟಲು ಬಿಗಿದು ಬಂದಿತು. ಒಲೆಯ ಮುಂದೆ ಕುಳಿತು ಮುಳುಮುಳು ಅತ್ತು ತಲೆ ಮೇಲೆತ್ತಿದಾಗ ಹಿಂದೆಯೇ ರಾಮಮೂರ್ತಾಚಾರ್ಯರು ನಿಂತಿದ್ದರು. ಅವಳ ಅಳುವಿಗೆ ಪುಟ ದೊರೆತಂತಾಗಿ ದುಃಖ ಇಮ್ಮಡಿಯಾಯಿತು.

"ಕಣ್ಣೀರು ಸುರಿಸಲಿಕ್ಕೆ ಈಗೇನು ಆಗೇದೆ ಧಡ್ಡಿ—ನಾಡ ಧಡ್ಡಿ" ಎಂದು ಸಮಾಧಾನ ಹೇಳುತ್ತ ಕನ್ನಡಕವನ್ನು ತೆಗೆದು ಪೆಟ್ಟಿಗೆಯಲ್ಲಿಕ್ಕಿದರು.

"ಮೊದಲು ಬಾಣಂತೀ ಪಥ್ಯ ಮುಗಿಸು. ಬಿಸಿಲು ಆಗಲೇ ನೆತ್ತಿಗೆ ಬಂದದೆ. ಮಾಡೋ ಕೆಲಸಗಳು ನೂರೆಂಟು ಇಟಗೊಂಡು ಅತುಗೋತ ಕೂತ್ರೆ ಹ್ಯಾಗೆ ಅಂತೀನಿ."

ಹೊಳೆಯಂತೆ ಮೇಲ್ವಪ್ಪಿ ಬರುತ್ತಿದ್ದ ದುಃಖವನ್ನು ಅಡ್ಡ ತಡೆಯಲು ಸುಬ್ಬಕ್ಕನಿಗೆ ಆಗಲಿಲ್ಲ. ಬದಿ ಓಣಿಯಲ್ಲಿದ್ದ ಗುಡಿಯಲ್ಲಿಯೇ ಶ್ರೀಗಳವರ ಬಿಡಾರ. ನಗಾರಿ ಜಾಂಗಟೆಗಳು ಅವಳ ಕಿವಿಯಲ್ಲಿ ಧ್ವನಿಗೈದು ಮೇಲಿಂದ ಮೇಲೆ ಮೂಲದೇವರ ನೆನಪು ಮಾಡಿಕೊಡುತ್ತಿದ್ದವು. ಊರಿಗೆ ಊರೇ ತೀರ್ಥಪ್ರಸಾದವನ್ನು ಪಡೆದು, ಹಳೆ ಪಾಪವನ್ನು ತೊಳೆದುಕೊಂಡು ಹೊಸ ಪುಣ್ಯ ಸಾಧನೆ ಮಾಡಿಕೊಳ್ಳುತ್ತಿದ್ದಾಗ, ತಾವು ಮೂವರು ಮಾತ್ರ ಕಾಗೆ ತಿಂದ ಹೊಲೆಯರಂತೆ ಹೊರಗುಳಿದದ್ದಕ್ಕಾಗಿ ಅವಳಿಗೆ ಅತೀವ ದುಃಖವಾಯಿತು. ಎಂಥ ದುರ್ದೈವ ! ಸಾತ್ವಿಕರೂ ಸದಾಚಾರ ಸಂಪನ್ನರೂ ಆದ ತನ್ನ ಗಂಡನಿಗೆ ಈ ದುರ್ದೆಸೆಯೇ ? ಅಳುವನ್ನು ನುಂಗಿಕೊಳ್ಳುವದಂತೂ ಆಗದ ಮಾತಾಯಿತು. ಈಗಾಗಲೇ ನುಂಗಿದ ಅಳುವಿನಿಂದಲೇ ಹೊಟ್ಟೆ ಉಬ್ಬಿದ್ದಿತು. ನಾಗಮ್ಮ ಮಲಗಿದಾಗಷ್ಟೇ ಇವಳಿಗೆ ಅಳಲು ಸವುಡು.; ಅವಳ ಎದುರಿಗಂತೂ ಕಣ್ಣೀರು ತೆಗೆಯುವಂತಿರಲಿಲ್ಲ. ಸುಬ್ಬಕ್ಕನ ಕಣ್ಣಿಂದ ಪಳಪಳ ಕಂಬನಿ ಉದುರಿದಾಗ ನಾಗಮ್ಮ ಒಳಗೆ ಬಂದಿದ್ದಳು. ತಲೆ ಎತ್ತಿ ಸುಬ್ಬಕ್ಕ ಮಾತ್ರ ನೋಡಿರಲಿಲ್ಲ.

"ನಿನ್ನ ಮಗ ಮಲಗ್ಯಾನೇನವ್ವ ನಾಗಮ್ಮ ?" ಎಂದು ಕೊಂಚ ಗಟ್ಟಿಯಾಗಿದೆಯೇ ಕೇಳಿ ರಾಮಮೂರ್ತಾಚಾರ್ಯರು ಸುಬ್ಬಕ್ಕನ ಲಕ್ಷ್ಯ ಇತ್ತ ಸೆಳೆದರು.

"ಇಲ್ಲ. ಬೆರಳು ಚೀಪಿಗೋತ ಅಡ್ತಿದ್ದಾನೆ" ಎಂದು ನುಡಿದು ನಾಗಮ್ಮ ಅಳುತ್ತ ಅಡಿಗೆಮನೆಯಲ್ಲೇ ನಿಂತಳು.

ನಾಗಮ್ಮನ ಕಣ್ತಪ್ಪಿಸಿ ನುಂಗಿಕೊಳ್ಳುವಷ್ಟು ಕೊಂಚವೇ ಇರಲಿಲ್ಲ, ಇಂದು ಸುಬ್ಬಕ್ಕನ ಮನದ ವೇದನೆ. ಮೇಲಿಂದ ಮೇಲೆ ಕಣ್ಣೊರಸಿ ಕೊಂಡರೂ ಸೆಲೆಯಂತೆ ಹೃದಯದಿಂದ ಹೊರಸೂಸುತ್ತಿದ್ದಿತು ಅವಳ ಕಂಬನಿ. ಅವಳು ಇಂದು ಹೊಲತಿಯಾಗಿದ್ದಳು. ಶ್ರೀರಾಮ ದೇವರಿಗೆ ಬೇಡದವಳಾಗಿ ಉಳಿದಿದ್ದಳು. ಶೀಲವಂತರ ಆಚಾರ್ಯರ ಮಗಳಾಗಿ ಹುಟ್ಟಿ, ಉತ್ತಮ ಬ್ರಾಹ್ಮಣಿಕೆಯಲ್ಲಿ ಬೆಳೆದು, ವ್ಯಾಸರಂತಹ ಸದಾಚಾರ ಸಂಪನ್ನರನ್ನು ಅಷ್ಟವರ್ಷದಲ್ಲಿಯೇ ಕೈಹಿಡಿದು, ಉತ್ತಮ ವೈದಿಕಳಾಗಿ ಬೆಳೆದವಳು ಅವಳು. ಅಂತಹವಳಿಗೆ ಇಂದು ಮೂಲ ರಾಮದೇವರೇ ಎರವಾಗಿದ್ದರು. ಇನ್ನು ಜೀವನದಲ್ಲಿ ಉಳಿದುದಾದರೂ ಏನು ? ಬಾಳಿದರೆ ಮಾತ್ರ ಬರುವುದೇನು ? ದೇವರ ಸಾಕ್ಷಾತ್ ಏಜಂಟರಂತಿರುವ ಶ್ರೀಗಳವರು ತನ್ನೂರಿಗೆ ಬಂದರೂ ತನಗೆ ಮುದ್ರಾಧಾರಣೆ ಇಲ್ಲ ! ಕಡೆಗೆ ತೀರ್ಥಪ್ರಸಾದಕ್ಕೂ ಅರ್ಹತೆ ಇಲ್ಲ ! ದರ್ಶನವಾದರೂ ಬೇಡವೇ ?

"ನನ್ನ ತಲೀ ತಗೀತಾರೇನೋ ನೋಡೇ ಬಿಡ್ತೀನಿ ಹಾಗಾದರೆ. ನಾಗೂನ್ನ ಕರಕೊಂಡು ಕೂಸಿನ್ನೂ ಬಗಲಾಗ ಹಕ್ಕೊಂದು ಹೋಗಿ ಆ ಸ್ವಾಮಿಗಳ ಮುಂದೆ ನಿಂದ್ರತೀನಿ" ತನ್ನ ಸ್ವಭಾವಸಿದ್ಧವಾದ ಹಟಮಾರಿತನವನ್ನು ಹೊರಗೆಡವಿದಳು ಸುಬ್ಬಕ್ಕ.

"ಬ್ಯಾಡ ಅಂದಲ್ಲೆ ಹೋಗಿ ಬುದ್ಧಿಗೇಡಿ ಆಗಬಾರದು ಹುಚ್ಚೀ. ಅಲ್ಲೇನದೆ ಅಂಥಾದ್ದು ಅಂತೀನಿ ?"

"ಹಾಗಂದ್ರೇನಂಬೊ ಮಾತು ? ಆ ವಜ್ರದ ಮಂಟಪ, ಭಂಗಾರದ ಕವಚಗಳೂ, ಆ ಮುತ್ತಿನ ಕಿರೀಟ ನೋಡಲಿಕ್ಕೆ ಎರಡು ಕಣ್ಣು ಸಾಲವು, ಎರಡು ಕಣ್ಣು."

"ವಜ್ರಗಳು ನೋಡ್ತಿಯಾ, ಸರಿ. ಆ ವಜ್ರದ ಕಲ್ಲಿಗೇನು ದರಿದ್ರ— ಹೈದರಾಬಾದಿನ ನವಾಬನ ಹತ್ತಿರ ಉಪ್ಪಿನಕಾಯಿ ಹಾಕೋ ಅಷ್ಟು ಅವೆ."

"ಏನಂದ್ರೆ ಏನು ಬಿಡ್ರಿ, ಮುಖ್ಯ "ರಾಮದೇವ್ರನ್ನ ನೋಡೋ ಲಭ್ಯಾ ನನಗಿಲ್ಲ. ಪಾಪಿಷ್ಠಿ ನಾನು............" ಮುಂದೆ ಮಾತುಗಳು ಹೊರಡಲಿಲ್ಲ.

ಕಾದು ನಿಂತ ಗಂಗೆ ಸುಬ್ಬಕ್ಕನ ಕಣ್ಣಲ್ಲಿ ಕೂಡಲೆ ಪ್ರಸನ್ನಳಾದಳು. ಕಂಬನಿ ಗಲ್ಲಕ್ಕೆ ಇಳಿಯಿತು. ಇವಳ ಮುಗ್ಧತೆಯನ್ನು ಕಂಡು ರಾಮಮೂರ್ತಾ ಚಾರ್ಯರಿಗೆ ಕೆಡುಕೆನಿಸಿತು. ಸನಿಯ ಬಂದು ಮೃದುವಾಗಿ ಸುಬ್ಬಕ್ಕನ ಮುಂಗೈ ಹಿಡಿದು ರಮಿಸುವ ಮಾತಿನಲ್ಲಿ ಹೇಳಿದರು.

"ಏಳು, ಸ್ವಲ್ಪ ಏಳು, ನನ್ನ ಮಾತು ಕೇಳಿ. ನಿನಗೆ ಇಲ್ಲೇ ರಾಮ ದೇವರ ದರ್ಶನ ಮಾಡಿಸ್ತೀನಿ. ಈಗಿಂದೀಗಲೇ ಮಾಡಸ್ತೀನಿ, ಆತಿಲ್ಲೊ. ಅಂಗೈಯಾಗ ಬೆಣ್ಣೆ ಹಿಡಕೊಂಡು ತುಪ್ಪಕ್ಕೆ ಓಡಾಡಬಾರದು. ಏಳು ಮತ್ತೆ, ನಿನಗೆ ದರ್ಶನ ಮಾಡಸ್ತೀನಿ."

ಏನೂ ಅರ್ಥವಾಗದೆ ಸುಬ್ಬಕ್ಕ ಅರೆಮನಸ್ಸಿನಿಂದ ಜುಲುಮೆಗೆ ಎದ್ದಳು.

"ಕೈ ಬಿಡ್ರಿ, ನಾನೆಲ್ಲ ಬರ್ತೀನಿ. ಎಲ್ಲಿಗೆ ಹೊರಡಂತೀರಿ ನೀವು ಈಗ ?"

"ದೇವರು ಇದ್ದಲ್ಲಿಗೇ. ಎಲ್ಲಾ ಕಡೆಗೂ ಆತನೇ ಇದ್ದಾನೆ ಅಂದ್ರೆ ನಿನಗೆ ತಿಳೀಲಿಕ್ಕೆ ಕಷ್ಟ ಆದೀತು. ಆತ ಇರೋ ಒಂದು ಜಾಗಾನೆ ಪ್ರತ್ಯಕ್ಷ ತೋರಿಸ್ತೀನಿ ಬಾ. ಬರೀ ಜಾಗಾ ಯಾಕೆ, ಆತನನ್ನೇ ತೋರಿಸ್ತೀನಿ, ಆತಿಲ್ಲೊ ?"

ಕೈ ಹಿಡಿದು ಆ ಹಿರಿ ದಂಪತಿಗಳು ಹೊಸ್ತಿಲನ್ನು ದಾಟಿ ಯಾತ್ರೆಗೆ ಬಂದಂತೆ ನಡುಮನೆಗೆ ಬಂದರು. ರಾಮಮೂರ್ತಾಚಾರ್ಯರು ಹಟಾತ್ತಾಗಿ ನಿಂತುಬಿಟ್ಟರು.

ಹೊಲಸೊಂದು ಹರುಕು ಸೀರೆಯ ಮೇಲೆ ನಾಗೂನ ಮಗು ಆಡುತ್ತ ಮಲಗಿದ್ದಿತು. ಎಡಗಾಲನ್ನು ಕೈಯಿಂದೆಳೆದು ಕಾಲ ಹೆಬ್ಬೆರಳನ್ನು ಬಾಯಿಗೆ ಸೇರಿಸಿ ಅಮೃತವನ್ನು ಸೇವಿಸುತ್ತಿದ್ದಿತು. ಅದರ ಸೆಣಸಾಟ ನೆಗೆದಾಟಗಳು, ಕೈಕಾಲುಗಳಿಂದ ಗಾಳಿಯನ್ನು ಒದೆಯುವ ಅದರ ಅನಂತದಾಟವೂ ಹೊರ ಚಿಮ್ಮುತ್ತಿದ್ದ ಅದರ ಓಜಸ್ಸನ್ನು ಒಡೆದು ತೋರುತ್ತಿದ್ದವು. ವಿಶ್ವಪ್ರೇಮ ಅದರ ಕಂಗಳಲ್ಲಿ ತುಂಬಿ ಮೇಲೆ ತೇಲುತ್ತಿದ್ದಿತು. ಅದರ ಹಾಲುಗಲ್ಲ ಗಳಲ್ಲಿಯೆ ವಿಶ್ವದ ಪೋಷಣೆ ಏನೋ ಎನ್ನುವಂತೆ ಕಾಣುತ್ತಿದ್ದಿತು. ಅತಿ ಶುಭ್ರವಾದ ಅದರ ಅಂಗಾಲುಗಳು ಮುದ್ದಿಕ್ಕುವಂತಿದ್ದವು. ಆ ಪುಟ್ಟ ಕೈಯಿಂದ ಮುಷ್ಟಿಮಾಡಿ ಗಾಳಿಯನ್ನು ಗುದ್ದುತ್ತಿದ್ದಾಗ ಆ ದಿವ್ಯ ದೃಶ್ಯ

ಶ್ರೀರಾಮ ಬಿಲ್ಲು ಬಾಗಿಸಿದಂತೆ ಭಾಸವಾಯಿತು. ಮುಂದೆ ನಿಂತು ಎವೆ ಇಕ್ಕದೆ ನೋಡುತ್ತಿದ್ದ ಆಚಾರ್ಯರ ಕಡೆ ಒಂದು ಬಾರಿ ತನ್ನ ದೃಷ್ಟಿಯನ್ನು ಬೀರಿ ಆ ಮಗು ಬೊಚ್ಚು ಬಾಯನ್ನು ತೋರಿ ನಕ್ಕಿತು. ರಾಮಮೂರ್ತಾಚಾರ್ಯರಿಗೆ ಇನ್ನು ತಡೆಯಲಾಗಲಿಲ್ಲ, ಆನಂದಬಾಷ್ಪಗಳು !

"ಏನು ?" ಎಂದು ದಿಗಿಲಿನಿಂದ ಕೇಳಿ ರಾಮಮೂರ್ತಾಚಾರ್ಯರ ಮುಖ ನೋಡಿದಳು ಸುಬ್ಬಕ್ಕ. ಆಚಾರ್ಯರ ಅಂತರ್ಧ್ಯಾನದ ಸುಳುವು ಹತ್ತಿದಂತಿದ್ದಿತು, ಅವಳ ದನಿಯಲ್ಲಿ.

"ಅಲ್ಲಿ ನೋಡು, ನಿನ್ನ ಮೂಲರಾಮದೇವರು ! ಸಾಕ್ಷಾತ್ ಬ್ರಹ್ಮ ಪೂಜಿಸಿದ್ದು ಇದು." ಹೆಂಡತಿಯನ್ನು ಕೈಹಿಡಿದು ಮುಂದೆ ಕರೆದು ತೋರಿದರು. ಒಳಬಾಗಿಲಲ್ಲಿ ನಿಂತ ನಾಗಮ್ಮ ತನ್ಮಯಳಾಗಿ ನೋಡುತ್ತಿದ್ದಳು.

ಹಿಂದೆ ಪ್ರಭಾವಳಿಯಂತೆ ಹಾಸಿದ ಆ ಸೀರೆಯ ಹೊಲಸು ಹರುಕು ತುಂಡೇ ವಜ್ರಮಂಟಪ ! ಅಷ್ಟೇ ಅದರ ಬೆಲೆ ಆತ್ಮದ ದೃಷ್ಟಿಯಲ್ಲಿ. ಅದರ ತಲೆಯ ಮೇಲಿರುವ ಇಡೀ ಆಕಾಶವೇ ಅದರ ಮುತ್ತಿನ ಕಿರೀಟ. ಹೊಳಪಿನ ಮೈಯೇ ಅದರ ಚಿನ್ನದ ಕವಚ. ಅದು ಬೀರುವ ನಗು, ಆ ವಿಶ್ವಪ್ರೇಮದ ನಿಧಿಯ ನಗುವೇ ಪರಮಾತ್ಮನ ನಿಜಸ್ವರೂಪದರ್ಶನ ! ಆ ನಗುವಿನಲ್ಲಿ ಆದರ್ಶಪ್ರೇಮವಿದೆ. ಅದೇ ಜೀವನದ ತತ್ವ. ಅದೇ ಸತ್ಯ. ಅದನ್ನರಿತು ಅನುಸರಿಸುವ ಮುಮುಕ್ಷು ಜೀವಿಗೆ ಪುನರ್ಜನ್ಮವಿಲ್ಲ. ಇದನ್ನೇ ಮರೆತು ಇನ್ನೇನೆಲ್ಲಕ್ಕಾಗಿ ಹಂಬಲಿಸುವದು ಇಲ್ಲದ ಕರೀ ಬೆಕ್ಕಿಗಾಗಿ ಕತ್ತಲಲ್ಲಿ ಕುರುಡ ಹುಡುಕಾಡಿದಂತೆಯೇ ಸರಿ !

" ನೋಡು ನಿನ್ನ ರಾಮನನ್ನು " ಎಂದು ರಾಮಮೂರ್ತಾಚಾರ್ಯರು ಬೆರಳು ಮಾಡಿ ತೋರಿಸುತ್ತಿದ್ದಾಗ ಮಗುವಿನ ಮುಖದ ಸುತ್ತಲೊಂದು ಹಾಲಬೆಳಕು ಹರಿಯಿತು. ಕಂಬನಿಯಿಂದ ತುಂಬಿದ ಆಚಾರ್ಯರ ಕಂಗಳು ಮುಸುಕಾದವು. ಕಣ್ಣೊರಸಿಕೊಂಡು ಕೆಳಗೆ ಕುಳಿತು, ಅದರ ಬಟ್ಟೆಯನ್ನು ಬಿಸುಟಿ ಮಗುವನ್ನು ಕೈಯಲ್ಲಿ ಎತ್ತಿಕೊಂಡು ತೊಡೆಯ ಮೇಲೆ ಮಲಗಿಸಿಕೊಂಡರು. ಅದನ್ನು ಆಡಿಸಿ ಆಡಿಸಿ ಆನಂದದ ಅನಂತದಾಟದಲ್ಲಿ ಮೈಮರೆತರು. ಗಂಟೆಗಳು ಉರುಳಿದವು. ಸುಬ್ಬಕ್ಕನ ಬಾಯಿಗೆ ಬೀಗ ಬಿದ್ದಿತು. ಅವಧೂತನಂತಿದ್ದ ತನ್ನ ಪತಿಯ ಆತ್ಮಾನಂದವನ್ನು ನೋಡುತ್ತ ಗಲ್ಲಕ್ಕೆ

ಕೈ ಕೊಟ್ಟು ಒಂಟಿಗಾಲಿನ ಮೇಲೆಯೇ ನಿಂತಿದ್ದಳು. [illegible] ನಾಗಮ್ಮ ಬಂದು ನೋಡಿದಾಗ ಮಗುವೇ ಆಚಾರ್ಯರನ್ನು ಆಡಿಸುತ್ತಿದ್ದಿತು.

ಅಂದು ರಾತ್ರಿ. ಎರಡನೆಯ ಮತ್ತು ಮೂರನೆಯ ಯಾಮಗಳ ಸಂಧಿ ಸಮಯ. ಹಗಲಿನ ಗಜಿಬಿಜಿ ಇಲ್ಲ. ಎಲ್ಲವೂ ನಿಶ್ಶಬ್ದ, ನೀರವ. ಚಂದ್ರನಿಂದ ಉದ್ಭವಿಸಿದಂತಿದ್ದ ತಂಪು ಗಾಳಿ ಹಿತವಾಗಿ ಬೀಸುತ್ತಿತ್ತು, ಒಳಗೂ ಹೊರಗೂ. ಹೊರಸಿನ ಕಾಲಬದಿಯಲ್ಲಿ ಚಾಪೆಯೊಂದರ ಮೇಲೆ ಮಲಗಿದ್ದ ಸುಬ್ಬಕ್ಕ ಗಾಢನಿದ್ರೆಯ ಆಳದಲ್ಲಿ ಇಳಿದಿದ್ದಳು. ಕೊಂಚ ದೂರದಲ್ಲಿ ರಾಮಮೂರ್ತಾಚಾರ್ಯರು ಮಲಗಿದ್ದರು.

ಇದ್ದಕ್ಕಿದ್ದಂತೆ ನಾಗಮ್ಮ ಒಮ್ಮೆಲೆ "ಅತ್ತಿಗೀ, ಅತ್ತಿಗೀ" ಎಂದು ಕೂಗಿದಳು. ಅತ್ತ ಕಣ್ಣಿಗೆ ನಿದ್ರೆ ಹೆಚ್ಚು. ಮಲಗಿದ ಅತ್ತಿಗೆ ಅಷ್ಟು ಸುಲಭವಾಗಿ ಏಳುವಂತಿರಲಿಲ್ಲ. "ಏ ಅತ್ತಿಗೀ, ಅತ್ತಿಗೀ, ಬಹಳ ಮರನಿದ್ದೆವ್ವ ತಾಯಿ ನಿಂದೂನು" ಎಂದು ಮೈಮೇಲೆ ಕೈಯಿಕ್ಕಿ ಅಲುಗಾಡಿಸಿದಳು. ಸುಬ್ಬಕ್ಕ ಎದ್ದವಳೆ ಕಾತರದಿಂದ "ಏನೇ ನಾಗು, ಏನಾತು ಮತ್ತೆ?" ಎಂದು ಕೇಳುತ್ತ ನಿದ್ರೆಯ ಮಬ್ಬಿನಲ್ಲಿದ್ದ ಕಣ್ಣನ್ನು ಬೆರಳುಗಳಿಂದ ಉಜ್ಜಿಕೊಂಡಳು.

"ಏನೂ ಇಲ್ಲಾ, ಸ್ವಲ್ಪ ದೀಪಾ ಚಾಚಿ ಬಾ ಇಲ್ಲೆ" ನಾಗಮ್ಮನಿಗೆ ನಿದ್ರೆ ಪೂರ್ಣವಾಗಿ ಹಾರಿದ್ದಿತು. ಕುಳಿತಲ್ಲಿಯೇ ಕೈ ಸವರಾಡಿದಳು.

"ಯಾಕೇ ನಾಗೂ, ಹೆದರಿಗಿದರಿದೇನು ಮತ್ತೆ? ಏನಾಯಿತೆ ನಮ್ಮವ್ವ? ಸುಡುಗಾಡು ಸುಟ್ಟ ಕೆಟ್ಟ ಕನಸುಗಳೇನಾರೆ ಬಿದ್ವೇನು?" ಇನ್ನೇನೇನನ್ನೋ ವಟಗುಟ್ಟುತ್ತ ಗೋಡೆಗಿದ್ದ ಗುಳಿಗೆ ದೀಪವನ್ನು ದೊಡ್ಡದು ಮಾಡಿ, ಎಡಗೈಲಿ ಹಿಡಿದು ಹತ್ತಿರ ಬಂದಳು.

"ಇಲ್ಲವ್ವ, ಕನಸಿಲ್ಲ ಗಿನಸಿಲ್ಲ. ಎಂತ ಛಲೋತ್ನಾಗಿ ಮಾತಾಡಿದರು ಘಂಟೀ ಹೊಡಥಾಗೆ. ಕನಸು ಯಾಕಾದೀತು. ಕನಸಲ್ಲ ಪನಸಲ್ಲ—"

"ಯಾರು ಮಾತಾಡಿದರೇ. ಹೀಗ್ಯಾಕೆ ಮಾಡ್ತೀದಿ? ಅವರೂನೂ ಗೊರಕಿ ಹೊಡೀತಿದ್ದಾರೆ."

"ಅಣ್ಣಾ ಅಲ್ಲೇ ಮಾತಾಡಿದ್ದು. ಆಚಾರ್ರು ಬಂದಿದ್ರಲ್ಲ, ಇದೀಗ ಹೋದರು...."

" ಇನ್ಯಾವ ಆಚಾರನ್ನ ಶರ್ತೀಯೇ ನಾಗು ? ಹೀಗ್ಯಾಕೆ ಮಾಡ್ತೀ ಇವತ್ತು ?"

ಇವರ ಮಾತುಗಳಿಂದ ರಾಮಮೂರ್ತಾಚಾರ್ಯರಿಗೂ ಕನಸು ಒಡೆಯಿತು.

ಇವರ ಮಾತುಗಳಿಂದ ರಾಮಮೂರ್ತಾಚಾರ್ಯರಿಗೂ ಎಚ್ಚರ ವಾಯಿತು. ಮಲಗಿದಲ್ಲಿಯೇ ಇವರ ಸಂಭಾಷಣೆಗೆ ಕಿವಿಗೊಟ್ಟರು.

"ನಾನ್ಯಾಕೆ ಸುಳ್ಳಾಡಲೀ ಅತ್ತಿಗಿ ? ಹ್ಯಾಗೆ ಮಾತಾಡಿದರೂ ಅಂತೀದಿ ? ಅದೇನು ಕಳೇನೇ ನಮ್ಮವ್ವ ಆ ಮುದುಕರ ಮಾರೀ ಮ್ಯಾಲೆ! ಏನು ವರ್ಚಸ್ಸು ಅಂದಿ ! ಒಳೆ ಲಟ್ಟ ಇದ್ರವ್ವಾ, ಆ ಗೆಣಸಿನಂಥ ನಾಮಾ ಅಂಗಾರ ಅಕ್ಷತೀನೂ ಹಚಿಗೊಂಡು...."

ಸುಳ್ಳೆನ್ನಲು ಸುಬ್ಬಕ್ಕನ ಮನಸ್ಸು ಒಪ್ಪಲಿಲ್ಲ. ನಿಜವೆಂದು ನಂಬಲೂ ಕಷ್ಟವಾಗಿತ್ತು.

"ಹಾಕಿದ ಬಾಗಿಲು ಹಾಕಿಧಾಗೇ ಅದೆ, ಲಾಲಂಡಿಗಿ ಸಹ ನಾನೇ ಎಳದು ಬಂದೀನಿ. ಹ್ಯಾಗೆ ಬಂದಿದ್ದಾರು ಅಂತೀನಿ. ಯಾರು ಬಲ್ರವ್ವ ಆತನ ಮಾಯ ? ಏನು ಮಾತಾಡಿದರು ಅದನಾರ ಹೇಳೆ ನಾಗೂ."

"ಅದೇನೇನೋ ಹೇಳಿದರವ್ವ ತಾಯಿ, ನನಗೇನು ನೆನಪೇ ಸುಡು ಗಾಡು. ತೀರ್ಥ ಕೊಟ್ಟು ಕೈಯಾಗೆ ಹುವ್ವು ಹಾಕಿದರು. ನಾನೇನೊ ಅನುಮಾನ ಮಾಡಿಧಾಗಾತೂ. ಮುಡುಕೋ ಅದನ್ನ ಅಂತ ಗದರಿಸಿ ಬಿಟ್ರವ್ವ. ಆಗ ನಾನೂ ಏನೋ ಅಂದ್ನೇ....ಹೌದು ಹೌದು, ಪರಿಮಳಾ ಚಾರು ಬ್ಯಾಡ ಅಂದರಲ್ರೀ ತಾತ ಅಂದೆ. ಅದೇನು ಸಿಟ್ಟವ್ವ ಅವರದು ! ಹುಬ್ಬುಗಂಟು ಹಾಕಿ "ಅವನ ತಲಿ" ಅಂದ್ರು ಅವರು. ಸುಮ್ಮನೆ ಮುಡು ಕೊಂಡ್ನೆವ್ವ ನಾನು. ಕೈ ಹಿಡಿ ಅಂದು ಮಂತ್ರಾಕ್ಷತಿ ಕೊಟ್ಟು ದುಡುದುಡು ನಡೆದರವ್ವ, ಕೂಸಿನ ತಲೀಮ್ಯಾಲೆ ಕೈ ಇಟ್ಟು. ಈ ಖೋಡಿ ನೋಡೇ ಅತ್ತಿಗಿ, ಅವರ ಮಾರಿ ನೋಡಿ ನೋಡಿ ನಕ್ಕಿರೋದು." ಎಂದು ದೀಪವನ್ನು ಸನಿಯ ತಂದು ಹೆಬ್ಬೆರಳನ್ನು ಬಾಯಲ್ಲಿಕ್ಕಿಕೊಂಡೇ ನಿದ್ರಿಸುತ್ತಿದ್ದ ಮಗು ವನ್ನು ನೋಡಿದಳು.

"ಎದ್ದೀತು ಬಿಡು ಪಾಪ ! ಮಲಗಲಿ. ನಿಮ್ಮಣ್ಣನ್ನೂ ಇಷ್ಟು ಎಬ್ಬಿಸಿ ಹೇಳ್ಯಾರೆ ಹೇಳೇ ನಾಗೂ, ಅವರೂ ಕೇಳಲಿ. ಏನ್ರೀ" ಎಂದು ಸುಬ್ಬಕ್ಕ ಕೂಗಿದಳು.

"ಎದ್ದೀನಿ" ಎಂದು ಹಿಂದೆಯೇ ಉತ್ತರವಿತ್ತರು ರಾಮಮೂರ್ತಾ ಚಾರ್ಯರು.

"ಕೇಳಿದಿರೇನು ! ಏನು ಇಚಿತ್ರ ಆದಲ್ರೀ ಈಕೀ ಕನಸು ?"

"ಮತ್ತೆ ಕನಸು ಅಂತೀಯಲ್ಲೆ ಅತ್ತಿಗಿ" ಎಂದು ಆದೊಂದು ಬಗೆಯ ವಾಗತ್ಯದಿಂದ ಆಕ್ಷೇಪಿಸಿದಳು ನಾಗಮ್ಮ.

"ಯಾರೋ ಆಚಾರ್ರು ಬಂದು ಫಲಮಂತ್ರಾಕ್ಷತಿ ಕೊಟ್ರೊ ಅಂತಾಳೆ. ಕನಸು ಬಿದ್ದಿಲ್ಲ ಅಂತಾಳೆ. ಏನಾರೆ ಸ್ವಪ್ನಗಿಪ್ನ ಆಗಿದ್ದೀತೇನು ಅಂತೀನಿ...."

ರಾಮಮೂರ್ತಾಚಾರ್ಯರು ನಡುವೆ ಬಾಯಿ ಹಾಕಿ ನಾಗಮ್ಮನಿಗಾದ ದಿವ್ಯದರ್ಶನದ ಅರ್ಥವನ್ನು ವಿಶದೀಕರಿಸಿದರು.

"ಇದು ಗೊತ್ತಾಗಲಿಲ್ಲೇನೇ ನಿನಗೆ ? ಕರದಲ್ಲಿಗೆ ಬರುವ ಅಂತ ಇದ್ದೇ ಆದಲ್ಲ ಅವರ ಖ್ಯಾತಿ. ಶ್ರೀಗಳವರೇ ಬಂದು ತೀರ್ಥ ಕೊಟ್ಟು, ಕೈಯಾಗೆ ಹುವ್ವ ಹಾಕಿ ಹೋಗ್ಯಾರೆ ಆಕೀಗೆ. ರಾಮದೇವರ ಪೂಜೀಗೆ ಬಂದಾರ ವರು. ಕೇಳಿದೆಲ್ಲ, ಕೂಸಿನ ತಲಿ ಮ್ಯಾಲೆ ಕೈ ಇಟ್ರು ಅಂತ."

ಬೆಳಗಾಗುವದೊಂದೇ ತಡ, ವಿವಿಧ ರೀತಿಯ ವಾರ್ತೆಗಳು ಊರ ಲ್ಲೆಲ್ಲ ಹಬ್ಬಿಬಿಟ್ಟವು. ವೃಂದಾವನಸ್ಥರಾದ ಸ್ವಾಮಿಗಳು ಸ್ವಪ್ನದಲ್ಲಿ ಬಂದು ಸಕೇಶಿಗೆ ಫಲಮಂತ್ರಾಕ್ಷತೆಯನ್ನು ಕೊಟ್ಟರೆಂದೂ, ಬೆಳಿಗ್ಗೆ ನೋಡಿದಾಗ ಸೆರಗಿನ ಗಂಟಿನಲ್ಲಿ ಉತ್ತತ್ತಿ ಮಂತ್ರಾಕ್ಷತೆ ಇದ್ದುವೆಂತಲೂ ಎಲ್ಲೆಲ್ಲಿಯೂ ಗುಜುಗುಜು ನಡೆಯಿತು. ನಾಗಮ್ಮನ ಮಗು ಶ್ರೀಗಳವರೊಡನೆ ಒಂದು ತಾಸು ಸಂಸ್ಕೃತದಲ್ಲಿಯೇ ಸಂಭಾಷಣೆ ಮಾಡಿತೆಂದು ಒಬ್ಬರ ಮುಂದೊ ಬ್ಬರು ಅಚ್ಚರಿಯಿಂದ ಹೇಳಿಕೊಂಡರು. ಸಕೇಶಿಗೆ ದರ್ಶನ ಕೊಟ್ಟ ಮೇಲೆ ಸ್ವಾಮಿಗಳ ತಪಸ್ಸು ಕ್ಷೀಣವಾಯಿತೆಂದು ಹಲವರು ಗುಟ್ಟಾಗಿ ದೂರಿ ಕೊಂಡರು. ಪರಿಮಳಾಚಾರ್ಯರ ಜುಟ್ಟಿನಲ್ಲಿ ನಿಂತಿದ್ದ ಹಲವೇ ಅಕ್ಕಿಯ ಕಾಳುಗಳು ಕಪ್ಪಾಗಿಬಿಟ್ಟಿವೆಯೆಂದು ಇನ್ನೊಂದು ವದಂತಿಯೂ ಊರಲ್ಲಿ ಹಬ್ಬಿತು.

# ೧೮. ಗಾಂಧೀಟೋಪಿ

ಒಂದು ಸಾವಿರ ಒಂಬತ್ತನೂರ ನಲವತ್ತೇಳರ ಆಗಸ್ಟ್. ಕಪಿಮುಷ್ಟಿಯಲ್ಲಿ ಬ್ರಿಟಿಶರು ಹಿಡಿದಿದ್ದ ಭಾರತ ಕೈಯನ್ನು ಬಲವಾಗಿ ಕಡಿಯಿತು. ಸಾಲದುದಕ್ಕೆ ಅತ್ತ ಇತ್ತಲಿಂದ ಲತ್ತೆಗಳ ಭಯವೂ ಬೆನ್ನುಹತ್ತಿತು ಆಳರಸರಿಗೆ. ಮೂರು ನೂರು ವರ್ಷಗಳ ಋಣಾನುಬಂಧ ಅಂತೂ ಕಡೆಗೊಮ್ಮೆ ಕೊನೆಯಾಗಲೇಬೇಕಾಯಿತು. ಆದರೆ ಬ್ರಿಟಿಷರ ಈ ಜಗಳವಲ್ಲಿ ಜಾಣ್ಮೆಯಿದೆ. ಮಮತೆಯಿಂದಲೇ ನಿಷವನ್ನುಣಿಸುವ ಕೈಚಳಕವಿದೆ. ಬ್ರಿಟಿಷನೆಂದೂ ತಪ್ಪು ಮಾಡಲಾರನೆಂಬುದು ಜಗತ್ತಿಗೇ ತಿಳಿದ ಸತ್ಯ. ಅವನು ಗೆಳೆಯನನ್ನು ಕೊಂದರೆ ಅದು ಧ್ಯೇಯಕ್ಕಾಗಿ, ಆಪ್ತರನ್ನು ವಂಚಿಸಿದರೆ ಅದು ವ್ಯವಹಾರಕ್ಕಾಗಿ, ನಂಬಿದವನ ಎದೆಗೆ ಗುದ್ದಿದರೆ ಅದು ಅವನ ಉದ್ಧಾರಕ್ಕಾಗಿ ! ಮುಂಗೈವರೆಗೂ ಬಂದಾಗಲೆಲ್ಲ ನೆಕ್ಕಿ ನೋಡಿದರು. ಕಟ್ಟಕಡೆಗೆ ಮೊಣಕೈಗೇ ಬಂದಿತು. ಬಹುಮೇಲೆ ನಿಂತಿದ್ದ ಬ್ರಿಟಿಷರು ಅಖಂಡ ಹಿಂದೂಸ್ತಾನವನ್ನು ಧುಪ್ಪೆಂದು ಕೆಳಗೆಸೆದು ದಾರಿ ಬಿಟ್ಟರು. ಬಿದ್ದ ಪೆಟ್ಟಿಗೇ ಎರಡು ತುಂಡುಗಳಾದವು. ಪಾಕಿಸ್ತಾನದ ಅವತಾರವಾಯಿತು. ಅಮ್ಮನ ಜಾತ್ರೆಯಾಯಿತು. ನರಕುರಿಗಳ ಆಹುತಿ ಅಲ್ಲೇ ಇಲ್ಲೇ ಕೂಡ ಹೊಟ್ಟೆ ತುಂಬುವಷ್ಟು ಆಯಿತು. ಮೂಗಿನವರೆಗೂ ಮೆದ್ದ ಮಾರೆಮ್ಮ ಢರ್ರೆಂದು ತೇಗಿದಳು. 'ನೀನು ಮಾತ್ರ ಸಾಕೆನಬೇಡ ತಾಯಿ, ನೀನು ಹಸಿದಾಗಲೆಲ್ಲ ಹೀಗೆಯೇ ಒದಗಿಸುತ್ತೇವೆ. ಹುಸಿಯಲ್ಲ, ನಿನ್ನಾಣೆ' ಎಂಬ ಭರವಸೆಯೂ ದೊರೆಯಿತು, ದೇಶದ ಮಾರೆಮ್ಮಗಳಿಗೆ. ಅಂತೂ ಕಡೆಗೊಮ್ಮೆ ರಾಷ್ಟ್ರಧ್ವಜ, ಹೆಮ್ಮೆಯ ತ್ರಿವರ್ಣ ಧ್ವಜ ಕೆಂಪು ಕೋಟೆಯ ಮೇಲೆ ಹಾರಿತು. ಮಮತೆಯ ಮುಖಂಡರನ್ನು ವರ್ಷಾವಧಿ ಕತ್ತಲ ಕಾರಾಗೃಹದಲ್ಲಿಕ್ಕಿಸಿದ ಅದೇ ಪತಾಕೆ, ಶಾಲೆಯ ಚಿಕ್ಕಮಕ್ಕಳ ತಲೆಬುರುಡೆಯನ್ನೊಡೆಸಿದ ಅದೇ ಪತಾಕೆ, ಸೆರಗು ಕಟ್ಟಿ ತಕಲಿ ಹಿಡಿದು ನಿಂತ ಶೂರ ನಾರಿಯರನ್ನು ಲಾಠಿ ಅಶ್ರುವಾಯುಗಳಿಗೆ ಬಲಿ ಕೊಟ್ಟ ಅದೇ ಪತಾಕೆ, ಕೆಂಪು ಟೊಪ್ಪಿಗೆಯಲ್ಲಿ ಇಕ್ಕಿದ ಕೂಡಲೆ ಗರ್ರೆಂದು ತಿರುಗುವ ತಲೆಗಳುಳ್ಳ ಪೋಲೀಸ ಡಾಕೂಗಳ ಕಾಲಡಿಯಲ್ಲಿ ಮುರಿದು ಬೀಳುತ್ತಿದ್ದ ಅದೇ ಪತಾಕೆ ದಿಲ್ಲಿಯ ಕೆಂಪು

ಕೋಟೆಯ ಮೇಲೆ ! ಮುಗಿಲೆತ್ತರ ನಿಂತ ಅರಮನೆಗಳ ಮೇಲೆ, ಮುರುಕು ಗುಡಿಸಲುಗಳ ಮೇಲೆ, ಕಾರುಗಳ ಮೇಲೆ, ಆಡುವ ಮಕ್ಕಳ ಅಂಗಿಯ ಮೇಲೆ, ದಾಸಕೂಟದ ಬಂಟರಾದ ಸರಕಾರೀ ನೌಕರರ ತಲೆಯ ಮೇಲೂ ಹಾರಿತು ಹದಿನೈದನೆಯ ರಾತ್ರಿ ! ಗಗನದ ತಾರೆಗಳು ಭೂಮಿಗಿಳಿದು ಬಂದವು. ಇಲ್ಲದಿದ್ದಲ್ಲಿ ಬರೀ ವಿದ್ಯುತ್ ದೀಪಗಳಿಗೆ ಅಂತಹ ಪ್ರಕಾಶ ಎಲ್ಲಿಯದು ? ಹೊರಗಣ ಪ್ರಕಾಶ ಅಂತಿರಲಿ, ಎಲ್ಲರ ಮನದಲ್ಲಿ ಮೂಡಿದ ಒಳಬೆಳಕು ಬರೀ ಭಾರತವನ್ನಷ್ಟೇ ಏಕೆ, ಇಡೀ ಜಗತ್ತನ್ನೇ ಬೆಳಗಿತು. ಮಕ್ಕಳು ಮಿಠಾಯಿ ತಿಂದರು, ಹಿರಿಯರು ಸ್ವಾತಂತ್ರ್ಯದ ಹಬ್ಬದಲ್ಲಿ ಹರುಷಿತ ರಾದರು. ಉಮೇಶ ಊರ ಪಾರ್ಕಿನ ಮುಂದೆ ನಿಂತು ಬಣ್ಣಬಣ್ಣದ ದೀಪಮಾಲೆಯನ್ನು ಬೆರಗಾಗಿ ನೋಡಿದ. ಆಕಾಶವಾಣಿಯ ಬಾಯಿಂದ ರಾಷ್ಟ್ರಗೀತೆಯನ್ನು ಕೇಳುತ್ತಿದ್ದಾಗ, ಊರಿಗೆ ಊರೇ ಮದುವೆಯ ಮನೆ ಯಂತೆ ದಿಮಿದಿಮಿಸುತ್ತಿದ್ದಾಗ, ಎಲ್ಲರ ಮನಗಳಲ್ಲಿಯೂ ಸ್ವಾತಂತ್ರ್ಯ ಸ್ವರ್ಗದ ಬಾಗಿಲು ತೆರೆದು ನಿಂತಿದ್ದಾಗ, ಜೈಜೈಕಾರಗಳು ಗಗನದ ಆ ಬದಿ ಪ್ರತಿಧ್ವನಿಗೈಯುತ್ತಿದ್ದಾಗ, ಮಕ್ಕಳು ಮುದುಕರನ್ನು ಸ್ವಾತಂತ್ರ್ಯದ ಗಾಳಿ ಕುಣಿಸುತ್ತಿದ್ದಾಗ ಉಮೇಶನ ಕಣ್ಣಿಂದ ನಾಲ್ಕು ಹನಿಗಳು ತೊಟಕಿಕ್ಕಿದವು. ಬದಿಯಲ್ಲಿಯೇ ನಿಂತಿದ್ದ ರಘುರಾಮನಿಗೆ ಇದು ಬಹು ವಾಗತ್ಯವೆನಿಸಿತು.

" ಇದೇನೋ ಉಮೇಶಾ, ಎಲ್ಲರು ನಗುವಾಗ ಅಳುತ್ತೀ ? " ಎಂದು ಆಕ್ಷೇಪಿಸಿ ತನ್ನ ತಲೆಯ ಮೇಲಿದ್ದ ಬಿಳೀ ಟೊಪ್ಪಿಗೆಯನ್ನು ಹಿಂದೆ ಮುಂದೆ ಸರಿಸಿದ ರಘುರಾಮ.

ಕಣ್ಣೊರಸಿಕೊಳ್ಳುವ ಸ್ಥಿತಿಯಲ್ಲಿರಲಿಲ್ಲ ಉಮೇಶನ ಕದಡಿದ ಮನಸ್ಸು. ರಘುರಾಮನಂತಹ ಬಟ್ಟೆಯ ಮುಖಂಡರಿಗೆಲ್ಲ ಉತ್ತರವನ್ನು ಹೇಳಲು ಹಾತೊರೆಯಲಿಲ್ಲ. ತನ್ನ ತಲೆಯ ಮೇಲಿದ್ದುದರ ಅರ್ಥವೇ ರಘುರಾಮನಿ ಗಾಗಿಲ್ಲ ಎಂದು ಮಾತ್ರ ವಿಷಾದವಾಯಿತು ಉಮೇಶನಿಗೆ.

" ಅದು ಏನು ? " ಅವನ ಟೊಪ್ಪಿಗೆಗೆ ಬೆರಳು ಮಾಡಿ ಕೆಣಕಿದಂತೆ ಕೇಳಿದ.

" ಏಕೆ ? ಗಾಂಧೀ ಟೋಪಿ. "

" ಟೊಪ್ಪಿಗೆಯೇನೋ ಇಲ್ಲಿಯೇ ಇದೆ, ನಿನ್ನ ತಲೆಯ ಮೇಲೆ. ಆದರೆ ಎಲ್ಲಿದ್ದಾರೆ ಈಗ ಅದರ ಗಾಂಧಿ? ಸ್ವತಂತ್ರ ಭಾರತದ ಬ್ರಹ್ಮ!" ಈ ಮಾತನ್ನಾಡುವಾಗ ಉಮೇಶನ ಗಂಟಲು ಬಿಗಿದು ಬಂದಿತು.

ತಿಪ್ಪೇರಾ ನೌಖಾಲಿಯಲ್ಲಿ! ಕತ್ತಲ ಗುಡಿಸಲಲ್ಲಿ, ಕಟುಕರ ಕತ್ತಿಯ ಬುಡದಲ್ಲಿ, ಜಾತೀಯ ಕರಾಳ ಕ್ರೀಡಾಂಗಣದಲ್ಲಿ, ಜಾತಿಭೂತಗಳ ಪಾಣಿ ಪತ್ತಿನಲ್ಲಿ, ಸೇಡಿನ ಹೆಡೆಯ ಬುಡದಲ್ಲಿ, ಸಾವಿನ ದವಡೆಯಲ್ಲಿ. ಕರ್ಮ ಸನ್ಯಾಸಿಗೆ ಉಮೇಶ ಮನದಲ್ಲಿಯೇ ವಂದಿಸಿದ. ಆ ಚಿತ್ರ ಮಸಕಾಗಲು ಅದು ಅವನ ನೀರುಗಣ್ಣು ಮುಂದಿರಲಿಲ್ಲ, ಪಕ್ವವಾದ ಹೃದಯದಲ್ಲಿದ್ದಿತು.

ಕಂಬನಿಯಿಂದ ದೃಷ್ಟಿ ಮಸಕಾದಂತೆಲ್ಲ ಮನದಲ್ಲಿಯ ಸೃಷ್ಟಿ ಇನ್ನೂ ಹೆಚ್ಚೆಚ್ಚು ಸ್ಫುಟವಾಯಿತು. ವಿರಳವಾಗಿ ಕಾಣಹತ್ತಿತು. ಮುರಿದ ಗುಡಿಸಲ ಮುಂದೆ, ಹರಿದ ಹೊರಸಿನ ಮೇಲೆ, ಬರಿಮೈಯ ಗಾಂಧಿ ಸತ್ಪುರುಷನ ಸನಿಯದಲ್ಲಿ ಸುರಾವರ್ದಿ. ರಘುಪತಿ ರಾಘವ ರಾಜಾರಾಂ!

ಉಮೇಶ ಮನೆಗೆ ಬಂದಾಗ ಹೊರಬಾಗಿಲಲ್ಲಿಯೇ ಸುಸ್ವಾಗತ ದೊರೆಯಿತು. " ಘಾಂದೀಕೊ ರ್‍ಜ್ಯೊ " ಎಂದು ಕೂಗಿ, ಅಂಗಿಗೆ ಚುಚ್ಚಿಕೊಂಡಿದ್ದ ಚಿಕ್ಕ ತ್ರಿವರ್ಣಧ್ವಜವನ್ನು ಎದೆ ಸೆಟಿಸಿ ತೋರಿದ ಚಿರಂಜೀವ ರಾಘವೇಂದ್ರನನ್ನು ಅವನ ಬಹು ದೊಡ್ಡ ಬಿಳೀ ಟೊಪ್ಪಿಗೆಯ ಸಹಿತ ಎತ್ತಿಗೊಂಡು ಉಮೇಶ ಮುತ್ತಿಕ್ಕಿದ. ಮಗನ ಎಳೆ ಕೈಗಳು ತನ್ನ ಮುಖಕ್ಕೆ ಸೋಕಿದಾಗ, ಅವನ ಕಾಲ ಮಣ್ಣು ತನ್ನ ಉಡುಪಿಗೆ ಹತ್ತಿದಾಗ, ಆ ಮಗುವಿನ ಉಸಿರು ತನ್ನ ಮುಖಕ್ಕೆ ಹಿತವಾಗಿ ಬಡಿದಾಗ, ಅವನ ರಾಷ್ಟ್ರಧ್ವಜದ ಗುಂಡುಸೂಜಿ ತನ್ನ ಎದೆಗೆ ಚುಚ್ಚಿದಾಗ ಉಮೇಶನೊಂದು ಬೇರೆ ಪ್ರಪಂಚದಲ್ಲಿಯೇ ಇದ್ದ. ನಾನೂ ಒಮ್ಮೆ ಹೀಗೆಯೇ ಇದ್ದಿರಬಹುದೇ ಎನ್ನಿಸಿತು ಉಮೇಶನಿಗೆ. ಇದೇ ಬಾಲ್ಯಾವಸ್ಥೆಯಲ್ಲಿಯೇ ನಾನು ಅನಂತವಾಗಿ ಉಳಿಯಲಿಲ್ಲೇಕೆ ಎಂದು ಪೇಚಾಟವಾಯಿತು. ಉಮೇಶ ಸಿಹಿ ಕಹಿ ಕನಸುಗಳನ್ನು ಕಾಣುತ್ತ ಮೈಮರೆತು ನಿಂತಿರುವಾಗ ಕೆಳಜಾರಿ ರಾಘವೇಂದ್ರ ತಲೆಯನ್ನು ಬಾಗಿಸಿ ಕುದುರೆಮಾಡಿ ಚಿಕ್ಕ ಕಾಲುಗಳಿಂದ ಹೊಟ್ಟೆಗೆ ಒದೆಯುತ್ತ ಸವಾರಿಮಾಡಿದ. ಮಗನನ್ನು ಬೆನ್ನ ಮೇಲೆ ಹೊತ್ತು ಅಂಬೆಗಾಲಿಕ್ಕಿ ಕುದುರೆಯಂತೆ ಒಳಬಂದ ಉಮೇಶನನ್ನು ಕಂಡು ಖೊಳ್ಳೆಂದು ನಕ್ಕುಬಿಟ್ಟಳು ಕಾವೇರಿ. ರಾಘವೇಂದ್ರ

ರಾಯರಿಗೆ ಅವಮಾನವಾಯಿತು! ಕೂಡಲೆ ಕೆಳಗೆ ಧುಮಿಕಿ ಕಾಲು ತಿಕ್ಕಿ ಅಳಲು ಸುರುಮಾಡಿದ. ನಾಗಮ್ಮ ಎತ್ತಿಕೊಂಡು ಒಳಗೆ ಹೊರಟಳು.

"ಅಪ್ಪ ಹೇಗಿದ್ದಾರೆ ಕಾವೇರಿ?"

"ಬೆಂಕಿಯಾಗಿದ್ದಾರೆ."

"ಯಾರ ಮೇಲೆ?"

"ಅದೇ ತಿಳಿಯುವಂತಿಲ್ಲ."

ಉಮೇಶ ನೇರವಾಗಿ ರಾಯರ ಕೋಣೆಗೆ ಸಾಗಿದ. ಬಾಗಿಲಲ್ಲಿಯೇ ನಿಂತುನೋಡಿದ, ತಂದೆಗೆ ನಿದ್ರಾಭಂಗವಾಗಕೂಡದೆಂದು. ರಾವಸಾಹೇಬರು ಮಲಗಿದಲ್ಲಿಯೇ ಏನೇನನ್ನೋ ವಟಗುಟ್ಟುತ್ತಿದ್ದರು. ಗೋಡೆಯ ಕಡೆ ಮುಖವಿಟ್ಟು, ಬಾಗಿಲಲ್ಲಿಯೇ ನಿಂತು ಆಲಿಸಿದ.

"ಇವರ ಶ್ರಾದ್ಧ! ಸ್ವರಾಜ್ಯವಂತೆ ಸ್ವರಾಜ್ಯ, ಇವರ ಮೂತಿಗೆ!" ಮಧ್ಯೆ ಮಧ್ಯೆ ಹಲ್ಲು ಕಡಿಯುತ್ತಿದ್ದರು. "ಇವರ ಹಣೇಬಾರದಾಗ ಅದಂತೇನು ರಾಜ್ಯ ಆಳೋದು? ಜೇಲ್ನಾಗೆ ಮಲಗಿ ಗೀತಾ ಓದಿಧಾಗಲ್ಲ, ರಾಜ್ಯ ಆಳೋದು ಅಂದ್ರೆ!

ಅಪ್ಪಾ ಎಂದು ಮೆತ್ತಗೆ ಕೂಗಿ ಒಳಬಂದ ಉಮೇಶ. ರಾಯರು ಇತ್ತ ಹೊರಳಲಿಲ್ಲ. ಹೊರಳಲು ಬರುವಂತೆಯೂ ಇರಲಿಲ್ಲ. ಅವರ ರಾವಸಾಹೇಬಗಿರಿಗೆ ಬಂದಿದ್ದಂತೆ ಅವರಿಗೂ ಬಂದಿದ್ದಿತು ಪಾರ್ಶ್ವವಾಯು ರೋಗ. ಸುತ್ತಿ ಬಂದು ಉಮೇಶ ಅವರ ತಲೆದಿಂಬಿನ ಬಳಿ ಕುಳಿತು ಹಣೆ ಮುಟ್ಟಿ ನೋಡಿದ. ತಲೆ ಸಿಡಿಯುವಷ್ಟು ಬಿಸಿ ಇದ್ದಿತು.

"ಆಯಿತೇನಪ್ಪಾ ನಿಮ್ಮ ಸ್ವರಾಜ್ಯವೈಭವ!" ಎನ್ನುತ್ತ ಸತ್ತ ಮೀಸೆ ಕಡಿದು ದುರುದುರು ಉಮೇಶನ ಮುಖ ನೋಡಿದರು ರಂಗರಾಯರು.

"ನಿಜವಾಗಿ ವೈಭವ ಅಪ್ಪಾ ಅದು...." ಮುಂದೇನೇನ್ನೊ ಹೇಳಲು ಹವಣಿಸುತ್ತಿದ್ದ ಉಮೇಶ. ನಡುವೇ ಬಾಯಿಹಾಕಿದರು ರಾವಸಾಹೇಬರು.

"ನೋಡೋಣ ತಡಿ, ಅವರ ವೈಭವ ಈಗೇನು ಕಂಡೀ. ಈ ಹಚಡದ ಅಂಗೀ ಎಬಡರು ರಾಜ್ಯ ಆಳ್ತಾರೇನೋ ರಾಜ್ಯಾನ? ಒಂದು ದರಿದ್ರ ಇಲೆಕ್ಷನ್‌ದಾಗೇ ಛತ್ರೀಲೆ ಬಡದಾಡೋ ಈ ಮಂಗಣ್ಣಗಳ ಕೈಯಾಗ ತುಪಾಕಿ ಕೊಟ್ರೆ ಇನ್ನೇನದೆ? ಜನ್ರೂ ಕೊಳು ಕೊಳು, ಬಟ್ಟೆ ಬಟ್ಟೆ ಅಂತ

ಬಾಯಿಬಾಯಿ ಬಿಡೋಹಾಗೆ ಆದಾಗ ನೀನೇ ಅಂತೀದಿ, ನಮ್ಮಪ್ಪ ಏನ ಹೇಳಿದ್ದ ಅಂತ."

"ಅಲ್ಲಪಾ...."

"ಅಲ್ಲಪಾ ಇಲ್ಲ ಗಿಲ್ಲಪಾ ಇಲ್ಲ. ಆ ಇಂಗ್ಲೀಷ ಧೊರಿಗಳು ಬ್ರೆಡ್ಡು ತಿಂದ ಚಾಕು ಚಮಕಾ ತೊಳೀಲಿಕ್ಕೆ ಲಾಯಖು ನಿಮ್ಮ ದೇಶಭಕ್ತರು. ಅತು, ನಾನು ಇನ್ನಿರಬಾರದಪ್ಪಾ ಉಮೇಶ. ದೇವ್ರು ನನ್ನ ಕಣ್ಣುಮುಚ್ಚಬೇಕು ನಮ್ಮಂಥ ಮರ್ಯಾದಸ್ಥರನ್ನ."

ತಂದೆಯ ಈ ಅಪಸ್ಮಾರದ ಮಾತುಗಳನ್ನು ಕೇಳಿ ಉಮೇಶನಿಗೆ ಬಹು ಖೇದವೆನಿಸಿತು. ಸಾಯುವ ಮುನ್ನ ಕಡೆಗೊಂದೇ ಬಾರಿಯಾದರೂ 'ನಾರಾಯಣ' ಎಂದು, ಬಾಯಿ ಜಾರಿ ಅಗ್ಗದಲ್ಲಿ ಸ್ವರ್ಗವನ್ನು ಗಿಟ್ಟಿಸಿದ ಅಜಮಿಳನಂತೆ, ಇಂದಾದರೂ ಕಾಂಗ್ರೆಸ್ಸಿಗೆ ತನ್ನ ತಂದೆ ಸೈ ಎಂದಾರು ಎಂದು ಆಶಿಸಿದ್ದ ಉಮೇಶ. ತಲೆಯೆತ್ತಿ ತಂದೆಯ ಮುಖ ನೋಡಿದ. ಔರಂಗಜೇಬನ ಅವತಾರ !

"ಅಯ್ಯ, ಕಾಲೇ, ಕಾಲೇ, ಹೋಯಿತು ಕಾಲು" ಎಂದು ಗಟ್ಟಿಯಾಗಿ ಚೀರಿ ರಂಗರಾಯರು ಕಸವಿಸಿಪಡಹತ್ತಿದರು. ಕೂಡಲೇ ಒಳಬಂದ ಕಾವೇರಿ ರಾಯರ ಹೊದಿಕೆಯನ್ನು ಸರಿಪಡಿಸಿ ಕಾಲ ಮೇಲೆ ಕೈಯಾಡಿಸುತ್ತ ಕಾಲ ಬದಿ ನಿಂತಳು. ಆಡುತ್ತಾಡುತ್ತ ರಾಘವೇಂದ್ರ ಒಳಬಂದ. ಅವನನ್ನು ಕಂಡ ಕೂಡಲೆ ರಾಯರ ಕೋಪವಂತೂ ಮೇರೆ ತಪ್ಪಿತು.

"ಬೆಂಕಿಯಲ್ಲಿ ಹಾಕೋ, ಆ ಟೊಪ್ಪಿಗೆಯನ್ನು" ಎಂದು ಗದರಿಸುತ್ತ ರಾಘವೇಂದ್ರನ ತಲೆಯ ಮೇಲಿದ್ದ ಬಿಳಿ ಟೊಪ್ಪಿಗೆಯನ್ನು ಕಿತ್ತಿ ಬೀಸಿ ಒಗೆದರು.

"ತಾತಾ ಗೋತಾ" ಎಂದು ಬೈದು ಅಳುತ್ತ ರಾಘವೇಂದ್ರ ಒಳನಡೆದ. ಸಮಾಧಾನ ಮಾಡುವ ನೆವದಿಂದ ಉಮೇಶ ಹೊರಬಂದ. ನಾಗಮ್ಮ ಅಡಿಗೆಮನೆಗೆ ಸಾಗಿದಳು. ತಲೆಗೆ ಕೈಯಿಕ್ಕಿ ಉಮೇಶ ಕುರ್ಚಿಯ ಮೇಲೆ

ಇಡೀ ರಾತ್ರಿ ಮನೆಯಲ್ಲಿ ಯಾರಿಗೂ ನಿದ್ರೆ ಇಲ್ಲ. ರಂಗರಾಯರ ಪ್ರಕೃತಿ ಇದ್ದಕ್ಕಿದ್ದಂತೆ ಪೂರ್ತ ಹದಗೆಟ್ಟಿತು. ರಕ್ತದ ಒತ್ತಡ ಬಹು ಹೆಚ್ಚಿತು.

ಕಾಲ ನೋವನ್ನು ತಾಳಲಾರದೆ ರಾಯರು ರಾತ್ರಿಯೆಲ್ಲಾ ಕೂಗಾಡಿದರು. ಅಯ್ಯೋ ಅಮ್ಮಾ ಎಂದು ಚೀರಿ ಬಾಯಿಬಾಯಿ ಬಡಿದುಕೊಂಡರು. ಬೆಳಗಿನ ಜಾವದಲ್ಲಿ ಕೊಂಚ ವಿರಾಮ ದೊರೆಯಿತು.

ಮಾರನೆಯ ಬೆಳಿಗ್ಗೆ ತಡವಾಗಿಯೇ ಕಾವೇರಿ ಕಾಫಿಯನ್ನು ಕೈಲಿ ಹಿಡಿದು ರಾಯರ ಕೋಣೆಗೆ ಬಂದಳು. ಚಿಟ್ಟನೆ ಚೀರಿ ಲೋಟವನ್ನು ಕೈಬಿಟ್ಟಳು. ರಂಗರಾಯರ ಶವ ಮಂಚದಿಂದ ಕೆಳಗುರುಳಿದ್ದಿತು. ಅದಾವಾಗಲೋ ಹೃದಯಕ್ರಿಯೆ ನಿಂತುಹೋಗಿದ್ದಿತು. ಕೆಳಬಿದ್ದು ಕಣ್ಣು ಮುಚ್ಚಿ ದೀರ್ಘನಿದ್ರೆಯಲ್ಲಿದ್ದರು ರಾವಸಾಹೇಬರು.

ಮುಂದಿನ ಕೆಲಸವನ್ನು ಉಮೇಶ ಮುಗಿಸಿದ. ತಂದೆಯನ್ನು ಚಿತೆಯಲ್ಲಿಟ್ಟು ಬರಿಗೈಯಿಂದ ಮನೆಗೆ ಹಿಂದಿರುವಾಗಲೇ ಸಿದ್ಧವಾಗಿದ್ದಳು ವೃದ್ಧ ಬ್ರಿಟ್ನಾಳು! ಸಮಯ ಬಂದಂತೆಲ್ಲ ಕಂಡವರ ಕಾಲ ನೆಕ್ಕುವ ಮಾನವ ಜಾತಿಯಲ್ಲ ಬ್ರಿಟ್ನಾಳದು. ಒಬ್ಬನೇ ಧಣಿ, ಅವನಲ್ಲಿಯೇ ವಿಶ್ವಾಸ ಆ ತೋಳ್ನಾಯಿಗೆ. ರಂಗರಾಯರ ಕೋಣೆಯಲ್ಲಿ ಕುಯ್ಗುಟ್ಟಿ ಅವರ ಹಾಸಿಗೆ ಅರಿವೆಗಳನ್ನು ಮೂಸಿ ಹೊರಬಂದು, ಹಾಸುಬಂಡೆಯ ಮೇಲೆ ಕಾಲ್ಚಾಚಿ ಮಲಗಿಬಿಟ್ಟದ್ದಿತು. ತಂದೆಯ ಚಿತೆಯ ಬಳಿಯಲ್ಲಿಯೇ ಕುಣಿ ತೋಡಿ ನಾಲ್ಕು ಹರಳು ಉಪ್ಪು ಹಾಕಿ, ಬ್ರಿಟ್ನಾಳಿಗೆ ಮಣ್ಣು ಕೊಟ್ಟು, ಅವಳ ಋಣವನ್ನೂ ತೀರಿಸಿ ಹಿಂದಿರುಗಿದ. ವೃದ್ಧ ತಂದೆಯನ್ನೂ ವಿಶ್ವಾಸದ ನಾಯಿಯನ್ನೂ ಪರಲೋಕಕ್ಕೆ ಕಳಿಸಿ, ಕತ್ತನ್ನು ಒಂದು ಬದಿ ಎಸೆದು, ಅರೆಕಣ್ಣು ಮುಚ್ಚಿ ಸಾಯಂಕಾಲ ರಸ್ತೆಯಲ್ಲಿ ಬರುತ್ತಿದ್ದ ಉಮೇಶನನ್ನು ಕಂಡು ಏನೂ ಅರಿಯದ ರಘುರಾಮ 'ಗುಡ್ ಮಾರ್ನಿಂಗ್' ಎಂದಾಗ ಉಮೇಶ ಹಣೆ ಬಡಿದುಕೊಂಡು ಮುಂದೆ ಸಾಗಿದ. ಇದು 'ಮಾರ್ನಿಂಗ್' ಅಲ್ಲ, 'ಗುಡ್' ಅಂತೂ ಅಲ್ಲವೇ ಅಲ್ಲ!

## ೧೯. ಹುಚ್ಚು ನಾಯಿಗಳ ಹಾವಳಿ

ಸಂಧ್ಯಾಕಾಲ. ಸೂರ್ಯದೇವನಿಗೆ ಮುಳುಗುವ ಸಮಯವಿನ್ನೂ ದೂರವಿದೆ. ಆದರೆ ಮೋಡಗಳ ಉಪದ್ರ. ಕತ್ತಲು ಕವಿಯುವ ಮುನ್ನವೇ ಮೋಡದ ನೆಳಲು ಬೆಳಕನ್ನು ನುಂಗುವ ಹೊಂಚು ನಡೆಸಿದೆ. ಕಸವನ್ನೆತ್ತಿ

ತಂದು ಬಿಸುಟುವ ಬಿರುಗಾಳಿ. ತಿರುಗಾಡಲು ಹೊರಟಿದ್ದ ಉಮೇಶ ಜಾಗ್ರತೆಯಾಗಿ ಮನೆಗೆ ಹಿಂದಿರುಗಿದ. ಬಹು ದೂರದಿಂದಲೇ ಕಂಡಿತು ಮನೆಯ ಮುಂದೆ ಮಕ್ಕಳ ಪಾಣೀಪತ್ತು. ಸಮವಯಸ್ಕರಾದ ನಾಲ್ಕಾರು ಹುಡುಗರು ರಸ್ತೆಯಲ್ಲಿ ಕಾದಾಡುತ್ತಿದ್ದರು. ರಾಘವೇಂದ್ರನ ಮುಖ ತಲೆ ಎಲ್ಲಾ ಮಣ್ಣೇ ಮಣ್ಣಾಗಿದ್ದಿತು. ಕೈಯಲ್ಲೊಂದು ಹರಿತವಾದ ಕಲ್ಲನ್ನು ಹಿಡಿದು ಗುರ್ರೆಂದು ಕಾಸೀಮ ನಿಂತಿದ್ದ. ಅವನ ಹುಬ್ಬಿನ ಮೇಲೊಂದು ಗಾಯದಿಂದ ರಕ್ತ ಒಸರುತ್ತಿದ್ದಿತು. ಹಿರಿ ಕಿರಿ ಬಾಲಕರು ಸೇರಿ ಅವನ ಮೇಲೇರಿ ಹೋಗುತ್ತಿದ್ದರು. ಈ ಬಾಲಶೂರರನ್ನು ಕಂಡಾಗ ಉಮೇಶನಿಗೆ ಮೊದಲು ನಗು ಬಂದಿತು. ಗಾಂಧೀ ಗೌತಮರ ಈ ನಾಡಿನಲ್ಲಿ ಈ ಯುದ್ಧದ ರಸ ಎಲ್ಲಿಂದ ಉದ್ಭವಿಸಿತು ಎಂದೆನಿಸಿತು ಉಮೇಶನಿಗೆ. ಇದೆಲ್ಲವೂ ಮಕ್ಕಳಾಟವೆಂದುಕೊಳ್ಳುತ್ತ ಸಮೀಪಿಸಿದನು.

"ಇದೇನೋ ರಾಘವೇಂದ್ರಾ" ಎಂದು ಮಗನ ತಲೆಯ ಮೇಲೆ ಮಮತೆಯಿಂದ ಕೈಯಾಡಿದನು. ತಲೆಯಲ್ಲೊಂದು ಬಂಡಿ ಮಣ್ಣು! "ಯಾರೋ ಹಾಕಿದರು?" ಎಂದು ತಂದೆ ಕೇಳುವದೊಂದೇ ತಡ, ರಾಘವೇಂದ್ರನ ನಟನಕಲಾಪಾಂಡಿತ್ಯದ ಪ್ರದರ್ಶನವೇ ಆಯಿತು. ಕೇಳಿದ ಕೂಡಲೆ ಬಕೀಟುಗಟ್ಟಲೆ ಕಂಬನಿ ಸುರಿಸಬಲ್ಲ ನುರಿತ ತಮಿಳ ಸಿನೇಮಾ ನಟಿಯಂತೆ ಕಣ್ತುಂಬ ನೀರು ತಂದು ಅತ್ತು ಆರ್ಭಟಿಸಿ, ಬೊಗಸೆಯ ತುಂಬ ಹುಡಿ ಮಣ್ಣನ್ನು ಹಿಡಿದು ಕಾಸೀಮನ ಮುಖಕ್ಕೆ ತೂರಿದ. ಹಿಂದೆಯೇ ದೊಡ್ಡ ದನಿ ತೆಗೆದು ತಾನೇ ಅಳಹತ್ತಿದ.

"ನಮ್ಮ ಮಸೀದಿ ಹತ್ತಿರ ಬಾ, ಆಗ ಮಾಡ್ತೀನಿ" ಎಂದು ಕಾಸೀಮ ಮೀಸೆ ತಿರುವಿ ಹೊರಡಲನುವಾದ. ಎಲ್ಲರನ್ನೂ ರಮಿಸಿ ಉಮೇಶ ಹತ್ತಿರ ಕರೆದ. ಕಿಸೆಯಲ್ಲಿದ್ದ ಪೆಪ್ಪರಮೆಂಟನ್ನು ಅವರೆಲ್ಲರಿಗೂ ಕೊಟ್ಟು, ಇನ್ನು ಮನೆಗೆ ನಡಿಯಿರಿ ಎಂದು ಅವರ ಯುದ್ಧವನ್ನು ಅಲ್ಲಿಗೇ ನಿಲ್ಲಿಸಿ, ಮಗನನ್ನು ಎತ್ತಿಕೊಂಡು ಕಟ್ಟೆಯನ್ನೇರಿದ.

"ಇದು ತಪ್ಪಪಾ ರಾಘವೇಂದ್ರಾ, ಹೀಗೆಲ್ಲಾ ಮಾಡಬಾರ್ದು. ಗೆಳೆಯರನ್ನ ಹೊಡಿಬೇಕೇನು, ದಡ್ಡಾ ನಾಡದಡ್ಡಾ" ಎನ್ನುತ್ತ ಅವನ ಬಟ್ಟೆಯ ಮೇಲಿನ ಮಣ್ಣನ್ನು ಜಾಡಿಸಿದ.

ಪೆಪ್ಪರಮೆಂಟ್ ಬಾಯಿಗೆ ಬಿದ್ದ ಕೂಡಲೆ ಅಳು ನಿಲ್ಲಿಸಿ ರಾಘವೇಂದ್ರ ಕೈಲಿದ್ದ ಇನ್ನೊಂದನ್ನೂ ಬಾಯಿಗೆ ಸೇರಿಸುತ್ತ "ಅವನು ಗೆಳೆಯ ಅಲ್ಲಪಾ. ಕಾಸೀಮ ತುರುಕರವ" ಎಂದು ನುಡಿದ.

"ಹಾಗನಬಾರದೋ ಹುಚ್ಚ, ಮುಸ್ಲಿಮ್ ಅನಬೇಕು. ಅವನು ನಿನ್ನ ಗೆಳೆಯ ಅಲ್ಲೇನು?" ಎಂದು ಕೇಳಿದ. ಹಸುಗೂಸಾದ ರಾಘವೇಂದ್ರನ ಉತ್ತರದಿಂದ ಉಮೇಶನಿಗೆ ತತ್ತರಿಸುವಂತಾಯಿತು.

"ತುರುಕರು ರಾಕ್ಷಸರಂತಪಾ."

"ರಾಕ್ಷಸರು! ಯಾರು ಹೇಳಿದರೋ ನಿನಗೆ?"

"ನಮ್ಮ ಸಾಲ್ಯಾಗೆ."

ಮನೆಗೆಲಸದಲ್ಲಿ ತೊಡಗಿದ್ದ ಕಾವೇರಿ ಕಣ್ಣಿಗೆ ಬಿದ್ದಳು. ಅವಳ ಕೈಲಿದ್ದ ಬೆಣ್ಣೆಯ ಪಾತ್ರೆಯನ್ನು ಕಂಡಕೂಡಲೆ ಅಪ್ಪನ ಕೈಯಿಂದ ನುಸುಳಿ ರಾಘವೇಂದ್ರ ಒಳಗೆ ಓಡಿದ. ಮಗನು ಆಡಿದ ಮಾತನ್ನೇ ಮೆಲಕುಹಾಕುತ್ತ ಉಮೇಶ ಕುರ್ಚಿಯ ಮೇಲೆ ಕಾಲು ಚಾಚಿ ಕುಳಿತ.

ನಮ್ಮ ಸಾಲ್ಯಾಗೆ! ನಾಳಿನಿಂದ ರಾಘವೇಂದ್ರನಿಗೆ ಶಾಲೆಯಂತೂ ಬೇಡ. ನಿರಕ್ಷರಿಯಾಗಿಯಾದರೂ ಮಾನವನಾಗಿ ಬಾಳಲಿ ನಾಲ್ಕು ದಿನ. ಇದೇ ಏನು ಇಂದು ನಮ್ಮ ಆ ಮಕ್ಕಳು ಶಾಲೆಯಲ್ಲಿ ಕಲಿಯುವದು? ಇದು ಸರಸ್ವತಿಯ ಪೀಠವೇ? ನಮ್ಮ ಮಕ್ಕಳ ಮನದ ಶಿಕ್ಷಣ ಬೆಳವಣಿಗೆಗಳು ಮಾರೆಮ್ಮನ ಪೂಜಾರಿಗಳ ಕೈಲಿ ಉಳಿದರೆ ಮುಂದಿನ ಪೀಳಿಗೆಯು, ನಮ್ಮ ರಾಷ್ಟ್ರದ, ಇಡೀ ಜಗತ್ತಿನ ಗತಿ ಏನು? ಈ ಶಿಕ್ಷಕರು ವರ ಕೊಡುವ ವಶಿಷ್ಠರಾಗಲಿಲ್ಲ—ಶಾಪ ಕೊಡುವ ವಿಶ್ವಾಮಿತ್ರರಾಗಿದ್ದಾರೆ. ರಾಘವೇಂದ್ರನಂತಹನೊಬ್ಬನಲ್ಲವೆ ಮುಂದೆ ನಮ್ಮ ರಾಷ್ಟ್ರದ ನಾಯಕನಾಗಬೇಕು? ರಾಜ್ಯಸೂತ್ರವನ್ನು ಹಿಡಿದು ಈ ಜಾತ್ಯತೀತ ರಾಷ್ಟ್ರವನ್ನು ಆಳಬೇಕಾದವರಿಗೆ ಇದೇ ಅಲ್ಲವೇ ನಾವು ಕೊಡುತ್ತಿರುವ ಶಿಕ್ಷಣ? ಪ್ರಾಥಮಿಕ ಶಾಲೆ ಎಂದರೆ ಮಾನವತೆಯ ಮೊದಲ ತಳಹದಿ ಎಂಬುದನ್ನು ಯಾರೂ ಅರಿತಂತೆಯೇ ಇಲ್ಲವೆ? ರಾಷ್ಟ್ರನಿರ್ಮಾಪಕರನ್ನು, ಪ್ರಜಾಪರಿಪಾಲಕರನ್ನು, ಮಕ್ಕಳ ಮನಸ್ಸನ್ನು ಪೋಷಿಸುವ ಹಿರಿಯರ ಹೊಣೆಯನ್ನು ನಾವಿಂದು ಯಾರ ಕೈಲಿ ಕೊಟ್ಟು ಮಲಗಿದ್ದೇವೆ? ಉಮೇಶನ ತುಟಿಗಳು ಕೋಪದಿಂದ

ಅಪರಿದವು. "ತುರುಕರು ರಾಕ್ಷಸರು !" ಎಂದು ಎಳೆಮಕ್ಕಳ ಮನದಲ್ಲಿ ವಿಷಬೀಜ ಬಿತ್ತುವವರು ಉಪಾಧ್ಯಾಯರೇ ? ಕೋಪದ ಬಣ್ಣವೇ ಕೆಂಪು ಎಂಬಂತೆ ಉಮೇಶನ ಮುಖ ಕೆಂಪಡರಿತು. ಚಿಕ್ಕ ಮಕ್ಕಳ ಪಾದಾರ ವಿಂದದಲ್ಲಿ ಈ ಶಿಕ್ಷಕರೇ ಕಲಿತರೆ ಎಷ್ಟು ಒಳಿತಾದೀತು ? ಕಲ್ಮಷವನ್ನು ಕನಸಿನಲ್ಲಿಯೂ ಕಾಣದ ಹಾಲುಗಲ್ಲದ ಹಸುಳೆಗಳನ್ನು ದುಷ್ಟ ಪಾಪಿಷ್ಠಿಗಳ ಮುಷ್ಟಿಯಲ್ಲಿ ಕೊಡುವದೇ ? ರೈಲ್ವೆ ಗೂಡ್ಸ್‌ಡ್ಡಿನಲ್ಲಿ ಮೂಟೆ ಹೊತ್ತು ಬಾಳಲು ಬಾಹುಬಲವಿಲ್ಲೆಂದು ಮಾಸ್ತರರಾಗಿ ಬಂದವರು ಹಲವರು, ಒಕ್ಕಲುತನ ಉದ್ಯೋಗಗಳಲ್ಲಿ ತೊಡಗಿ ಮೈಮುರಿದು ದುಡಿಯಲಾರದೆ ನಿದ್ರಿಸುತ್ತ ಉಣ್ಣಲು ಬಂದ ಸೋಮಾರಿಗಳು ಕೆಲವರು. ಒಟ್ಟಾರೆ ಎಲ್ಲ ವೃತ್ತಿಗಳಿಗೂ ಬೇಡಾದವರ ಬೀಡು ಶಾಲೆಯ ಉಪಾಧ್ಯಾಯರ ಸುಂದರ ವನ. ಅಗ್ಗದ ಆಸೆಗೆ ಮುಗ್ಗು ಜೋಳ ! ಇವರಿಗೆ ಸರಕಾರ ಸಂಸ್ಥೆಗಳು ದಯಪಾಲಿಸಿರುವ ವೇತನವಾದರೂ ಎಷ್ಟು ? ಮಾಸ್ತರರ ಸಂಬಳವನ್ನು ಹೆಚ್ಚಿಸಬೇಕೆಂದು ಕೇಳಿದಾಗಲೆಲ್ಲವೂ ದಯಾಳು ಸರಕಾರ ತಪ್ಪದೆ ವಿದ್ಯಾರ್ಥಿಗಳನ್ನು ಹೆಚ್ಚಿಸಿತು. ರೈಲ್ವೆ ಪೋರ್ಟರನ ಒಂದೇ ವಾರದ ದುಡಿತದ ಅರ್ಧ ಒಬ್ಬ ಶಿಕ್ಷಕನ ಮಾಸಿಕ ವೇತನ. ಅದು ಕೈಗೆ ಬರುವದು ಪ್ರಸಂಗವೆಲ್ಲವೂ ಕುತ್ತಿಗೆಗೆ ಬಂದಮೇಲೆಯೇ. ದೇವರು ಹೇಳಿದರಾದರೂ ದಕ್ಷಿಣೆಗೆ ತಕ್ಕಷ್ಟೇ ಮಂತ್ರ. ಉಮೇಶನಿಗೆ ತನ್ನ ಬಾಲ್ಯದಲ್ಲಾಗಿದ್ದ ಒಂದು ಘಟನೆ ಸ್ಮರಣೆಗೆ ಬಂದಿತು. ಆಗ ತನಗೆ ಆರೇಳು ವರ್ಷ. ರಂಗರಾಯರು— ಆಗಿನ್ನೂ ರಾವಸಾಹೇಬ ರಾಗಿರಲಿಲ್ಲ—ವಡ್ಡರಹಳ್ಳಿ ಜಿಲ್ಲೇದಾರರು. ಬಯಲ ಹನುಮಪ್ಪನ ಗುಡಿಯಲ್ಲಿ ಅಯ್ಯನವರೊಂದಿಗೆ ಶಾಲೆ ಹಾಕಿದ್ದರು. ಉಮೇಶನೂ ಎಲ್ಲ ಮಕ್ಕಳೊಟ್ಟಿಗೆ ಅಲ್ಲಿಗೆ ಹೋಗಿದ್ದ. 'ಎಲ್ಲಾರೂ ಹೋಗಿ ಮಾವಿನಕಾಯಿ ಹರಕೊಂಡು ಬರ್ರಿ' ಎಂದು ಒಂದು ಮಧ್ಯಾಹ್ನ ಅಯ್ಯನವರು ವಾನರ ಸೇನೆಗೆ ಆಜ್ಞೆ ಮಾಡಿ, ಮುಂದಿದ್ದ ಮುರುಕು ಪೆಟ್ಟಿಗೆಯ ಮೇಲೆ ಕಾಲು ಚೆಲ್ಲಿ, ಮೂರು ಕಾಲು ಕುರ್ಚಿಯ ಮೇಲೆ ಒರಗಿ ಗೊರಕೆ ಹೊಡೆದರು. ಮಾವಿನ ಗಿಡವನ್ನೇರಿದ ಉಮೇಶ ಒಂದು ಚೇಳಿರಿಬೆ ಕಚ್ಚಿ, ಕೆಳಗೆ ಬಿದ್ದು ಕೈ ಮುರಿದುಕೊಂಡಿದ್ದ. ಸಿಟ್ಟಿನ ಭರದಲ್ಲಿ ರಂಗರಾಯರು ಬಾರಕೋಲು ಹಿಡಿದು ಉಮೇಶನ ಗುರುದೇವನನ್ನು ಗುಡಿಯ ಸುತ್ತಲೂ ಓಡಾಡಿಸಿ ಹೊಡೆದರು.

ಅದು ಸರಿಯೋ ಅಲ್ಲವೋ, ಇದಂತೂ ರಾಘವೇಂದ್ರನ ಚಂಡಾವುರ್ಕರಿಗೆ ಈ ಗೌರವ ಆಗಲೇಬೇಕು ಎನಿಸಿತು ಉಮೇಶನಿಗೆ. ಇಂತಹ ವಿಷಬೀಜ ವನ್ನು ಬೇರು ಸಹಿತ ಕಿತ್ತುಹಾಕಲೇಬೇಕು.

"ಏನೋ ಉಮೇಶಾ, ಚಹಾ ಕುಡಿಯುವದಿಲ್ಲೇನು ಇವತ್ತು ?" ಕಾವೇರಿಯ ದನಿ ಕೇಳಿದನಂತರವೇ ಉಮೇಶನಿಗೆ ಎಚ್ಚರವಾಯಿತು.

"ಬಂದೆ" ಎಂದನನೇ ಎದ್ದು ನಡುಮನೆಯಲ್ಲಿದ್ದ ಮೇಜಿನ ಮುಂದೆ ಬಂದು ಕುಳಿತ. ಕಿಟ್ಟಲಿನಲ್ಲಿಯ ಚಹ ತಣ್ಣಗಾಗುತ್ತ ಬಂದರೂ ಉಮೇಶನ ಲಕ್ಷ್ಯ ಅತ್ತ ಬೀಳಲಿಲ್ಲ.

ಅಕಸ್ಮಾತ್ತಾಗಿ ಒಳಬಂದ ನಾಗಮ್ಮ "ಹೀಗ್ಯಾಕೆ ಕೂತೀರಿ, ತಗೊಳ್ರಿ ಚಹಾನ. ಒಲೀ ಮ್ಯಾಲೇ ಅದು ಆರಿ ಅಂಗಾರಾಗಿತ್ತು" ಎಂದು ನುಡಿದು ಮುಖ ನೋಡಿದಳು.

"ಕಿಟ್ಟಲಿನಿಂದಲೇ ಕುಡಿಯಬೇಕೇನು ? ಕಪ್ಪು ಬಸಿ ಕೊಡು." ನಾಗಮ್ಮನಿಗೆ ಹಿಡಿಸಲಾರದಷ್ಟು ನಗು ಬಂದಿತು. "ನೆಟ್ಟಗದೆ ನಿಮ್ಮ ಕತಿ. ಮುಂದೆ ಕೂತಾವಲ್ಲ ಕಪ್ಪು ಬಸಿ" ಎಂದಂದು ಅಡಿಗೆ ಮನೆಗೆ ಹೊರಟಳು.

ಕಪ್ಪು ಬಸಿ ಬಹಳ ಹೊತ್ತಿನಿಂದ ಉಮೇಶನ ಮುಂದೇ ಇದ್ದವು. ಅವನ್ನು ನೋಡುತ್ತಲೇ ಇದ್ದ. ಆದರೆ ಅವು ಅವನಿಗೆ ಕಂಡಿರಲಿಲ್ಲ. ಆರಿದ ಚಹವನ್ನು ಕಪ್ಪಿಗೆ ಸುರುವಿ ಬಾಯಿ ಹಚ್ಚಿದ. ಒಂದೇ ಗುಟುಕಿ ನಲ್ಲಿ ಕುಡಿದು ಮುಗಿಸಿದ. ಕಾದ ತಲೆಯಲ್ಲಿ ಮಾತುಗಳು ರೂಪುಗೊಂಡು ಮುಖದಿಂದ ಹೊರಬೀಳುತ್ತಲಿದ್ದವು.

"ವಿಷ, ವಿಷ. ವಿಷಬೀಜವನ್ನು ಕಿತ್ತೊಗೆಯಬೇಕು. ಕೆಟ್ಟ ವಿಷ."

"ಅಷ್ಟು ವಿಷ ಆಗೆದೇನೋ ಉಮೇಶ, ಸಕ್ಕರಿ ತರ್ತೀನಿ ತಡಿ, ಕುಡೀಬ್ಯಾಡ" ಎಂದು ಇದ್ದಲ್ಲಿಂದಲೆ ಕಾವೇರಿ ಕೂಗಿ ಹೇಳಿದಳು. ಸಕ್ಕರಿ ತುಂಬಿದ ಚಮಚೆಯನ್ನು ಕೈಲಿ ಹಿಡಿದು ಮುಂದೆ ಬಂದು ನಿಂತಳು.

"ಇದೇಕೆ ಕಾವೇರಿ ?"

"ಆಗಲೇ ಕುಡಿದೇ ಬಿಟ್ಟೇನು? ವಿಷ ಇದೆ ಅಂದೆಲ್ಲೊ ?"

"ಆಯಿತು ಕೊಡು, ತಂದದ್ದನ್ನು ಯಾಕೆ ವಾಪಸು ಒಯ್ಯುತ್ತಿ. ಕೈಯಲ್ಲಿ ಹಾಕಿಬಿಡು, ತಿನ್ನುತ್ತೇನೆ" ಎಂದು ಉಮೇಶ ಹುಡುಗಾಟಿಕೆಯಿಂದ

ಕೈಯೊಡ್ಡಿದ. ಉಮೇಶನ ಅಂಗೈಯಲ್ಲಿ ಕಾವೇರಿ ಸಕ್ಕರೆಯನ್ನು ಸುರುವಿದಳು. ಬಾಯಿಗೆ ಕೈ ಹೋಯಿತು.

"ಉಮೇಶಾ, ಉಮೇಶಾ! ಅನಾಹುತ, ಅನಾಹುತ!" ಎಂದಾರೋ ಕಂಗಾಲಾಗಿ ಕೂಗುತ್ತ ಒಳನುಗ್ಗಿದರು. ಬಾಚದ ಕ್ರಾಪಿನ, ಅತ್ತ ಕಣ್ಣಿನ ರಘುರಾಮ! ಒಂದೇ ಉಸಿರಿನಲ್ಲಿ ಹೇಳಿ ಕಂಬದಂತೆ ನಿಂತ.

"ಪೂಜ್ಯ ಬಾಪೂಜಿಯನ್ನು ಖೂನಿ ಮಾಡಿದ್ದಾರೆ!"

ರಘುರಾಮ ಉಮೇಶನ ಮುಖ ನೋಡಿದ. ಬಾಯಿ ನೋಡಿದ! ಗಾಂಧಿಯವರ ಕೊಲೆಯಾಗಿದೆ, ಆದರೆ ಉಮೇಶ ಸಕ್ಕರೆ ತಿನ್ನುತ್ತಿದ್ದಾನೆ. ಕಾವೇರಿಯ ಕೈಯಲ್ಲಿ ಚಮಚೆ!

ಇಡೀ ದೇಶವೇ ಹೋ ಎಂದು ಅತ್ತಿತು. ಕಣ್ಣೀರಿನ ಹುಚ್ಚುಹೊಳೆಯೊಂದು ನಾಡಿನ ತುಂಬ ಉಕ್ಕೇರಿ ಹರಿಯಿತು. ತೋಚದ ಜನತೆ ರೊಚ್ಚಿಗೆದ್ದಿತು. ಹುಂಬರು ಸೇಡಿಗಾಗಿ ತೋಳೇರಿಸಿದರು. ಗೂಟ ಬಡಿಗೆಗಳು ಅಹಿಂಸಾಭಕ್ತರ ಕೈಯಲ್ಲಿ ಕುಣಿದಾಡಿದವು. ಆವೇಶದ ಮಾತುಗಳು ಅಳತೆಗೆಟ್ಟು ಬೆಳೆದವು. ನಮ್ಮ ಪೂಜ್ಯರನ್ನು ಕೊಂದವನ ಇಡೀ ಜಾತಿಯನ್ನೇ ನಿರ್ಮೂಲ ಮಾಡಿಬಿಡುತ್ತೇವೆಂದು ಹಲವರು ಹಟತೊಟ್ಟರು. ಅವರೆಲ್ಲರ ತಲೆಯೊಡೆದು ರಕ್ತದ-ಕಾಲುವೆ ಹರಿಸದಿದ್ದರೆ ನಾವು ಗಾಂಧೀ ಟೋಪಿ ಹಾಕಿ ಸ್ವಾರ್ಥಕವೇನು ಎಂದು ಕೆಲವರು ಎದೆ ಎದೆ ಗುದ್ದಿಕೊಂಡರು. ವಿಶ್ವಪ್ರೇಮದ ಪಾಠ ಕಲಿತ ಗಾಂಧೀಮರಿಗಳು, ಈ ಪವಿತ್ರ ಅಹಿಂಸಾಮೂರ್ತಿಗಳು ಬಡಿಗೆ ಕುಡುಗೋಲು ಹಿಡಿದು ಕುಡುಕರಂತೆ ದಂಡೆತ್ತಿದರು. ವಿದ್ಯಾರ್ಥಿಗಳ ಪುಸ್ತಕಗಳು ಸುಟ್ಟವು. ಹೊಲ, ಖಣಗಳಲ್ಲಿ ವೈರಿನ ಹೋಳಿಯಾಯಿತು. ಕಟ್ಟಿದ ಕೊಟ್ಟಿಗೆಯಲ್ಲಿಯೇ ದನಕರುಗಳು ಬೂದಿಯಾದವು. ವೈಯಕ್ತಿಕ ಸೇಡುಗಳಿಗೆ ಕಾರ್ಯರಂಗ ಸುಲಲಿತವಾಯಿತು. ಹಳೆಯ ದ್ವೇಷಾಸೂಯೆಗಳಿಗೆ ಹುಲುಸಾದ ಭೂಮಿ ದೊರೆಯಿತು. ಗಾಂಧೀಜಿಯವರ ಮುಂದಾಳುತನದಲ್ಲಿ ಅಹಿಂಸಾಸೇನೆಯನ್ನು ಸೇರಿ, ಸತ್ಯಾಗ್ರಹದೀಕ್ಷೆಯನ್ನು ಪಡೆದು, ಪೋಲೀಸರ ಲಾಠಿಗಳಿಗೆ ಅಂದು ನಗುತ್ತ ತಲೆಯೊಡ್ಡಿದ ಪವಿತ್ರ ಖಾದೀ ಸಾತ್ವಿಕರು ರಾವಣಾಸುರನ ಅವತಾರವನ್ನು ತಾಳಿ, ಅನ್ಯರ ತಲೆಯಿಂದ ನೆತ್ತರ ಸುರಿಸುವದನ್ನೇ ಗಾಂಧೀ ಪೂಜೆಯೆಂದು ಭಾವಿಸಿ ಕುಣಿದಾಡಿದರು.

ದೇಹದಿಂದ ಪಾರಾಗಿದ್ದ ಗಾಂಧೀಜಿಯವರ ಆತ್ಮ ಮೂಕನಂತೆ ಬಿಕ್ಕಿ ಬಿಕ್ಕಿ ಅತ್ತುದು ಯಾರಿಗೂ ಕೇಳಲಿಲ್ಲ, ಕಾಣಲಿಲ್ಲ. ಅವರ ಜೀವಾತ್ಮ ಕಂಬನಿ ಸುರಿಸಿದುದು ಅವರ ದೇಹಕ್ಕಾದ ನೋವಿಗಾಗಿ ಅಲ್ಲ, ಸಾವಿಗಾಗಿಯೂ ಅಲ್ಲ. ಗೋಡ್ಸೆಯ ಗುಂಡನ್ನೇ ಮುದ್ದಿಕ್ಕುವ ತಪೋನಿಧಿ ಅವರು. ಆದರೆ ತಮ್ಮ ಕೋಲಿಯ ದುರುಪಯೋಗವನ್ನು ಮಾಡಿಕೊಂಡು, ಸುಲಿಗೆ ಸಂಹಾರ ಮುಂತಾದ ಹೇಸಿ ಕಾರ್ಯಗಳನ್ನು ಮಾಡಿ, ಗೀತೆ ತಕಲಿಗಳನ್ನು ಹಿಡಿದ ಕೈಗಳಿಂದಲೇ ಕತ್ತುಗಳನ್ನು ಮುರಿದು, ಧರಿಸಿದ ಪವಿತ್ರ ಖಾದಿಗೆ ರಕ್ತ ಸ್ನಾನ ಮಾಡಿಸಿದವರ ಆತ್ಮದ ಪತನಕ್ಕಾಗಿ ಬಾಪೂಜಿಯವರ ಆತ್ಮ ಹುರುಹುರು ಮರುಗಿತು. ಮೊದಲು ದರೋಡೆ ಮಾಡಿ ಆಮೇಲೆ ಜೇಲು ಕಂಡವರು ದೇಶದ್ರೋಹಿಗಳು, ಮೊದಲು ಜೇಲು ಕಂಡುಬಂದು ಆಮೇಲೆ ದರೋಡೆ ಮಾಡುವವರು ದೇಶಭಕ್ತರು !

ಹಿಂದೊಂದು ಗುಂಪು ಕಟ್ಟಿಕೊಂಡು ಹುಯ್ ಎಂದು ಹೊರಟಿದ್ದ ರಘುರಾಮ. ದೊಡ್ಡ ರಸ್ತೆಗೆ ಬಂದ ಕೂಡಲೆ ಹಿಂದೆಯೆ ಅವನಿಗೆ ನೆನಪಾದುದು ಉಮೇಶ. ಕಾವೇರಿಯ ಮುಖವು ಕಣ್ಮುಂದೆ ಬಂದಿತು. ಅಂದು ಅವಮಾನಿತನಾಗಿ ಕಾವೇರಿಯ ಮನೆಯಿಂದ ತಾನು ಹೊರಬಂದುದು ಎಂದೂ ಮರೆಯಲು ಸಾಧ್ಯವಿರಲಿಲ್ಲ ಅವನಿಗೆ. ‘ ಉಮೇಶಾ ದೇಶಭಕ್ತರ ದೋಷಗಳನ್ನೆಣಿಸುವ ನಿನ್ನ ಧೋರಣೆಯನ್ನು ನಾನು ಚೆನ್ನಾಗಿ ಬಲ್ಲೆ. ಈಗ ಉಳಿಸಿಕೋ ನಿನ್ನ ತಲೆಯನ್ನು ’ ಎಂದು ಮನದಲ್ಲಿಯೇ ಮೀಸೆ ತಿರುವಿ ಹಿಂಬಾಲಿಗರಿಗೆ ಅಪ್ಪಣೆ ಮಾಡಿದ.

“ ಬರ್‍ರಿ, ಇಲ್ಲೊಬ್ಬ ಚಂಡಾಲ ಇದ್ದಾನೆ, ಮಹಾತ್ಮರು ಸತ್ತಾಗ ಸಕ್ಕರಿ ತಿಂದ ಶೂರ ಇವನು ! ”

“ ಯಾರವನು ? ” ಎಂದು ಗುಂಪು ಒಂದೇ ಗಂಟಲಿನಿಂದ ಕೂಗಿತು. ಬಿಳೀ ಟೊಪ್ಪಿಗೆಯವರ ಅಸುರಸೇನೆ ಉಮೇಶನ ಮನೆಯಲ್ಲಿ ನುಗ್ಗಿತು, ಗಾಂಧೀಕೀ ಜೈ ಎಂದು ಘೋಷಿಸುತ್ತ. ಏನು ಗಲಭೆ ಆದೆಂದು ನೋಡಲು ಒಳಗಿನಿಂದ ಉಮೇಶ ಬಂದ. ತಲೆಯ ಮೇಲೆ ಪ್ರಹಾರವಾಯಿತು. ಮೂರ್ಛೆಯಿಂದ ನೆಲಕ್ಕುರುಳಿದ. ಓಡುತ್ತ ಬಂದು ಅಡ್ಡನಿಂತ ಕಾವೇರಿಗೆ ಈ ದೇವಲೋಕದ ದೈತ್ಯರನ್ನು ಕಂಡಾಗ ಎಷ್ಟೂ ಅಂಜಿಕೆಯಾಗಲಿಲ್ಲ. ಉಮೇಶನ

ಎದೆಗೆ ಗುರಿಯಿಟ್ಟ ಕಡೆಯ ಪೆಟ್ಟು ಕಾವೇರಿಯ ಮೊಣಕಾಲಿಗೆ ಮೋಕ್ಷ ಕೊಟ್ಟಿತು. 'ಗಾಂಧೀಕಿ ಜೈ' ಎಂದು ಚೀರುತ್ತ ಮನೆಯಿಂದ ಹೊರ ಬಿದ್ದಿತು ಗಾಂಧಿ ವೇಷಧಾರಿಗಳ ಗ್ಯಾಂಗು. ನಾಗಮ್ಮ ಮೊದಲು ಹೊರ ಬಾಗಿಲನ್ನು ಹಾಕಿ ಬಂದು ಮಾಡಿದಳು. ಈರ್ವರೂ ಸೇರಿ ಉಮೇಶನ ತಲೆಯ ಗಾಯವನ್ನು ತೊಳೆಯುತ್ತ ಕುಳಿತರು. ನೂಲುಮಾಲೆ ಧರಿಸಿ ಗೋಡೆಯಿಂದ ನೇತಾಡುತ್ತಿದ್ದ ಗಾಂಧೀ ತಾತನ ಕಣ್ಣು ತೇವವಾದವು !

## ೨೦. ವಿಮೋಚನೆ

ಬಳ್ಳಾರಿಗೆ ತಲೆಯೊಡೆಯುವಂತಹ ಬಿಸಿಲು ಇಡೀ ವರ್ಷವೂ ಇದೆ. ನೀರಿನ ಕೊರತೆ ಅನುಗಾಲವೂ ಇದೆ. ಕನ್ನಡ ತೆಲುಗಿನ ಜಂಗೀ ಕುಸ್ತಿ ಇದೆ. ರಾತ್ರಿಹೊತ್ತಿನಲ್ಲಿ ದೀಪದ ಅಡಚಣೆ ಇದೆ. ಕನ್ನಡ ಮಕ್ಕಳಿಗೆ ಒತ್ತಾಯದ ತೆಲಗು ಶಾಲೆಗಳಿವೆ. ಜಿಲ್ಲೆಯ ಏಕಮೇವ ಕಾಲೇಜಿಗೆ ಬಾಲ ಗ್ರಹದ ಕಾಟವಿದೆ. ಪ್ಲೇಗು ಮಾರಿಕಾ ರೋಗಗಳಿಗೆ ವರ್ಷವರ್ಷಕ್ಕೂ ಸುಸ್ವಾಗತವಿದೆ. ಇಷ್ಟೆಲ್ಲಾ ಇತ್ತ ದೇವನಿಗೆ ಇನ್ನೂ ತೃಪ್ತಿಯಿಲ್ಲ; ಮೇಲಿಂದ ಮೇಲೆ ಭಾಷಣಕಾರರ ದಾಳಿ ಬೇರೆ !

ಆರು ದಿನಗಳು ಎತ್ತಿನಂತೆ ದುಡಿದು, ವಾರದಲ್ಲೊಂದು ದಿನ ಮಾತ್ರ ಬುಶ್‌ಕೋಟು ಬಿಳೀ ಪ್ಯಾಂಟು ಧರಿಸಿ ನಳಗಳ ಬಳಿ ಸುಳಿದಾಡುವ ಸುಂದರ ಹೋಟೆಲ್ ಮಾಣಿಗಳಿಂದ ಹಿಡಿದು ಊರನ್ನಾಳುವ ದಪ್ಪನ ದಣಿಗಳವರೆಗೂ ಎಲ್ಲರಿಗೂ ಆದಿತ್ಯವಾರವೇ ರಜೆ. ಮ್ಯುನಿಸಿಪಾಲ್ಟಿಗೆ ಮೂಗಿಲ್ಲ! ಊರ ಹೊಲಸಿನ ನಾತದ ಭಯ ಅದಕ್ಕಿಲ್ಲ! ಪುರಜನರಿಗೆ ಅನ್ಯಗತಿ ಇಲ್ಲ. ಸೂಟಿ ದೊರೆತ ಒಂದು ದಿನವಾದರೂ ಹೊರಗಣ ಗಾಳಿ ಬೇಡವೇ ? ಊರಿಗೆ ಊರೇ ಸಾಂಬಮೂರ್ತಿ ಮೈದಾನಕ್ಕೆ ಧಾವಿಸುವದು ಆದಿತ್ಯವಾರಕ್ಕೇ ಗೌರವ. ಬುಡ್ಡಿ ಬ್ರೋಚಿನ ಭೂಪರು, ಘಟನೆಯ ಕರಡನ್ನು ಕಂಠಗತ ಮಾಡಿಕೊಂಡ ಕಲಾಕೋವಿದರು, ಅಲ್ಪ ವಯಸ್ಸಿಗೇ ಗಡ್ಡಬಿಟ್ಟ ಸೊಶ್ಯಾಲಿಸ್ಟರು, ಕನ್ನಡ ಮತ್ತು ತೆಲುಗು ಭಾಷೆಗಳನ್ನು ಒಂದೇ ಉಸಿರಿನಲ್ಲಿ ಆಡ ಬಲ್ಲ ದ್ವಿಭಾಷಾ ಸವ್ಯಸಾಚಿಗಳು, ಬರೀ ಮಾತನಾಡಿಯೇ ಮುಪ್ಪು ತಂದು ಕೊಂಡ ನಿಷ್ಪ್ರಯೋಜಕ ಆದರ್ಶವಾದಿಗಳು, ಸಾಯಲು ಸಿದ್ಧವಿಲ್ಲದ ಪಿಂಚಿನಿ

ದಾರರು, ಆರೆಹೊಟ್ಟೆಯುಂಡರೂ ಇರುಕು ಎತ್ತುಗಳಂತೆ ನೋಡುವ ಸರಕಾರೀ ನೌಕರರು ತಂಡತಂಡವಾಗಿ ಸೇರಿ ಪ್ರತ್ಯೇಕ ಪಂಗಡಗಳಾಗಿ ಕುಳಿತರು. ಜನರೆಲ್ಲರೂ ಮೈಮರೆತು ತಂತಮ್ಮ ಮಾತಿನ ಲಹರಿಯಲ್ಲಿ ಮುಗ್ನರಾಗಿದ್ದರು. ಸಮಯವನ್ನು ಸಾಧಿಸಿ ಕುಳಿತಿದ್ದ ತಂಬೂರಿಚೀಲದ ಅಂಗಿಯವರೊಬ್ಬರು ಇದ್ದಕ್ಕಿದ್ದಂತೆ ಚಟ್ಟನೆ ಧ್ವಜದ ಕಟ್ಟೆಯನ್ನೇರಿ ನಿಂತೇ ಬಿಟ್ಟರು. ಎಲ್ಲರೂ ಅತ್ತ ಕಡೆ ನೋಡಿದರು.

"ಯಾರೋ ಹುಚ್ಚ ಇದ್ದಾನೇಳ್ರಿ ಅವನು" ಎಂದು ಕುಳಿತವರಲ್ಲಿ ಒಬ್ಬರು ನುಡಿದರು.

"ಬಿಸಿಲು ಹ್ಯಾಗಿತ್ತು ನೋಡ್ರೀ; ಹುಚ್ಚು ಹಿಡೀದೇ ಏನು ಮಾಡೀತು ?" ಎಂದಿನ್ನೊಬ್ಬರು ಮೊದಲಿಗರು ಕೊಟ್ಟ ಸೂಚನೆಗೆ ಬೆಂಬಲ ಇತ್ತರು.

ಢಂ, ಢುಂ, ಢಢಂ ಎಂದು ಮೇಲೆ ನಿಂತ ವ್ಯಕ್ತಿ ಭೀಕರ ಭಾಷಣ ವನ್ನು ಬಿಗಿದೇ ಬಿಟ್ಟಿತು. ಕುಳಿತ ಜನರು ಕಂಗಾಲಾಗಿ ಕುಯ್ಯೋ ಮರ್ರೋ ಎಂದರು. ಸತ್ತೆವು ಕೆಟ್ಟೆವು ಎಂದರು. ಅಶ್ರುವಾಯುವನ್ನು ಸಹಿಸುವ ಮನೋ ಬಲವಿದ್ದ ಸಭಿಕರಿಗೆ ಈ ಸ್ವಭಾಷಣಾಭಿಲಾಷಿಗಳ ಉಪನ್ಯಾಸವನ್ನು ಕೇಳಲು ತ್ರಾಣವಿಲ್ಲದಾಯಿತು. ಭಾಷಣಕಾರರ ಪರಿಚಯವಾಯಿತು ಉಮೇಶನಿಗೆ. ದೇ॥ ಭ॥ ರಘುರಾಮು!

ಉತ್ತರಕುಮಾರನೂ ನಾಚುವಂತಿದ್ದಿತು ಆ ಭಾಷಣ. ಬರೀ ಸಿಡಿಲು ಮಿಂಚುಗಳೇ ಬಿದ್ದವು ಅವನ ಬಾಯಿಂದ. ಜನರು ಏನು ಮಾಡಲೂ ತೋಚದೆ ಕುಳಿತು ಕೇಳಿದರು. ಬಳ್ಳಾರಿಯ ಪುರಜನರು ಸಂಪನ್ನರು. ಯಾರು ಏನು ಹೇಳಿದರೂ ಕೇಳುತ್ತಾರೆ, ಕೇಳಿದುದನ್ನು ಹಿಂದೆಯೇ ಮರೆಯುತ್ತಾರೆಂದು ನೆನೆನೆನೆದು ನಕ್ಕ ಉಮೇಶ. ಹಿಂದಿನ ಆದಿತ್ಯವಾರ ಅದೇ ಮೈದಾನದಲ್ಲಿ ಕೋತಿಯಾಡಿಸುವವನನ್ನೂ ನೋಡಿದ್ದರು. ಇನ್ನೊಂದು ಆದಿತ್ಯವಾರ ಅಲ್ಲಿಯೇ ಚೇಳಿನ ಔಷಧಿ ಮಾರುವವನ ಉಪನ್ಯಾಸವನ್ನೂ ಕೇಳಿದ್ದರು. ಈ ಆದಿತ್ಯವಾರ ಏಕೀಕರಣದ ಪಾಳಿ ಬಂದಿದೆಯೆಂದು ತಿಳಿದು ಸುಮ್ಮನೆ ಕುಳಿತು ಕೇಳಿದರು—ಪಾಲಿಗೆ ಬಂದದ್ದು ಪಂಚಾಮೃತ! ರಘುರಾಮುನನ್ನು

ಅಧ್ಯಕ್ಷರು ಅರ್ಧ ಗಂಟೆ ಅಂಗಿ ಹಿಡಿದೆಳೆದು ಕುಳ್ಳಿರಿಸಿದರು. ಅನಂತರ ಇನ್ನಿತರ ಎಂಟು ಜನರು ಜಡಿಮಳೆಯಂತೆ ಜಡಿದರು. ರಾಜೀನಾಮೆ, ಸತ್ಯಾಗ್ರಹ, ನಲವತ್ತೆರಡರ ಪುನರಾವತಾರ, ಹೊಸ ಘಟನೆಗೆ ಅನಾಸ್ಥತೆ, ಅರ್ಧ ನಿಮಿಷದಲ್ಲಿಯೇ ಮೈಸೂರನ್ನು ಉರುಳಿಸುವದು ಮುಂತಾದ ಮೀಸೆ ತಿರುವಿ ಆಡುವ ಶೂರರ ಮಾತುಗಳು ಹೊಳೆಯಾಗಿ ಹರಿದವು. ಊಟದ ಹೊತ್ತಾಯಿತು, ಜನರೂ ಎದ್ದರು. 'ಒಂಬತ್ತರನಂತರ ಹೋಟೆಲಲ್ಲಿ ಅನ್ನ ಇಲ್ಲ' ಎಂದು ಬರೆಯಲ್ಪಟ್ಟ ಚೀಟಿಯೊಂದು ಭಾಷಣಕಾರರ ಮುಂದೆ ಬಂದು ಬಿದ್ದಿತು ಆಕಾಶದಿಂದ. ತಕ್ಷಣವೇ ಒಂದು ಗೊತ್ತುವಳಿ ಕುಯ್ಲಿಗ್ಗಿಟ್ಟಿತು—ಪ್ರತ್ಯೇಕ ಪ್ರಾಂತಯಾಚನಾ ಮಹಾಮಂತ್ರ! ಈ ಮುಖಂಡರು ಪ್ರಾಂತವನ್ನು ತಂದುಕೊಡಲಿಲ್ಲವೆಂದು ಜನತೆ ಅನುಭವ ಬಂದಮೇಲೆ ಆಡಿಕೊಂಡಿತು. ನೆಚ್ಚಿದ ಕೋಣ ಈಯಲೇ ಇಲ್ಲ. ಅಂತೂ ಜನರು ಮನೆ ಮುಟ್ಟುವ ಒಳಗಾಗಿ ಜನಗಣಮನ ಆಯಿತು. ಸಭೆಯ ವಿಸರ್ಜನೆ ಆದರೂ ಮುಖ್ಯ ಅತಿಥಿಗಳ ವಿಸರ್ಜನೆಯಾಗಲಿಲ್ಲ. ಹಲವರು ಸುತ್ತಲೂ ಗುಂಪುಗೂಡಿದರು. ಸಭೆ ಅಲ್ಲಲ್ಲಿ ನಿಲ್ಲುತ್ತ ಮೆಲ್ಲಮೆಲ್ಲನೆ ಮುಂದೆ ಸರಿದು ಮ್ಯುನಿಸೀಪಾಲ್ಟಿಯ ಕಸದ ಬಂಡಿಯಂತೆ ರಸ್ತೆಯಲ್ಲಿ ಸಾಗಿತು. ಗುಂಪು ಕ್ರಮೇಣವಾಗಿ ಕರಗಿತು. ಮುಖ್ಯ ಅತಿಥಿಗಳು ಅವರಿವರಿರಲಿಲ್ಲ. ಪರ ಊರಿನವರಾದರೂ ಉಮೇಶನ ಸಾಕ್ಷಾತ್ ಸಹಕೈದಿಗಳು, ವೆಲ್ಲೂರಿನ ಅರಮನೆಯಲ್ಲಿ. ಇವರನ್ನು ಮಾತ್ರ ಮರೆಯಲು ಉಮೇಶನಿಗೆ ಸಾಧ್ಯವೇ ಇರಲಿಲ್ಲ. ಜೇಲಿನಲ್ಲಿ ಜರುಗಿದ್ದ ಬದನೇಕಾಯಿಯ ಘಟನೆಯಲ್ಲಿ ಇವರೇ ಮೊಟ್ಟಮೊದಲ ಪುಢಾರಿ. ಹುಳಿಯಲ್ಲಿನ ಹೋಳಿಗಾಗಿ ಮಹಾಯುದ್ಧವಾದಾಗ ಇನ್ನೊಬ್ಬ ಸತ್ಯಾಗ್ರಹಿಯ ಮೂಗಿಗೆ ಗುದ್ದಿ ದಳದಳ ರಕ್ತವನ್ನು ಇಳಿಸಿದ ಶಾಂತಿದೂತರಿವರು. ಈ ಸಿಹಿ ನೆನಪೊಂದನ್ನು ಕೊಟ್ಟು ಮನೆಗೆ ಹೋದರೆ ಆಯಿತು ಎಂದೆನಿಸಿತು ಕಿಡಿಗೇಡಿ ಉಮೇಶನಿಗೆ. ಆದರೆ ಈಗ ಅವರು ಬಹು ಸುಧಾರಿಸಿರಬೇಕೆನಿಸಿತು ಅವನಿಗೆ. ನಮ್ಮಲ್ಲಿಯ ಜಾತೀಯತೆ ಮೊದಲು ಹೋಗಬೇಕು ಎಂದವರು ವೇದಿಕೆಯಿಂದ ಘಂಟಾಘೋಷವಾಗಿ ಗರ್ಜಿಸಿದಾಗ ಉಮೇಶ ತನ್ನ ಲೆಕ್ಕದಲ್ಲಿ ಅವರ ಬೆಲೆಯನ್ನೇರಿಸಿದ್ದ. ಬದಿಯಿದ್ದವರೊಟ್ಟಿಗೆ ಆ ಅತಿಥಿಗಳು ಬಹು ಮೆಲುದನಿಯಲ್ಲಿ ಮಾತನಾಡಿ

ದರು. ಬೇಡವೆಂದರೂ ಹರುಕುಮುರುಕಾಗಿ ಉಮೇಶನ ಕಿವಿಗೆ ಆ ಮಾತು ಗಳು ಬಿದ್ದವು.

" ಆಗ ಮಾತಾಡಿದವಂದು ಯಾವ ಜಾತಿ ? "

"..........ಆದರೂ ಪರವಾ ಇಲ್ಲೇಳ್ರಿ, ನಮ್ಮ ಪೈಕೀನೇ ಅವನೂನು " ಎಂದು ಸಿಫಾರಸು ಮಾಡಿದರು ಬದಿಗಿದ್ದವರು.

" ಛೇ ನಿಮ ! ಅಲ್ಲೇ ತಪ್ಪಿದಿರಿ ನೀವು. ಆ ಜಾತಿ ಅಂದ್ರಾತು ನೋಡ್ರಿ. "

ಉಮೇಶ ಗರ್‍ರೆಂದು ತಿರುಗಿ ಈ ಹೊಲೆಯರಿಂದ ಬಹುದೂರ ಸಾಗಿದ. ಹೆಡೆ ತುಳಿಸಿಗೊಂಡ ಹಾವಿನಂತಾಯಿತು ಆವನ ಮನಸ್ಸು, ಈ ಜಾತೀಯ ಭೂತದ ದರ್ಶನವಾದ ಕೂಡಲೆ ತನ್ನ ಹಲವು ಕಹಿ ಅನುಭವಗಳು ಮನದ ಮೇಲಿನ ಪರೆಯಲ್ಲಿ ಬಂದವು. ಮದರಾಸಿನಲ್ಲಂದು ಮುಖ್ಯಮಂತ್ರಿಗಳ ಚುನಾವಣೆ ಜರುಗಿದಾಗ ಪ್ರಕಾಶಂರನ್ನು ಸೋಲಿಸಿ ಓಮೆಂಡೂರರನ್ನು ಗೆಲಿಸಿದ ಕಾಂಗ್ರೆಸ್ ಬಾಯಿಗಳು ' ಡೌನ್ ವಿತ್ ಬ್ರಾಹ್ಮಿನ್ಸ್ ' ಎಂದೇಕೆ ಕೂಗಾಡಿದವು ? ತನ್ನಂತೆ ಜಾತೀಯತೆಯ ಕೋಟೆಯನ್ನು ದಾಟಿದವರೆಂದು ತಾನು ತಿಳಿದ ನಾಲ್ಕಾರು ವೀರಶೈವ ತರುಣರೊಡನೆ ಉಮೇಶ ತಿರುಗಾಡಿ ದ್ದನ್ನೇ ಸಹಿಸಲಾರದ ಹಲವು ಬ್ರಾಹ್ಮಣೋತ್ತಮರು " ಇನ್ನೇನಪಾ ಉಮೇಶ, ನೀನೂ ಅಯ್ಯಾಚಾರ ಮಾಡಿಸಿಕೊಂಡು ಬಿಡು " ಎಂದು ನಗೆ ಯಾಡಿ ಕೆಣಕಿದ್ದರು. ಕಡೆಗೊಂದು ದಿನ ತಾನು ಜಾತ್ಯಾತೀತರೆಂದು ತಿಳಿದ ಗೆಳೆಯರೇ ಅಸಲು ಜಾತಿ ಮುಲ್ಲಾಗಳೆಂಬ ಸತ್ಯ ತನ್ನ ಮನಸ್ಸಿಗೇ ಹೊಳೆದಾಗ, ತನ್ನ ಬಗ್ಗೆಯೂ ಇದೇ ತೆರನಾದ ಅನುಮಾನಗಳು ಆ ನೆಚ್ಚಿನ ಗೆಳೆಯರ ತಲೆಗಳಲ್ಲಿಯೂ ಸುಳಿದಾಗ, ಉಮೇಶನಿಗೆ ವಜ್ರಾಘಾತವಾಯಿತು. ಹೆತ್ತ ತಾಯಿಯನ್ನು ಹೊರದೂಡಿ ಕೈಹಿಡಿದ ಮಡದಿಯನ್ನು ಸಾಧ್ವಿಯೆಂದು ತಿಳಿದವನಿಗೆ ಒಮ್ಮೆಲೆ ಹೆಂಡತಿಯ ವ್ಯಭಿಚಾರದ ಅರಿವು ಆದಂತಾಯಿತು. ಅವರಿವರನ್ನು ಬೈಯುವ ಮೊದಲು ತಾನು ಏನೆಂಬುದನ್ನು ತಿಳಿಯುವದು ಅತ್ಯವಸರವೆನಿಸಹತ್ತಿತು ಉಮೇಶನಿಗೆ. ತನ್ನ ಹೃದಯವನ್ನು ಛೇದಿಸಿ ಹುಡುಕಿಕೊಳ್ಳಬೇಕೆನಿಸಿತು. ತನ್ನ ಪ್ರತಿಯೊಂದು " ರಕ್ತಕಣವನ್ನೂ ಅಗ್ನಿ ಪರೀಕ್ಷೆಗೆ ಅಣಿಮಾಡಿ ನೋಡಬೇಕೆನಿಸಿತು. ಕತ್ತೆಯಂತೆ ಮೈತುಂಬ ಕಸ ಹೊತ್ತು ಸ್ವಚ್ಛತೆಯ ಮೇಲೆ ಉಪನ್ಯಾಸ ಮಾಡುವವರು ಆತ್ಮದ ವೈರಿಗಳು.

ಹೃದಯದಲ್ಲಿ ಜಾತೀಯತೆಯ ಹಾವನ್ನು ಪೋಷಿಸಿ, ವೇದಿಕೆಯ ಮೇಲೆ ವೈರಾಗ್ಯವನ್ನು ಬೊಗಳುವ ಮಹಾಮಹಾ ಮುಖಂಡರಿಗೆ ಯಾವ ನರಕ ಸಿದ್ಧವಾಗಿದೆಯೋ ಉಮೇಶನಿಗೆ ತಿಳಿಯದಾಯಿತು.

ಈ ಜಾತೀಯತೆ ಯಾವ ಕ್ಷೇತ್ರದಲ್ಲಿಲ್ಲವೆಂಬುದೇ ಹೊಳೆಯಲಿಲ್ಲ, ಅವನ ಅಲ್ಪ ಮತಿಗೆ. ಹೀಗೆಯೇ ತಲೆಯನ್ನು ತಿನ್ನುತ್ತ ಉಮೇಶ ಮನೆಯನ್ನು ಸೇರಿದ. ಕದ ಮುಚ್ಚಿದ್ದಿತು. ರಾಘವೇಂದ್ರನ ಊಟ ಸಾಗಿರಬೇಕೆಂದು ಊಹಿಸಿ, ಹೊರ ಕಟ್ಟೆಯ ಮೇಲಿದ್ದ ಕಲ್ಲುಬೆಂಚಿನ ಮೇಲೆ ಕಾಲುಚಾಚಿ ಕುಳಿತ. ಯೋಚಿಸುತ್ತ ಹಾಗೆಯೇ ಅಡ್ಡಾಗಿ ಕಣ್ಣು ಮುಚ್ಚಿದ. ನಿದ್ರೆ ಬಂದಿತು ಕಣ್ಣಿಗೆ, ಮನಸ್ಸಿಗಲ್ಲ.

ಇದ್ದಕ್ಕಿದ್ದಂತೆ ವಿಕಾರಾಕಾರದ ನೆಳಲಿನ ಸಂಚಾರವಾಯಿತು. ಒಂದರ ಹಿಂದೊಂದು ಧುಯ್ ಧುಯ್ ಎನ್ನುತ್ತ ನೂರಾರು ಅವೇನೋ ಬಂದವು. ದಿಟ್ಟಿಸಿ ನೋಡಿದ. ಕಣ್ಣುಜ್ಜಿ ನೋಡಿದ. ಭೂತಗಳು! ಒಂದಕ್ಕೂ ರುಂಡ ಇರಲಿಲ್ಲ. ಬರೀ ದಂಡಗಳು ಬಂದು ಕರಾಳನೃತ್ಯ ಮಾಡಹತ್ತಿದವು! ಉಮೇಶನಿಗೊಮ್ಮೆ ಮೈ ಜುಮ್ಮೆಂದಿತು. ಎದೆಗುಂದದೆ ಇವನ್ನು ಕೆಣಕಲೇ ಬೇಕೆಂದು ನಿರ್ಧರಿಸಿದ. ಸಾಹಸದಿಂದ ಸಹಾಯಕ್ಕಾಗಿ ಧೈರ್ಯವನ್ನು ಕರೆದ.

"ಯಾರು ನೀವು?" ಗದರಿಸಿದ.

ಒಂದೇ ಬಾರಿಗೆ ಎಲ್ಲವೂ ಪಕಪಕ ನಕ್ಕವು. ಉಮೇಶನ ಕೋಪ ಇಮ್ಮಡಿಯಾಯಿತು. ಈಗ ಅಂಜುವದು ಸರಿಯಲ್ಲವೆಂದು ತೋಚಿತು. ಕಾಡೆತ್ತನ್ನು ಹಿಡಿಯುವಾಗ ಕೋಡಿನಿಂದಲೇ ಹಿಡಿಯಬೇಕು.

"ನೀವಾರು ಹೇಳುವಿರೋ ಇಲ್ಲವೋ?" ಎಂದು ಏರಿ ಅವುಗಳ ಮೇಲೆಯೇ ಹೋದ. ಹಿರಿಭೂತವೊಂದು ಕಿಸಿ ಕಿಸಿ ನಗುತ್ತ ಉತ್ತರಿಸಿತು.

"ನಾವು ನಿಮ್ಮ ಜಾತಿಗಳಪ್ಪಾ ಉಮೇಶರಾಯಾ" ಮಾತಿನಲ್ಲಿ ಅಣಕವಿದ್ದಿತು.

"ಜಾತಿಗಳು!"

"ಹೌದು. ನಾವು ಸತ್ತು ಬಹು ವರ್ಷಗಳಾದವು. ಈಗ ನಮಗೆ ಪಿಶಾಚಿಯ ಜನ್ಮ ಬಂದಿದೆ."

“ ಜಾತೀಯ ಭೂತಗಳು ! ಇಲ್ಲಿಗೇಕೆ ಬಂದಿರಿ ? ನಡೆಯಿರಿ ಇಲ್ಲಿಂದ. ”

“ ಎಲ್ಲಿಗೆ ನಡೆಯುವದು ? ”

“ ನೀವು ಯಾವಾಗಲೂ ಇರುವದೆಲ್ಲಿ ? ”

“ ಇದೇನು ಉಮೇಶಾ, ಹೀಗೆ ಕೇಳುತ್ತಿ ? ನಾವಿಲ್ಲದ ಸ್ಥಳ ಎಲ್ಲಿದೆ ? ಎಲ್ಲರ ಮನೆ, ಮನ, ಮಠಗಳಲ್ಲಿದ್ದೇವೆ. ಶಾಲಾ ಕಾಲೇಜುಗಳಲ್ಲಿದ್ದೇವೆ, ಸರಕಾರ ವ್ಯವಹಾರಗಳಲ್ಲಿದ್ದೇವೆ. ಸಾಹಿತ್ಯದಲ್ಲಿಯೂ ಇದ್ದೇವೆ........ ”

“ ರಾಜಕಾರಣದಲ್ಲಿ ? ”

“ ಅಹಹಹ ! ಅದೇ ನಮ್ಮ ತವರಮನೆಯಪ್ಪಾ. ”

ಉಮೇಶ ತುಟಿ ಕಡಿದ ! “ ನೀವು ಇಲ್ಲಿಂದ ಹೊರಡಿ. ಇಲ್ಲವಾದರೆ ತರುತ್ತೇನೆ ನೋಡಿ ಗಾಂಧಿ ಟೋಪಿ ” ಎಂದು ಬೆದರಿಕೆ ಹಾಕಿದ ಉಮೇಶ.

ದೆವ್ವಗಳೆಲ್ಲವೂ ಗಹಗಹಿಸಿ ನಕ್ಕುಬಿಟ್ಟವು. ಉಮೇಶನ ಮುಖ ಚಿಕ್ಕದಾಯಿತು.

“ ಆ ಕಾಲ ಅಂದೇ ಹೋಯಿತೋ ಹುಚ್ಚರಾಯಾ ! ನಿನ್ನ ಗಾಂಧೀ ಟೊಪ್ಪಿಗೆಗೆ ನಾವು ಅಂಜುವೆವೇನು ? ಅದರ ಬುಡದಲ್ಲಿಯೇ ಈಗ ನಮ್ಮ ಸ್ವಂತ ಮನೆ, ತಿಳಿಯಿತೇ ? ” ಪುನಃ ಅಣಕಿನ ನಗುವೊಂದನ್ನು ಬೀರಿ ಇಡೀ ವಾತಾವರಣವನ್ನೇ ವಿಷವಾಯುವಿನಿಂದ ಕಲ್ಮಷಮಾಡಿ ಒಂದೊಂದೇ ಮಾಯವಾದವು. ಉಮೇಶ ಎದೆ ಮುಟ್ಟಿ ನೋಡಿಕೊಂಡ. ಹೃದಯಕ್ರಿಯೆ ಇನ್ನೂ ನಿಂತಿರಲಿಲ್ಲ. ‘ ಇನ್ನೂ ಜೀವವಿದೆ, ಜೀವವಿರುವ ವರೆಗೂ ಆಶಾಕಿರಣವಿದೆ ’ ಎಂದೆನಿಸಿತು ಉಮೇಶನಿಗೆ.

ಊಟಕ್ಕಿನ್ನೂ ಬರಲೇ ಇಲ್ಲವೆಂದು ಕಾದು ಕಾದು ಬೇಸತ್ತು ಕಾವೇರಿ ಊಟ ಮುಗಿಸಿ ಮಲಗಿದಳು. ನಾಗಮ್ಮ ನೀರು ಕುಡಿದು ಬಂಡೆಯ ಮೇಲೆಯೇ ಅಡ್ಡಾದಳು. ರಾಘವೇಂದ್ರ ಗೊರಕೆ ಹೊಡೆಯುತ್ತಿದ್ದ.

ಹದಿನೈದು ಎಕರೆ ಭೂಮಿ ತನಗಾಗಿ ಕಾದು ಕುಳಿತಿದ್ದಿತು, ವೆಲ್ಲೂರ ಅರಮನೆಯ ಕೃಪೆಯಿಂದ. ‘ ನನಗೇಕೆ ಅದರ ಆಸೆ. ನಾನಂತೂ ಅದನ್ನು ಉಳುವಂತಿಲ್ಲ ಬೆಳೆಯುವಂತಿಲ್ಲ ’ ಎಂದು ಉಸಿರುಬಿಟ್ಟ ಉಮೇಶ. ‘ ಭೂಮಿ ಉಳುವವನದು ’ ಎಂದು ವೇದಿಕೆಯಿಂದ ಎಲ್ಲರೂ ಒದರುವ ಮಾತು. ಹಾಗಾದರೆ ಇಂದು ಜೇಲು ಕಂಡು ಜಹಗೀರು ಪಡೆದ ಎಮ್ಮೆಲೆ

ಗಳು ಮೇಯಲಿಕ್ಕೇನು ಈ ಭೂಮಿಗಳು? ಲಕ್ಷಗಟ್ಟಲೆ ಗಳಿಸಿಟ್ಟ ಮಾನ್ಯ ಮಂತ್ರಿಗಳು ಈ ಕೊಂಚಕ್ಕಾಗಿ ಕೈಯೊಡ್ಡಿಯೂ ಇನ್ನೂ ಮಾನ್ಯರೇ ಏನು? ಕಲ್ಲುಬೆಂಚಿನ ಮೇಲೆ ಒರಗಿದ್ದ ಉಮೇಶನ ತಲೆಯಲ್ಲಿ ತರಂಗತರಂಗವಾಗಿ ಬರುತ್ತಿದ್ದ ವಿಚಾರಗಳ ಜ್ವಾಲಾಮುಖಿ ಎದ್ದಿತು. ಮಂತ್ರಿಗಳೆಂದರೆ ಅವ ರೇನು ದೇವರೇ? ಅಧಿಕಾರದ ದುರುಪಯೋಗದ, ಲಂಚ ಅನ್ಯಾಯಗಳ ಆರೋಪಗಳು ಅವರ ಮೇಲೆಯೇ ಇವೆ. ಆದರೆ ಅವುಗಳನ್ನು ವಿಚಾರಿಸುವ ಮನಸ್ಸು ಮಾತ್ರ ಯಾವ ಶಂಕರ ದೇವರಿಗೂ ಇಲ್ಲ. ಸೊಸೆ ಕಾಲು ಚಾಚಿ ಕುಳಿತರೆ ಕಣ್ಣು ಬಿಡುವ ಅತ್ತೆಗೆ ಮಗಳ ಹಾವರ ಮಾತ್ರ ಕಾಣದು. ತಾಯಿಯ ಮುಂದೆ ಸೋದರಮಾವನನ್ನು ಆಡಿಕೊಂಡರೆ ಆಗುವದಿಷ್ಟೇ ಅಲ್ಲದೆ ಮತ್ತೇನು? ಭಾರತದಲ್ಲಿ ಖುರ್ಸ್ರೋ ಮರಿಗಳಿಗೆ ಅಡಚಣೆಯೇ? ಆದರೆ ಧೀರೋದಾತ್ತ ಜಿನ್ನಾ ಸಾಹೇಬರು ಖುರ್ಸ್ರೋನನ್ನು ಖತಂ ಮಾಡಿ ಜಗತ್ತಿಗೇ ಹಾಕಿಕೊಟ್ಟ ಹಿರಿ ಹಾದಿಯನ್ನು ತುಳಿಯುವ ಗಂಡುತನ ಎಲ್ಲ ರಿಗೂ ಸಾಧಿಸಲು ಸಾಧ್ಯವೇ? ಕಾಳಸಂತೆಯನ್ನು ಖಂಡಿಸದವರಿಲ್ಲ. ಹೈದರಾ ಬಾದಿನ ಗಡಿಬಿಡಿಯಲ್ಲಿ ರಾಷ್ಟ್ರದ ವೈರಿಗಳಿಗೆ ಸೀಮೆ ಎಣ್ಣೆ, ಪೆಟ್ರೋಲೆಣ್ಣೆ ಒದಗಿಸಿ ದುಂಡಾದವರು ಗಾಂಧೀ ಫಂಡಿಗೆ ಹೇರಳವಾಗಿ ಕೊಟ್ಟು ನಮ್ಮ ನಾಯಕರಾದರು. ಸಾಕು ಇನ್ನು ಈ ಪಾಪದ ಯಾದಿ! ರಾಜಕಾರಣಿಗಳ ಈ ಪತನವನ್ನು ನೆನೆದಾಗ ಉಮೇಶನಿಗೆ ಹೇಸಿಗೆ ಎನಿಸಿತು. ಪವಿತ್ರ ಸ್ಥಳಗಳಲ್ಲಿ 'ನಾಯಿ, ಜೋಡುಗಳಿಗೆ ಪ್ರವೇಶವಿಲ್ಲ' ಎಂದು ಬೋರ್ಡು ಹಾಕುವ ಬದಲು 'ರಾಜಕಾರಣಿಗೆ ಪ್ರವೇಶವಿಲ್ಲ!' ಎಂದೇಕೆ ಬೋರ್ಡು ಹಾಕಕೂಡದು ಎಂದೆ ನಿಸಿತು ಉಮೇಶನ ನೊಂದ ಮನಸ್ಸಿಗೆ.

ಉಮೇಶನ ಕಣ್ಣು ನೀರೊಡೆಯಿತು. ಹೃದಯ ಕಲಕಿ ಕಂಬನಿಯ ಕಾರಂಜಿ ಹೊರಸೂಸಿ ಧಾರೆಯಾಗಿ ಹರಿಯಿತು. ದೃಷ್ಟಿ ಮಸಕಾಗಿ ದೊಡ್ಡೊಂದು ಪ್ರಶ್ನೆಚಿನ್ಹೆ ಸ್ಪಷ್ಟವಾಗಿ ಮನದಲ್ಲಿ ಮೂಡಿತು. ಮಾನವ ವರ್ಗಕ್ಕೆ ಮೋಕ್ಷ ವಿದೆಯೇ? ಇಲ್ಲ ಇಲ್ಲ, ಎಂದು ಅವನ ಹೃದಯ ನಿರಾಶೆಯಿಂದ ಆರ್ಭಟಿಸಿ ಅತ್ತಿತು. ಚೀರಿತು!

ಇದೆ ಎಂದೊಂದು ದಿವ್ಯವಾಣಿ ಎತ್ತಲಿಂದಲೋ ಕೇಳಿಸಿತು. ಇದೆ? ಚೇತರಿಸಿಕೊಂಡೆದ್ದು ನೀರುಗಣ್ಣಿನಿಂದ ಸುತ್ತಲೂ ನೋಡಿದ. ಯಾರೂ

ಇಲ್ಲ. ಯಾರವರು ಇದೆ ಎಂದವರು ? ನಾನು ಕೇಳಿದುದು ಆಕಾಶವಾಣಿಯೇ ? ತಲೆ ಎತ್ತಿ ಮೇಲೆ ನೋಡಿದ. ಮುಂಗೈಯಿಂದ ಕಣ್ಣು ಜ್ಜಿ ಮುಗಿಲು ನೋಡಿದ. ಪ್ರಶಾಂತವಾದ ರಾತ್ರಿಯ ತಣ್ಣನ ಗಾಳಿ ಮುಖಕ್ಕೆ ಸೋಕಿತು. ನಿಸರ್ಗ ಮಾತೆಯ ಉಸಿರು ಬಡಿದು ಮನಮುಖಗಳು ಪ್ರಫುಲ್ಲಿತವಾದವು. ಕಾದ ತಲೆ ಕಿವಿಗಳು ತಂಪಾದವು. ಎತ್ತಣಿಂದಲೋ ಒಂದು ಹಿತವಾದ ಬೆಳಕು ಹರಿದು ಬಂದಿತು. ಕೀಲುಬೊಂಬೆಯಂತೆ ಅತ್ತ ತಿರುಗಿದ. ಕೆಂಪು ಚಿಕ್ಕೆ !

## ಇನ್ನೊಂದು ಮಾತು

ಇಲ್ಲಿಗೆ ಮುಗಿಯಿತೇನು ‘ ದಾಸಕೂಟ ’ ಎಂದು ಓದುಗರ ಎದೆಯಲ್ಲಾಗಲಿ, ವಿಮರ್ಶಕರ ಗದೆಯಿಂದಾಗಲಿ ಸಹಜವಾಗಿ ಬರಬಹುದಾದ ಪ್ರಶ್ನೆ. ಜಗತ್ತಿನ ಆಗು-ಹೋಗುಗಳಲ್ಲಿ ಜೀವನಸಮಸ್ಯೆಗಳು ಅನಂತ. ಹುಟ್ಟು ಸಾವುಗಳು ವ್ಯಕ್ತಿಗಳಿಗೆ ಮಾತ್ರವೇ ಆಗಲಿ, ವಿಚಾರಪರತೆಗಲ್ಲ. ಉಮೇಶನೇ ವಿಚಾರಪರತೆಯ ಸಾಕ್ಷಾತ್ಕಾರವೆಂದ ಮೇಲೆ ಉಮೇಶನ ಕತೆಗೆ ಕೊನೆಯಾದರೂ ಎಲ್ಲಿ ? ನಿರಾಶೆಯಿಂದ ಉಸಿರು ಕಳೆದುಕೊಂಡು ಕೈ ಮುಚ್ಚಿ ಕೂಡುವದು ಆತ್ಮಹತ್ಯದ ಮಾರ್ಗ. ಇದಂತೂ ಉಮೇಶ ಎಂದೂ ತುಳಿಯದ ಹಾದಿಯೆಂದಾದ ಮೇಲೆ ಪ್ರಗತಿಗೆ ಅನುವು ಇದೆ. ಕನ್ನಡಿಗರ ಕಣ್ಣ ಮುಂದೆ ಮುಂದಿನ ಕತೆಯನ್ನು ತರುವ ಪುಣ್ಯ ಉಮೇಶನಿಗೆ ದೊರೆತೀತು—ಓದುಗರ ಆಶೀರ್ವಾದ ಕೃಪೆಗಳಿಂದ ಎಂಬ ಆಸೆ ಇದೆ. ಆಸೆ ಗುಡ್ಡದಷ್ಟಿರಲಿ, ಕೆಲಸ ಕಡ್ಡಿಯಷ್ಟಾದರೂ ಆದೀತು !



